ಡಿಸೆಂಬರ, ೧೯೫೬



ಬೆಲೆ : ೧೨ ಆಣೆ

# ಕಸ್ತೂರಿ

ಜ್ಞಾನ ಮತ್ತು ಮನೋರಂಜನ

# ನಿರುದ್ಯೋಗವನ್ನು ನಿವಾರಿಸಲು

# ಸಹಾಯ ಮಾಡಿರಿ

**ಕಡ್ಡಿ ಪೆಟ್ಟಿಗೆ—** ಬಿದಿರಿನಿಂದ ಇವನ್ನು
○ ತಯಾರಿಸುವದರಿಂದ ಹೆಚ್ಚು
ಹೊತ್ತು ಉರಿಯುವವು.
ಬೆಲೆ : ಡಝನ ಒಂದಕ್ಕೆ ೦-೮-೦

**ಗಾಣದ ಎಣ್ಣೆ—** ನಮ್ಮ ಗಾಣದ ಶುದ್ಧ
○ ಎಣ್ಣೆಯನ್ನೆ ಉಪಯೋಗಿಸಿರಿ.
ಪ್ರತಿ ದಿನ ತಾಜಾ ಸಿಗುವದು.
ಬೆಲೆ : ಸೇರಿಗೆ ೦-೬-೬.

**ಸಬಕಾರ—** ಶುದ್ಧವಾದ ರೀತಿಯಲ್ಲಿ
○ ತಯಾರಿಸಿದ್ದು ಬಟ್ಟೆಗಳ ತಾಳಿಕೆ
ಹಾಗೂ ಸ್ವಚ್ಛತೆ ಹೆಚ್ಚುವವು.
ಬೆಲೆ : ಚಿಪ್ಸ (ಪೌಂಡಿಗೆ)
೦-೧೦-೬, ಬಾರ ೦-೧೪-೦,
ವಡಿ ೦-೪-೬.

**ಅಂಬರ ಚರಕ—** ಖಾದಿ ಉದ್ಯೋಗ
○ ದಲ್ಲಿ ಕ್ರಾಂತಿಯನ್ನುಂಟುಮಾಡಿ
ಮೊದಲಿನ ನಾಲ್ಕು ಪಟ್ಟು
ಉತ್ಪನ್ನ ಕೊಡುವ **ಅಂಬರ
ಚರಕ,** ತಾಸಿಗೆ ೧,೦೦೦ ಗಜ
ನೂಲನ್ನು ಕೊಡುವದು.

**ಚಾಪೆಗಳು—** ಕಸವೆಂದು ಗಣಿಸಲಾದ
○ ಹುಲ್ಲಿನ ನಾರಿನ ಈಚಲದ ಅನೇಕ
ಬಗೆಯ ಸುಂದರ ಚಾಪೆಗಳು
ದೊರೆಯುವವು.

**ಬಡಿಗತನ—** ಈ ಕಲೆಯು ಪುರಾತನವಿ
○ ದ್ದರೂ ಎಲ್ಲ ತರದ ಹೊಸ ಬಗೆಯ
ಬೇಡಿಕೆಯನ್ನು ಪೂರೈಸುವ ತರ
ಬೇತಿಯನ್ನೂ ಕೊಡಲಾಗುತ್ತಿದೆ.

**ಕಾಗದ—** ಯಂತ್ರದ ಸಹಾಯವಿಲ್ಲದೆ
○ ತಯಾರಿಸಲಾದ ಕಾಗದವು ಬಹಳ
ದಿನಗಳ ವರೆಗೆ ತಾಳುವದು.
ಯಾವಾಗಲೂ ಸಂಗ್ರಹದಲ್ಲಿಡಲ್ಪ
ಡಲಾಗಿದೆ.

## ಆದರ್ಶ ಗ್ರಾಮೋದ್ಯೋಗ ಕೇಂದ್ರ

**ರಾಮತೀರ್ಥ** (ಜಮಖಂಡಿ)

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೇ ದಿನಾಂಕ ಪ್ರಕಟವಾಗುವದು.

ಮುಖ್ಯ ಸಂಪಾದಕರು :
**ಮೊಹರೆ ಹನುಮಂತರಾಯರು**

ಪ್ರಕಾಶಕರು :
**ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ**

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಚಿತ್ರಕಾರರು :
**ಸದಾಶಿವ**
**ಮಾರ್ಶಲ್ ಡಿಸೋಜ**

ಮುಖಪುಟ ಚಿತ್ರ :
**ಕೆ. ಎಸ್. ಪೋತದಾರ**

ಚಂದಾ ದರ :
ವಾರ್ಷಿಕ (ಅಂಚೆಸಹಿತ) ರೂ. ೬-೦-೦
ಬಿಡಿ ಸಂಚಿಕೆ — ರೂ. ೦-೧೦-೦

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನುಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಪ್ರತಿ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರ ವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

## ಈ ಸಂಚಿಕೆಯಲ್ಲಿ

# ಓದುಗರ ಓಲೆಗಳು . . .

[ಕನ್ನಡ ಪತ್ರಿಕೆಗಳ] ಅಸಫಲತೆಗೆ ಆರ್ಥಿಕ ಸ್ಥಿತಿ, ವಾಚಕ ವೃಂದದ ಉದಾಸೀನತೆ ಮತ್ತು ಸಂಪಾದಕ ಮತ್ತು ವ್ಯವಸ್ಥಾಪಕ ಮಂಡಳಿಗಳ ಸಂಕುಚಿತ ಭಾವನೆಗಳೇ ಪ್ರಮುಖ [ಕಾರಣ]ಗಳಾಗಿದ್ದವು... ಆದರೆ "ಕಸ್ತೂರಿ"ಯ ಪ್ರಥಮ ಸಂಚಿಕೆಯನ್ನು ವೀಕ್ಷಿಸಿದೊಡನೆಯೇ. . . . ನನಗೆ ಅತೀವ ಆನಂದವೂ ಹೆಮ್ಮೆಯೂ ಆಯಿತು.

— ಕೆ. ಎಸ್. ತಡಕೋಡ, ಧಾರವಾಡ

**[ಓದುಗರನ್ನು ನಾವು ದೂರುವುದಿಲ್ಲ. ಒಳ್ಳೆಯದು ಬಂದಾಗ ಸ್ವಲ್ಪ ತಡವಾಗಿಯಾದರೂ ಜನ ಅದನ್ನು ಗುರುತಿಸುತ್ತಾರೆಂಬ ವಿಶ್ವಾಸ ನಮಗಿದೆ. — ಸಂ.]**

"ಕಸ್ತೂರಿ"ಯ ಲೇಖನಗಳು ಉತ್ತಮವಾಗಿವೆ......ಬೆಲೆ [ಮಾತ್ರ] ಎಂಟಾಣೆಯಾದರೆ ತಿಂಗಳಿಂದ ತಿಂಗಳಿಗೆ ಹೆಚ್ಚು ಹೆಚ್ಚು ವಾಚನೀಯವಾಗುತ್ತ ಹೋಗುವದರಲ್ಲಿ ಸಂದೇಹವಿಲ್ಲ.

— ಆರ್. ಆರ್. ಜೋಶಿ

**[ಎಂಟಾಣೆಯ ದರದಲ್ಲಿ "ಕಸ್ತೂರಿ" ಕಡಿಮೆ ಕಡಿಮೆ ವಾಚನೀಯವಾದೀತೆಂಬ ಭಯ ನಮಗಿದೆ. — ಸಂ.]**

ಬಾಲ ಮಹಿಳಾವಿಭಾಗಗಳು ಇದ್ದರೆ ಒಳಿತು.

— ಮ. ಬಿ. ನಂದರಗಿ, ಹುಬ್ಬಳ್ಳಿ

**[ಯಾವುದೇ ವರ್ಗಕ್ಕೆ ವಿಶಿಷ್ಟ ವಿಭಾಗಗಳನ್ನು ಪ್ರಾರಂಭಿಸುವದು ಡೈಜೆಸ್ಟ ಪದ್ಧತಿಯಲ್ಲ. ಈ ವರ್ಗಗಳಿಗೂ ರುಚಿಸುವ ಲೇಖನಗಳನ್ನು ಕೊಡಲು ಹೆಣಗುತ್ತೇವೆ. — ಸಂ.]**

"ಕಸ್ತೂರಿ"ಯು ಕನ್ನಡಿಗರ ಜ್ಞಾನದಾಹಕ್ಕೆ ಸಮಯೋಚಿತ ಕಾಣಿಕೆ....ಅಭಿನಂದನೆಗಳು.

— ಎಂ. ಎಸ್. ಶಂಕರ ನಾರಾಯಣರಾವ್, ಬೆಂಗಳೂರು

ಇದು ಇಂಗ್ಲೀಷ್ ರೀಡರ್ಸ್‌ಡೈಜೆಸ್ಟಿನ ಕನ್ನಡ ಕಾಪಿಯಂತಿದೆ . . . . ಕನ್ನಡಿಗರಿಗೆ ಹೇಗೆ ರುಚಿಸುತ್ತದೋ ಹೇಳಲಾಗುವದಿಲ್ಲ. ನನಗಂತೂ ಸರಿ ಬರಲಿಲ್ಲ . . . . ಹೆಚ್ಚು ಕತೆ ಕವನಗಳನ್ನು ಸೇರಿಸಿ ಹೊಸ ಹೊಸ ಸಾಹಿತಿಗಳನ್ನು ಆಯ್ದು ಕೊಟ್ಟಿದ್ದರೆ ಹೆಚ್ಚು ಆಕರ್ಷಣೀಯವಾಗುತ್ತೆ. — ಎನ್. ಜಿ. ನಾಯಕ, ಬೆಂಗಳೂರು

**[ಡೈಜೆಸ್ಟಿನಂತೆ ಮಾಡಬೇಕೆಂಬುದೇ ನಮ್ಮ ಉದ್ದೇಶ. ಶ್ರೀ ನಾಯಕರ ಸೂಚನೆ ಒಪ್ಪಿದರೆ ಅದು ವಿಷಯವಿಸ್ತಾರಕ್ಕೆರವಾಗಿ ಸಾಹಿತ್ಯಕ ಪತ್ರಿಕೆಯಾದೀತೆಂದು ನಮ್ಮ ಮತ. — ಸಂ.]**

ನಿಮ್ಮ ಎರಡನೇ ಸಂಚಿಕೆಯಲ್ಲಿ ಒಂದೇ ವಿಚಾರ ದೃಷ್ಟಿಯ ಎರಡಕ್ಕಿಂತ ಹೆಚ್ಚು ಲೇಖಗಳಿವೆ. ಉದಾಹರಣೆಗೆ ಕ್ಷೇತ್ರ ಪರಿಚಯ. . . .

— ರಂಗಸ್ವಾಮಿ, ಅರಸೀಕೆರೆ

**[ಓದುಗ ರಂಗಸ್ವಾಮಿಯವರು ಸರಿಯಾಗಿಯೇ ಹೇಳಿದ್ದಾರೆಂದೊಪ್ಪುತ್ತೇವೆ. ಇಂಥ ಪ್ರಸಂಗಕ್ಕೆ ಆಸ್ಪದವಾಗದಂತೆ ಎಚ್ಚರ ವಹಿಸುತ್ತಿದ್ದೇವೆ. — ಸಂ.]**

"ಕಸ್ತೂರಿ"ಯನ್ನು ಎಲ್ಲರೂ ಒಕ್ಕೊರಲಿನಿಂದ ಹೊಗಳುವವರೆ. "ನಾನೊಂದು ಇಂಥ ಪತ್ರಿಕೆ ಹೊರಡಿಸಬೇಕೆಂದಿದ್ದೆ. ಇನ್ನದರ ಅಗತ್ಯವೇ ಉಳಿಯಲಿಲ್ಲ" ಎಂದರು ದಿನಕರ ದೇಸಾಯಿಯವರು.

— ಶ್ರೀನಿವಾಸ ಹಾವನೂರ, ಮುಂಬಯಿ




ಹಟ್ಟಿಯಲ್ಲಿ ಯೇಸುವಿನ ಜನ್ಮ




ವರ್ಷ ೧ ಡಿಸೆಂಬರ ೧೯೫೬ ಸಂಚಿಕೆ ೪

ಕ್ರಿಸ್ತ ಶಕಾರಂಭದಲ್ಲೇ ಇಲ್ಲಿ ಕ್ರೈಸ್ತ ಧರ್ಮ ಪ್ರವೇಶಿಸಿತು

# ಭಾರತದಲ್ಲಿ ಕ್ರಿಸ್ತ ಧರ್ಮದ ಹಬ್ಬುಗೆ

ಭಾರತದಲ್ಲಿ ಕ್ರೈಸ್ತ ಧರ್ಮವು ಬಹುಶಃ ಯುರೋಪಿನಲ್ಲಿನ ಕ್ರೈಸ್ತ ಧರ್ಮದಷ್ಟೇ ಪುರಾತನ ಕಾಲದಿಂದ ಇದೆ. ಕೇರಳದಲ್ಲಿ ಇಂದು ಲಕ್ಷಾಂತರ ಜನ ಸೀರಿಯನ್ ಕ್ರಿಶ್ಚನ್ನರಿದ್ದಾರೆ. ತಮ್ಮ ಪೂರ್ವಜರು ಕ್ರಿಸ್ತ ಶಕಾರಂಭದಲ್ಲಿ ಕ್ರಿಸ್ತನ ಸಾಕ್ಷಾತ್ ಶಿಷ್ಯರಲ್ಲೊಬ್ಬನಾದ ಸಂತ ಥಾಮಸನಿಂದ ದೀಕ್ಷೆ ಹೊಂದಿದವರೆಂದು ಅವರು ಹೇಳಿಕೊಳ್ಳುತ್ತಾರೆ.

ಸಂತ ಥಾಮಸನು ಒಂದು ಹಡಗದಲ್ಲಿ ಕ್ರಿ.ಶ. ೫೨ ರಲ್ಲಿ ಬಡಿಗನಾಗಿ ಭಾರತದ ಆಗ್ನೇಯ ಕರಾವಳಿಗೆ ಬಂದನಂತೆ. ಗುಡನಾಫರ ಅಥವಾ ಗೊಂಡೊಫರ್ನೇಸ ಎಂಬ ಭಾರತೀಯ ರಾಜ ಅವನಿಗೆ ಆಶ್ರಯವಿತ್ತನು. ಅವನೂ ಅವನ ತಮ್ಮ ಗ್ರ್ಯಾಂಡನೂ ಒಂದು ಯುದ್ಧಕ್ಕೆ ಹೊರಟಾಗ ಅಗಣಿತ ದ್ರವ್ಯವನ್ನು ಥಾಮಸನ ಕೈಗಿತ್ತು ಅರಮನೆಯನ್ನು ಕಟ್ಟಿಸಹೇಳಿದ್ದರು. ಆದರೆ ತಿರುಗಿ ಬಂದಾಗ ಅವರು ಸೌಧದ ಬದಲು ಅನಾಥಾಲಯ ರುಗ್ಣಾಲಯಗಳು ತಲೆಯೆತ್ತಿದ್ದನ್ನು ನೋಡಿ ಕ್ರುದ್ಧರಾದರು. ತನ್ನ ಕಾರ್ಯದಿಂದ ಒಳ್ಳೆಯದೇ ಆಗುವುದೆಂದು ಥಾಮಸ ಅವರನ್ನು ಸಮಾಧಾನಪಡಿಸಿದನು.

ಮುಂದೆ ಅವನ ವರ್ಚಸ್ಸು ಹಬ್ಬುವುದನ್ನು ಸಹಿಸದೆ ದರಬಾರದ ಕೆಲವರು ಥಾಮಸನನ್ನು ಕೊಲ್ಲಿಸಿದರು. ಹೀಗೆ ಅವನು ಹುತಾತ್ಮನಾದ ವರ್ಷ ಕ್ರಿ. ಶ. ೭೨. ಅವನ ಗೋರಿ ಮದ್ರಾಸದ ಮೈಲಾಪುರದಲ್ಲಿತ್ತು. ಪೋರ್ತುಗೀಜರು ಭಾರತಕ್ಕೆ ಬಂದ ಬಳಿಕ ಅವನ ಕಳೇವರವನ್ನಗೆದು ರೋಂಗೆ ಒಯ್ದರು.

ಥಾಮಸನ ಭಾರತಯಾತ್ರೆಯ ಈ ಕಥೆ ಕ್ರಿ.ಶ. ೨-೩ ನೇ ಶತಮಾನಗಳಲ್ಲಿ ಬರೆದ "ಥಾಮಸನ ಕಾರ್ಯಗಳು" ಎಂಬ ಪುಸ್ತಕದಲ್ಲಿದೆ. ಅದರ ಐತಿಹಾಸಿಕತೆಯ ಬಗ್ಗೆ ಸಂದೇಹಗಳಿದ್ದರೂ ಗುಡನಾಫರ ರಾಜನ ಹೆಸರು ಹಳೇ ನಾಣ್ಯಗಳಲ್ಲಿ ಸಿಕ್ಕಿದೆಯಾದ್ದರಿಂದ ಅದರಲ್ಲಿ ಸತ್ಯಾಂಶಗಳಿರಬಹುದು.

೬ ನೇ ಶತಮಾನದಲ್ಲಂತೂ ಭಾರತದಲ್ಲಿ ಕ್ರೈಸ್ತರಿದ್ದುದಕ್ಕೆ ದಾಖಲೆಗಳಿವೆ. ತಿರುವಾಂಕೂರಿನ ಕೊಟ್ಟಾಯಂ ಎಂಬಲ್ಲಿರುವ ತಾಮ್ರ ಪಟ

ವೊಂದು ಅಂದಿನ ಅರಸನು ಕ್ರೈಸ್ತರಿಗಿತ್ತ ಸನದು-ಉಂಬಳಿಗಳನ್ನುಲ್ಲೇಖಿಸಿದೆ. ೮೮೩ ರಲ್ಲಿ ಇಂಗ್ಲಂಡಿನ ಆಲ್ಫ್ರೆಡ ರಾಜನು ಮಲಬಾರಿನ ಸಂತ ಥಾಮಸ ಚರ್ಚಿಗೆ ಕಾಣಿಕೆ ಕಳಿಸಿದ್ದನೆಂದು ದಾಖಲೆಯುಂಟು. ಕ್ರಿಶ. ೧೨೮೮ ರಲ್ಲಿ ಭಾರತಕ್ಕೆ ಬಂದ ಪ್ರಸಿದ್ಧ ಯುರೋಪಿಯನ್ ಪ್ರವಾಸಿ ಮಲಬಾರಿನಲ್ಲಿ ಭವ್ಯವಾದ ಚರ್ಚೊಂದು ಇದ್ದದ್ದನ್ನು ಹೇಳಿದ್ದಾನೆ. ಅದು ಥಾಮಸ ಮಂದಿರವೇ ಇರಬಹುದು.

ಸೀರಿಯನ್ ಕ್ರೈಸ್ತರು ದೀರ್ಘಕಾಲ ಭಾರತದಲ್ಲಿದ್ದುದರಿಂದ ಅವರು ಕ್ರೈಸ್ತರೆಂದು ಗುರುತಿಸಲಾರದಷ್ಟು ಭಾರತೀಯರಾಗಿದ್ದಾರೆ. ಅವರ ಸಂಪ್ರದಾಯಗಳಲ್ಲಿಯೂ ಆರ್ಯಧರ್ಮದ ಛಾಯೆಗಳಿವೆ.

ರೋಮನ್ ಕೆಥೋಲಿಕ್ ಪಂಥ ಭಾರತದಲ್ಲಿ ಅಷ್ಟು ಪ್ರಿಯವಾದ ಸನ್ನಿವೇಶದಲ್ಲಿ ಪ್ರವೇಶಿಸಿತೆನ್ನಲು ಬರುವುದಿಲ್ಲ. ಪೋರ್ತುಗೀಜರ ದೌರ್ಜನ್ಯಪೂರಿತ ಆಕ್ರಮಣದೊಡನೆ ಆ ಧರ್ಮವೂ ೧೬ನೇ ಶತಕದ ಆರಂಭದಲ್ಲಿ ಇಲ್ಲಿ ಪ್ರವೇಶಿಸಿತು. ಅನಂತರ ಕ್ರಿ.ಶ. ೧೫೪೨ರಲ್ಲಿ ಜೆಸೂಟ ಸಂನ್ಯಾಸಿಯಾದ ಸಂತ ಝೇವಿಯರನು ಗೋವೆಗೆ ಬಂದನು. ಗೋವೆಯನ್ನು ಅವನು ಭಾರತಕ್ಕೆ ಮಾತ್ರವಲ್ಲ, ಅಖಿಲ ಪೂರ್ವ ದೇಶಗಳಿಗೆ ಕ್ರೈಸ್ತಧರ್ಮಪ್ರಸಾರ ಕೇಂದ್ರವಾಗಿ ಮಾಡಿದನು. ೧೫೫೨ರಲ್ಲಿ ಮಡಿದ ಝೇವಿಯರನ ಗೋರಿ ಗೋವೆಯಲ್ಲಿದೆ.




ಕ್ರಿಸ್ತ ಸ್ವಾಮಿಯ ಪವಿತ್ರ ಬಲಿದಾನ

ಮಾನವರು ಬದುಕಲೆಂದು ಯೇಸು ಪ್ರಾಣಾರ್ಪಣ ಮಾಡಿ ಸಿಲುಬೆಗೇರಿದ. ಪ್ರಾಣ ತ್ಯಾಗ ಮಾಡುತ್ತಿದ್ದಾಗಲೂ -ಅವನು ತನಗೆ ಅನ್ಯಾಯ ಮಾಡಿದವರನ್ನು ಶಪಿಸದೆ, "ತಂದೇ, ಅವರನ್ನು ಕ್ಷಮಿಸು. ತಾವೇನು ಮಾಡುತ್ತಿರುವೆವೆಂದು ಅವರು ಅರಿಯರು!" ಎಂದ. ಈ ಕ್ಷಮಾವೃತ್ತಿ ಕ್ರಿಸ್ತ ಧರ್ಮದ ಮಹಾಶಕ್ತಿಗಳಲ್ಲೊಂದಾಗಿದೆ.

ಅತ್ಯಂತ ನಿಷ್ಠಾವಂತನೂ ಮೇಧಾವಿಯೂ ವಾಗ್ಮಿಯೂ ಕವಿಯೂ ಬಡವರಲ್ಲಿ ದಯಾಳುವೂ ಆದ ಈತನು ಧರ್ಮವಿಚಾರದಲ್ಲಿ ಅಷ್ಟೇ ಕಠೋರನೂ ಆಗಿದ್ದನು. ಅವನು ಪೋರ್ತುಗೀಜ ರಾಜ ಜಾನನನ್ನು ಹುರಿದುಂಬಿಸಿ "ಇನ್‌ಕ್ವಿಜಿಶನ್" ಅಥವಾ "ಧರ್ಮನ್ಯಾಯ" ಸಂಸ್ಥೆಯನ್ನು ಭಾರತದಲ್ಲಿ ಸ್ಥಾಪಿಸಿದನು. ಕ್ರೈಸ್ತ ಧರ್ಮದ ಹೆಸರಲ್ಲಿ, ಅದಕ್ಕೆ ತಲೆವಾಗದವರ ಮೇಲೆ ಭೀಕರ ದಬ್ಬಾಳಿಕೆಯಾಯಿತು. ಅವನ ನಂತರ ಗೋವೆಗೆ ಧರ್ಮಾಧಿಕಾರಿ-ರಾಜ್ಯಾಧಿಕಾರಿಯಾಗಿ ಬಂದ ಮೆಂಜೀಸನ ಕಾಲದಲ್ಲಂತೂ ಅಸಹನೀಯ ಅತ್ಯಾಚಾರಗಳಾಗಿ ಹಿಂದುಗಳೂ ಮುಸ್ಲಿಮರೂ ದೇಶಾಂತರ ಓಡಿ ಧರ್ಮ ಉಳಿಸಿಕೊಳ್ಳಬೇಕಾಯಿತು. ಅವನು ಅನೇಕ ಹಿಂದೂ ದೇವಾಲಯಗಳನ್ನೂ ನಾಶಮಾಡಿಸಿದನು. ಸಂತ ಝೇವಿಯರನ ಕಾಲದಲ್ಲಿ ೪೦,೦೦೦ ಜನ ಭಾರತೀಯರು ಕ್ರೈಸ್ತರಾದರು.

ಪೋರ್ತುಗೀಜರು ಇಲ್ಲಿನ ಪುರಾತನ ಕ್ರೈಸ್ತರಾದ ಕೇರಳದ ಸೀರಿಯನ್ ಕ್ರೈಸ್ತರನ್ನೂ ಅಸದಳವಾಗಿ ಪೀಡಿಸಿದರು. ೧೫೯೯ ರಲ್ಲಿ ಸೀರಿಯನ್ನರ ಮೇಲಿನ ಧಾರ್ಮಿಕ ಪರಮಾಧಿಕಾರವು ಪೋಪರ ಅಧೀನಕ್ಕೊಳಪಡಿಸಲ್ಪಟ್ಟಿತು.

"ಒಂದು ಕೈಲಿ ಬೈಬಲ್ ಇನ್ನೊಂದರಲ್ಲಿ ಖಡ್ಗ" ಹಿರಿದು ಪ್ರವೇಶಿಸಿ ಇನ್ನೂರು ವರ್ಷ ಕಾಲ ಭಾರತದಲ್ಲಿ ಮತಾಂತರಚಳವಳಿ ಮಾಡಿದ ಮೇಲೆ ಕೆಥೋಲಿಕರ ಚಟುವಟಿಕೆ ಇಳಿಮುಖವಾಯಿತು. ಇಂದು ಭಾರತದಲ್ಲಿ ಎಲ್ಲೆಡೆಗೂ ಕೆಥೋಲಿಕರಿದ್ದಾರೆ. ಕರ್ನಾಟಕದ ಕರಾವಳಿಯಲ್ಲಿ ಅವರ ಸಂಖ್ಯೆ ತಕ್ಕಷ್ಟಿದೆ. ಈಗ ಅವರ ಭಾರತೀಯ ವರಿಷ್ಠ ಧರ್ಮಪೀಠಾಧಿಪತಿ ಕೂಡ ಭಾರತೀಯ ಬುಡಕಟ್ಟಿನವರೇ ಇದ್ದು ಅವರೆಲ್ಲ ನಮ್ಮವರೇ ಆಗಿದ್ದಾರೆ.

ಪ್ರೊಟೆಸ್ಟಂಟ್ ಧರ್ಮಪ್ರಸಾರಕರು ೧೮ನೇ ಶತಮಾನದ ವರೆಗೂ ಭಾರತಕ್ಕೆ ಬರಲಿಲ್ಲ. ಈಸ್ಟ್ ಇಂಡಿಯಾ ಕಂಪನಿಯ ನೌಕರರಿಗಾಗಿ ೧೬೦೦ ರಿಂದಲೇ ಸುರತ ಮೊದಲಾದೆಡೆ ಚರ್ಚುಗಳಿದ್ದರೂ ಕಂಪನಿಯು ಈ ದೇಶದಲ್ಲಿ ಮೊದಲು ಕ್ರೈಸ್ತ ಧರ್ಮ ಪ್ರಸಾರಕ್ಕೆ ಆತಂಕವನ್ನೇ ಮಾಡಿತು.

೧೭೯೩ ರಲ್ಲಿ ಭಾರತಕ್ಕೆ ಬಂದ ವಿಲಿಯಂ ಕೇರಿಯೇ ಇಲ್ಲಿ ಬಂದ ಮೊದಲನೇ ಪ್ರೊಟೆಸ್ಟಂಟ್ ಮಿಶನರಿ. ಇವನು ಇಂಗ್ಲೀಷನಿದ್ದರೂ ಕಂಪನಿಯ ವಿರೋಧದ ದೆಸೆಯಿಂದ ಡಚ್ ಹಡಗಗಳಲ್ಲಿ ಬಂದು ಡಚ್ ಪ್ರದೇಶ ಹಾಗು ಭಾರತೀಯ ಸಂಸ್ಥಾನಗಳಲ್ಲಿ ಕೆಲಸಮಾಡಬೇಕಾಯಿತು. ಆಗ ಡಚ್ ಪ್ರದೇಶವಾಗಿದ್ದ ಕಲಕತ್ತೆಯ ಬಳಿ ಸಿರಾಮಪುರದಲ್ಲಿ ೧೮೧೧ ರಲ್ಲಿ ಕೇರಿಯು ಒಂದು ವಿದ್ಯಾಲಯ ಸ್ಥಾಪಿಸಿದನು. ಮೂಲತಃ ಮಿಶನರಿ ಚಟುವಟಿಕೆಗಾಗಿ ಪೌರಸ್ತ್ಯ ಭಾಷೆ, ಧರ್ಮ-ಶಾಸ್ತ್ರಾದಿಗಳ ಅಭ್ಯಾಸಕ್ಕಾಗಿ ಸ್ಥಾಪಿಸಲ್ಪಟ್ಟ ಈ ವಿದ್ಯಾಲಯ ಇಂದಿಗೂ ನಡೆಯುತ್ತಿದೆ. ಕೇರಿಯು ಹಿಂದುಗಡೆ ವೆಲೆಸ್ಲಿ ಕಾಲೇಜಿನ ಸಂಸ್ಕೃತ ಪ್ರೊಫೆಸರನಾಗಿ ನೇಮಕ ಹೊಂದಿದನು. ಇವನು ಮರಾಠಿ ವ್ಯಾಕರಣ 'ಮೊದಲಾವುಗಳನ್ನು' ಬರೆದಿದ್ದು ದೇಶಿ ಭಾಷೆಗಳಲ್ಲಿಯೂ ವಿದ್ವಾಂಸನಾಗಿದ್ದನು.

೧೮೧೩ ರಲ್ಲಿ ಮೊದಲನೇ ಅಮೇರಿಕನ್ ಮಿಶನರಿ ರೆವರೆಂಡ್ ಗಾರ್ಡನ್ ಹಾಲ್ ಭಾರತಕ್ಕೆ ಬಂದನು. ೧೮೨೬ ರಲ್ಲಿ ೪೧ ನೇ ವಯಸ್ಸಿನಲ್ಲಿ ಇಲ್ಲಿಯೇ ಮರಣಹೊಂದಿದ ಈತನ ಗೋರಿಯ ಮೇಲಿನ ಸಂಗಮವರಿ ಕಲ್ಲು ನಾಶಿಕ ಜಿಲ್ಲೆಯ ದೋಡಿದಾಪುರಿಯಲ್ಲಿ ಈಚೆಗೆ ಸಿಕ್ಕಿತು. ಇದನ್ನು ಚಟ್ನಿ ಅರೆಯಲು ಯಾರೋ ಉಪಯೋಗಿಸುತ್ತಿದ್ದರಂತೆ.

ಅನೇಕ ಪ್ರೊಟೆಸ್ಟಂಟ್ ಪಂಥಗಳು ಭಾರತದಲ್ಲಿ ಪ್ರಸಾರ ಹೊಂದಿವೆ. ೧೯೫೧ ರ ಜನಗಣನೆಯಲ್ಲಿ ಭಾರತದಲ್ಲಿ ಒಟ್ಟು ೮೧,೫೭,೭೬೫ ಕ್ರೈಸ್ತರಿದ್ದರು. ಇದು ಭಾರತದ ಜನಸಂಖ್ಯೆಯಲ್ಲಿ ಸೇಕಡಾ ೨·೩೦.

ಭಾರತದಲ್ಲಿ ಕ್ರೈಸ್ತ ಧರ್ಮದ ಹಬ್ಬುಗೆಯ ಕಥೆಯಲ್ಲಿ ಕೆಲವೊಂದು ಅಚಾತುರ್ಯದ ಸಂಗತಿಗಳಿವೆಯೆಂಬುದು ನಿಜವಾದರೂ ಅದರ ಬಹುಭಾಗವು ಶಾಂತಿ, ದಯೆ, ಪ್ರೇಮಗಳಿಂದಲೇ ತುಂಬಿದೆಯೆಂದು ಮರೆಯಬಾರದು.

ಭಾರತಕ್ಕೆ ಕ್ರೈಸ್ತ ಮಿಶನರಿಗಳು ಮಾಡಿದ ಮಹೋಪಕಾರಗಳಲ್ಲಿ ಭಾರತದ ಎಲ್ಲ ಭಾಷೆಗಳಲ್ಲಿಯೂ ಮುದ್ರಣ ಕಲೆಗೆ ಪ್ರವರ್ತಕರಾದದ್ದು ಮತ್ತು ಭಾರತೀಯ ಭಾಷೆಗಳ ತುಲನಾತ್ಮಕ ಅಭ್ಯಾಸ ಮಾಡಿದ್ದು ಮುಖ್ಯವಾಗಿವೆ. ಅನೇಕ ಭಾಷೆಗಳಲ್ಲಿ ಮುದ್ರಣವನ್ನು ಪ್ರಾರಂಭಿಸಿದವರೇ ಅವರು. ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ ಬರೆದ ಕಾಲ್ಡವೆಲ್, ಕನ್ನಡಕ್ಕೆ ಮಹಾಶಬ್ದಕೋಶ ರಚಿಸಿ ಪ್ರಕಟಿಸಿದ ಜರ್ಮನ್ ಪಾದ್ರಿ ಕಿಟ್ಟೆಲ್ ಮೊದಲಾದವರ ಅಪಾರ ಸೇವೆಯನ್ನು ಭಾರತ ಎಂದೂ ಮರೆಯದು. ಇಂದಿಗೂ ಸರ್ವಜ್ಞ ಕವಿಯ ಬಗ್ಗೆ ಅಧಿಕಾರವಾಣಿಯಿಂದ ಮಾತಾಡಬಲ್ಲ ರೆವರೆಂಡ್ ಉತ್ತಂಗಿ ಚೆನ್ನಪ್ಪನವರೇ ಮೊದಲಾದ ಕ್ರೈಸ್ತರು ಕನ್ನಡದ ಸೇವೆಯನ್ನು ಮಾಡುತ್ತಲೇ ಇದ್ದಾರೆ.

# ಕ್ರೈಸ್ತಧರ್ಮದ ಅದ್ಭುತ ವಿಸ್ತರಣೆ

( ಒಂದು ಸಿಂಹಾವಲೋಕನ )

ಪಿ. ವೆಂಕಟರಮಣಾಚಾರ್ಯ

ಜಗತ್ತಿನ ಜನಸಂಖ್ಯೆಯಲ್ಲಿ ಮೂರರಲ್ಲೊಂದು ಭಾಗ, ಅಂದರೆ ೮೦ ಕೋಟಿ ಜನ, ಕ್ರೈಸ್ತರು. ಜಗತ್ತಿನ ಧರ್ಮಗಳಲ್ಲೆಲ್ಲ ಕ್ರೈಸ್ತ ಧರ್ಮಕ್ಕೆ ಅನುಯಾಯಿಗಳು ಹೆಚ್ಚು.

ಕ್ರೈಸ್ತ ಧರ್ಮವು ತನ್ನ ಸಂಸ್ಥಾಪಕನ ದೇವತ್ವ ಮತ್ತು ಅವನ ಉಪದೇಶದ ಸರ್ವೋತ್ತಮತ್ವದ ಬಗ್ಗೆ ಅತ್ಯದ್ಭುತವಾದ ಹೆಗ್ಗಳಿಕೆ ತಾಳಿದೆ. ಆದರೆ ಕ್ರಿಸ್ತನ ಅನಂತರದ ಸುಮಾರು ೨,೦೦೦ ವರ್ಷಗಳಲ್ಲಿ ಕ್ರೈಸ್ತಧರ್ಮ ಬೆಳೆದಂತೆ ಅದರಲ್ಲಿ ಅಸಂಖ್ಯ ಶಾಖೆಗಳು ಹುಟ್ಟಿಕೊಂಡಿವೆ. ಹೀಗಿದ್ದರೂ ಕ್ರೈಸ್ತರೆಲ್ಲರ ಪ್ರಧಾನ ವಿಶ್ವಾಸಗಳು ಒಂದೇ; ಅವರೆಲ್ಲರೂ ಕ್ರೈಸ್ತರು.

ಇಂಥ ಕ್ರೈಸ್ತ ಧರ್ಮ ಎಲ್ಲಿಂದ ಬಂತು? ಹೇಗೆ ಹಬ್ಬಿತು? ಇಷ್ಟೆಲ್ಲ ರೂಪಗಳನ್ನು ಯಾಕೆ ಧರಿಸಿತು?

ಕ್ರೈಸ್ತಧರ್ಮದ ಮೂಲಪುರುಷ ನಜರೇತದ ಯೇಸು. ಈ ಬಡಿಗ, ಪಾಲಿಸ್ತಾನದಲ್ಲಿ ಸಂಚರಿಸುತ್ತ ಧರ್ಮವನ್ನು ಬೋಧಿಸಿದನು. ಅವನು ಘನರೋಗಿಗಳನ್ನು ಸ್ಪರ್ಶಮಾತ್ರದಿಂದ ಗುಣಪಡಿಸಿದನೆಂದೂ ಅವನ ಹೊಸ ಉಪದೇಶಗಳಿಂದ ಆ ಕಾಲದ ಧಾರ್ಮಿಕ ಕರ್ಮಠರು ಕೋಪಗೊಂಡು ಅವನನ್ನು ಶಿಲುಬೇಗೇರಿಸಿದರೆಂದೂ ಆದರೆ ಅವನು ಗೋರಿಯಿಂದ ಪುನಃ ಎದ್ದು ಬಂದನೆಂದೂ ಕ್ರೈಸ್ತರು ನಂಬುತ್ತಾರೆ.

ಗೋರಿಯಿಂದ ಉತ್ಥಾನಹೊಂದಿದ ಆತನನ್ನು ತಾವು ಕಣ್ಣಾರೆ ಕಂಡದ್ದಾಗಿ ಅವನ ಆದಿ ಶಿಷ್ಯರು ಸಾರಿದ್ದಾರೆ. ಅವರಿಗೆ ತಮ್ಮೀ ಕಣಸಿನಿಂದ ಪ್ರಚಂಡ ಉತ್ಸಾಹ ಮತ್ತು ವಿಶ್ವಾಸವುಂಟಾಗಿರಬೇಕು. ಯೇಸುವಿನ ಮರಣವಾಗಿ ನಲುವತ್ತು ದಿನಗಳಲ್ಲಿಯೇ ಈ ವಿಶ್ವಾಸದ ಬಲದಿಂದ ಅವರು ಬೇಕಾದ್ದನ್ನು ಎದುರಿಸಲು ಸಿದ್ಧರಾದರು. "ಯೇಸು ಗೋರಿಯಿಂದ ಪುನರುತ್ಥಾನ ಹೊಂದಿದ್ದಾನೆ. ಅವನು ಪುರಾಣಗಳಲ್ಲಿ ಭವಿಷ್ಯಹೇಳಿದಂತೆ ದೇವರು ಕಳಿಸಿದ ದೂತ (ಗ್ರೀಕ ಭಾಷೆಯಲ್ಲಿ "ಕ್ರಿಸ್ತ"). ಹಾವಿನ ಹೆಡೆಯನ್ನು ಬೇಕಾದರೆ ಹಿಡಿದು ಹೀಗೆ ಸಾರಲು ಸಿದ್ಧರಿದ್ದೇವೆ" ಎನ್ನುವಂಥ ಗಾಢ ಶ್ರದ್ಧೆ ಅವರಲ್ಲಿ ಮೂಡಿತು. ಕ್ರೈಸ್ತಧರ್ಮದ ಮೂಲಭೂತ ವಿಶ್ವಾಸಗಳಲ್ಲಿ ಇದು ಮುಖ್ಯವಾದದ್ದು. ಈ ವಿಶ್ವಾಸಕ್ಕಾಗಿ ಸಾವಿರಾರು ಜನರು ನಿರ್ಭಯವಾಗಿ ಪ್ರಾಣಕೊಟ್ಟರು.

## ಪೀಟರ ಮತ್ತು ಪಾಲ

ಕ್ರಿಸ್ತನ ಪ್ರಮುಖ ಸಾಕ್ಷಾತ್ ಶಿಷ್ಯರು ೧೨ ಜನ. ಅವರಲ್ಲೊಬ್ಬ– ಜುಡಾಸ– ಕೊನೆಗಳಿಗೆಯಲ್ಲಿ ಗುರುದ್ರೋಹ ಮಾಡಿದ್ದರಿಂದ ೧೧ ಜನರೇ ಉಳಿದರು. ಅವರಲ್ಲಿ ಪೀಟರನೇ ಮುಖ್ಯ; ಇವನೇ ಕ್ರೈಸ್ತ ಧರ್ಮದ ಪ್ರಥಮಾಚಾರ್ಯ. ಅನಂತರ ಪಾಲನು ಕ್ರೈಸ್ತರ ಮಹಾಗುರುಗಳಲ್ಲಿ ಶ್ರೇಷ್ಠ.

ಸೈಮನ್ ಪೀಟರ್ ಮೂಲತಃ ಬೆಸ್ತ. ಅವನೂ ಅವನ ಸೋದರ ಆಂಡ್ರುವೂ ಕ್ರಿಸ್ತನ ಉಪದೇಶಗಳಿಂದ ಪ್ರಭಾವಗೊಂಡ ಮೊಟ್ಟಮೊದಲ ಶಿಷ್ಯರು. ಕ್ರಿಸ್ತನ ಮರಣವಾಗಿ ೫೦ ದಿನಗಳ ನಂತರ ಅವನ ಶಿಷ್ಯರು ಜೀವದ ಹಂಗುದೊರೆದು ಅವನ ಧರ್ಮವನ್ನು ಬಹಿರಂಗವಾಗಿ ಬೋಧಿಸಲು ಸಿದ್ಧರಾದಾಗ ಪೀಟರನೇ ಪ್ರಥಮ ಉಪದೇಶಕನಾಗಿದ್ದನು.




ಪ್ರವಾದಿಯ ಪ್ರಥಮ ಶಿಷ್ಯರು :
ಪೀಟರ ಮತ್ತು ಆಂಡ್ರು

ಪೀಟರನು ಹಾಗೇ ಧರ್ಮೋಪದೇಶ ಮಾಡುತ್ತ ಮಾಡುತ್ತ ನೂರಾರು ಮೈಲು ಸಂಚರಿಸಿ ರೋಂ ನಗರವನ್ನು ತಲಪಿದನು. ಆಗ ಅಲ್ಲಿ ಕ್ರೌರ್ಯಕ್ಕೆ ಹೆಸರಾದ ನಿರೋ ದೊರೆ. ನಿರೋ ಚಕ್ರವರ್ತಿ ಪೀಟರನನ್ನು ಕೊಲ್ಲಿಸಿದನು. ಇದು ನಡೆದದ್ದು ಸುಮಾರು ಕ್ರಿ. ಶ. ೬೫ ರಲ್ಲಿ.

ಪೀಟರನ ಶ್ರದ್ಧೆ ಅಗಾಧವಾದದ್ದು. ಆದರೆ ವಿಚಾರ ತೀರ ಸರಳ. ಯೇಸು ದೇವರ ದೂತ. ಅವನನ್ನು ಅವನ ಜನರು ತಿರಸ್ಕರಿಸಿದರೂ ಪುನರುತ್ಥಾನದಿಂದ ಅವನ ದೇವದೂತತ್ವ ಸಿದ್ಧವಾಗಿದೆ. ಅವನು ಪುನಃ ಅವತರಿಸಿ ಮಾನವ ಕುಲವನ್ನು ಉದ್ಧರಿಸಲಿದ್ದಾನೆ. ಅವನನ್ನು ಸ್ವಾಮಿಯೆಂದು ನಂಬಿ ದೀಕ್ಷೆ ಹೊಂದಿದ ಮಾನವರಿಗೆ ಅವನು ಘನತರವಾದ ಅನಂತಾನಂದವನ್ನು ದಯಪಾಲಿಸುತ್ತಾನೆ. ಈ ವಿಶ್ವಾಸವನ್ನು ಉಪದೇಶಿಸುತ್ತ ಅವನು ಜೆರುಸಲೇಮಿನಲ್ಲಿ ಕ್ರೈಸ್ತರನ್ನು ಸಂಘಟಿಸಿದನು.

ಪಾಲ ಘನ ವಿದ್ವಾಂಸ. ಸಿಸಿಲಿಯ ತರ್ಸಸ್ ನಗರದಲ್ಲಿ ಜನಿಸಿದ ಯಹೂದ್ಯನಾತ. ಮೊದಲು ಅವನು ನೂತನವಾದ ಕ್ರಿಸ್ತಧರ್ಮದ ಕಡು ವೈರಿ. ಕ್ರೈಸ್ತರನ್ನು ಕೊಲ್ಲಿಸುವುದರಲ್ಲಿಯೂ ಅವನ ಅಂಗವಿತ್ತು. ಆದರೆ ಕ್ರಿ. ಶ. ೩೫ ರಲ್ಲಿ ದಮಸ್ಕಸದಲ್ಲಿದ್ದ ಕ್ರೈಸ್ತರನ್ನು ಧ್ವಂಸ ಮಾಡಲೆಂದು ಕುದುರೆಯನ್ನೇರಿ ಹೊರಟಿದ್ದಾಗ ದಾರಿಯಲ್ಲಿ ಅವನಿಗೆ ಒಂದು ಭೀಕರವಾದ ಲೋಕೋತ್ತರ ಅನುಭವವಾಯಿತು. ಅಂದಿನಿಂದ ಅವನು ಕ್ರೈಸ್ತನಾದ.

ಇದಾದ ಬಳಿಕ ಅವನು ಆ ಕಾಲಕ್ಕೆ ಅದ್ಭುತವೆನಿಸಿದ ಧರ್ಮೋಪದೇಶ ಯಾತ್ರೆ ಕೈಕೊಂಡನು. ಏಶಿಯಾಮೈನರದಿಂದ ಗ್ರೀಸ್, ರೋಂ ದಾಟಿ ಸ್ಪೇನ್ ವರೆಗೂ ಅವನು ಸಂಚರಿಸಿದನು. ಅವನನ್ನು ರೋಂನಲ್ಲಿ ಕ್ರಿ. ಶ. ೬೫ ರಲ್ಲಿ ಶಿರಶ್ಛೇದ ಮಾಡಲಾಯಿತೆಂದು ನಂಬಲಾಗಿದೆ.

ಇಂದು ಬೈಬಲ್ಲಿನ ಹೊಸ ಒಡಂಬಡಿಕೆಯ ಮುಖ್ಯಾಂಶವಾದ ಎಪಿಸ್ಟೈಲುಗಳ ಬಹುಭಾಗವನ್ನು ಬರೆದವನೂ ಕ್ರೈಸ್ತಧರ್ಮಕ್ಕೆ ತರ್ಕಬದ್ಧ ವ್ಯಾಖ್ಯೆಗಳನ್ನು ಕೊಟ್ಟವನೂ ಪಾಲನೇ. ಕ್ರೈಸ್ತಮಠದ ಮತ್ತು ಕ್ರೈಸ್ತ ವೇದಾಂತ ಶಾಸ್ತ್ರದ ತಳಪಾಯ ಹಾಕಿದವನು ಅವನೇ.

ಕ್ರಿಸ್ತನ ಸ್ವರೂಪ ಮತ್ತು ದೇವರಿಗೂ ಅವನಿಗೂ ಇರುವ ಸಂಬಂಧ ಇವುಗಳ ಬಗ್ಗೆ ಪೀಟರನ ಉಪದೇಶ ಸಾಮಾನ್ಯ ಜನರನ್ನು ಆಕರ್ಷಿಸಿತು; ಪಾಲನು ಕ್ರೈಸ್ತಧರ್ಮಕ್ಕೆ ಪಂಡಿತರನ್ನೂ ಒಲಿಸಿದನು.

## ಹುತಾತ್ಮರ ವಿಜಯ

ಪೀಟರ ಮತ್ತು ಪಾಲರು ಹುತಾತ್ಮರಾದ ಬಳಿಕ ೨೫೦ ವರ್ಷ ಕಾಲ ಕ್ರೈಸ್ತ ಧರ್ಮ ಭೂಮಧ್ಯಸಮುದ್ರದ ತೀರದ ರಾಜ್ಯಗಳಲ್ಲಿ

ಹಬ್ಬುತ್ತಲೇ ಹೋಯಿತು. ನಡುನಡುವೆ ಕ್ರೈಸ್ತರ ವಿರುದ್ಧ ಅಧಿಕಾರಿಗಳ ದಬ್ಬಾಳಿಕೆ ಭೀಕರವಾಗಿತ್ತು. ಕ್ರೈಸ್ತರನ್ನು ರೋಮನ್ ಅರಸರು ಸಿಂಹಗಳಿಗೆ ಆಹಾರವಾಗಿ ಬಗೆಯುತ್ತಿದ್ದುದೂ ಉಂಟು. ಆದರೆ ಆ ಧರ್ಮದ ಪ್ರಸಾರಕ್ಕೆ ಅದರಿಂದ ಉತ್ತೇಜನವೇ ಸಿಕ್ಕಿತು. ಅದೇ ಸಮಯದಲ್ಲಿ ಕ್ರೈಸ್ತ ತತ್ವಗಳೂ ಕ್ರೈಸ್ತ ಧರ್ಮಾಚಾರಗಳ ವ್ಯವಸ್ಥಾಪದ್ಧತಿಯೂ ರೂಪುಗೊಳ್ಳತೊಡಗಿದವು.

ಕ್ರೈಸ್ತರ ಮೇಲಿನ ದಬ್ಬಾಳಿಕೆ ರೋಮನ್ ಚಕ್ರವರ್ತಿ ಡಯೊಕ್ಲೇಶಿಯನ್ನನ ಕಾಲದಲ್ಲಿ ಅತ್ಯುಗ್ರವಾಯಿತು. ಕ್ರಿ. ಶ. ೨೮೪ ರಲ್ಲಿ ಸಿಂಹಾಸನಾರೂಢನಾದ ಅವನು ರಕ್ತದ ಮಡುವಿನಲ್ಲಿ ಕ್ರೈಸ್ತರನ್ನು ಮುಳುಗಿಸಲು ಯತ್ನಿಸಿದನು. ಅವರ ದೇವಾಲಯಗಳನ್ನು ಕೆಡವಿಸಿದನು. ಆದರೆ ಕ್ರೈಸ್ತಧರ್ಮವನ್ನು ನಿರ್ನಾಮ ಮಾಡುವುದು ಅವನಿಂದಾಗಲಿಲ್ಲ. ಕ್ರಿ. ಶ. ೩೦೫ ರಲ್ಲಿ ಅವನು ಸಿಂಹಾಸನತ್ಯಾಗಮಾಡಬೇಕಾಯಿತು.

ಅನಂತರ ನಡೆದ ಅಧಿಕಾರದ ಸ್ಪರ್ಧೆಯಲ್ಲಿ ಗೆದ್ದ ಕಾನ್‌ಸ್ಟಂಟೈನನು ಅಧಿಕೃತವಾಗಿ ಕ್ರೈಸ್ತ ಧರ್ಮ ಸ್ವೀಕಾರ ಮಾಡದಿದ್ದರೂ ಕ್ರೈಸ್ತ ಪಕ್ಷಪಾತಿ. ಉರುಳುತ್ತಿದ್ದ ರೋಮನ್ ಸಾಮ್ರಾಜ್ಯವನ್ನು ಈ ಧಾರ್ಮಿಕ ಐಕ್ಯದ ಗಚ್ಚಿನಿಂದಾದರೂ ಸ್ಥಿರಪಡಿಸಬಹುದೆಂದು ಅವನ ಆಶೆಯಾಗಿತ್ತು. ತನ್ನ ಹೊಸ ರಾಜಧಾನಿ ಕಾನ್‌ಸ್ಟಾಂಟಿನೋಪಲದಲ್ಲಿ ಅವನು ಕ್ರೈಸ್ತರಿಗೆ ಪ್ರೋತ್ಸಾಹವಿತ್ತನಲ್ಲದೆ ತಾನೂ ಸಾಯುವ ಮೊದಲು ಆ ಧರ್ಮಕ್ಕೆ ದೀಕ್ಷಿತನಾದನು. ಅವನು ಸತ್ತ ೪೨ ವರ್ಷಗಳ ಮೇಲೆ ಪಟ್ಟಕ್ಕೆ ಬಂದ ಥಿಯೋಡರಸನು ಕ್ರೈಸ್ತ ಧರ್ಮವನ್ನು ರೋಮನ್ ಸಾಮ್ರಾಜ್ಯದ ರಾಜಧರ್ಮವೆಂದು ಸಾರಿದನು.

ಈ ನಡುವೆ ಕ್ರೈಸ್ತರಲ್ಲಿ ಪ್ರಚಂಡ ಮತಭೇದಗಳು ಹುಟ್ಟಿ ಕೋಲಾಹಲವೆಬ್ಬಿಸಿದವು. ಕ್ರಿಸ್ತನಾರು? ಅವನೂ ಪರಮಾತ್ಮನೂ ಒಂದೇ ತತ್ವವೋ ಸದೃಶ ತತ್ವಗಳೋ ಎಂಬ ಬಗ್ಗೆ ಕ್ರೈಸ್ತ ಗುರುಗಳಲ್ಲಿ ಮತ್ತು ಪಂಡಿತರಲ್ಲಿ ವಿವಾದವೆದ್ದು ಒಬ್ಬರನ್ನೊಬ್ಬರು ಬಹಿಷ್ಕರಿಸುವುದೇ ಮೊದಲಾದ ಅನರ್ಥಗಳು ನಡೆದವು. ಕೊನೆಗೆ ಕ್ರಿ. ಶ. ೩೨೫ರಲ್ಲಿ ಚಕ್ರವರ್ತಿ ಕಾನ್‌ಸ್ಟಂಟೈನನು ನೈಶಿಯದಲ್ಲಿ ೩೦೦ ಜನ ಕ್ರೈಸ್ತಪಂಡಿತರ ಪರಿಷತ್ತು ಸೇರಿಸಿದನು. ಅದು ಕ್ರಿಸ್ತನೂ ಪರಮಾತ್ಮನೂ ಒಂದೇ ತತ್ವವೆಂದು ಸಾರಿ ಗೊಂದಲವನ್ನು ಶಾಂತಗೊಳಿಸಿತು.

ಕ್ರೈಸ್ತಧರ್ಮ ರಾಜಧರ್ಮವಾದದ್ದರಿಂದ ಸಾಮ್ರಾಜ್ಯದ ಜನರೆಲ್ಲ ಕ್ರೈಸ್ತರೇ ಎಂದು ಪರಿಗಣಿಸಲ್ಪಟ್ಟರು. ರಾಜಭಯ ಹೋಯಿತು. ಆದರೆ ಧರ್ಮವಿಶ್ವಾಸಕ್ಕಾಗಿ ಪ್ರಾಣ ತೆರಲು ಸಿದ್ಧರಾದ ಸಾತ್ವಿಕ ಹುತಾತ್ಮರ ಸ್ಫೂರ್ತಿ ಈಗ ಇಲ್ಲದಾಯಿತು. ರಾಜಾನುಗ್ರಹವು ಅದನ್ನು ಶುದ್ಧ ಧಾರ್ಮಿಕ ಕ್ಷೇತ್ರದಿಂದ ಲೌಕಿಕ ಕ್ಷೇತ್ರಕ್ಕೆಳೆದು ತಾರದಿರಲಿಲ್ಲ.

ಇದರ ನೈತಿಕ ಫಲ ಅಷ್ಟು ಒಳಿತಾಗಲಿಲ್ಲ. ರಾಜಧಾನಿಯಾದ ಕಾನ್‌ಸ್ಟಾಂಟಿನೋಪಲದ ಸುತ್ತಲ ಸಾಮ್ರಾಜ್ಯದ ಪೂರ್ವ ಭಾಗದಲ್ಲಿ ಪಾದ್ರಿಗಳು



ಕ್ರಿಸ್ತನು
ಧರ್ಮೋಪದೇಶ ಮಾಡುತಿದ್ದ ರೀತಿ

ರಾಜಾಶ್ರಯಕ್ಕೆ ಕೈಯೊಡ್ಡಿ ಅವರ ಕಿಂಕರರಾದರು; ಇಲ್ಲವೆ, ವಿರಕ್ತಿಯಿಂದ ಲೋಕದ ಗೊಡವೆ ಬಿಟ್ಟು ತಪಸ್ಸು ಮಾಡತೊಡಗಿದರು.

## ಅರಸರನ್ನು ಧರ್ಮಗುರುಗಳು ನಡುಗಿಸಿದರು

ಪಶ್ಚಿಮ ಭಾಗದಲ್ಲಿ ತದ್ವಿರುದ್ಧವಾಗಿ ಧರ್ಮಪೀಠಾಧಿಪತಿಗಳು ಲೌಕಿಕದಲ್ಲಿ ಅತಿಶಯವಾಗಿ ಮಗ್ನರಾದರು. ರೋಂ ನಗರ ಅವರ ಕೇಂದ್ರವಾಗಿದ್ದು ರಾಜಧಾನಿಯಿಂದ ಅದು ದೂರವಿತ್ತು. ಅದರ ಮೇಲೆ ಚಕ್ರವರ್ತಿಯ ಹಿಡಿತ ಶಿಥಿಲವಾಗಿತ್ತು. ಮೇಲೆ ಆಗಾಗ್ಗ ಉತ್ತರದ ಅನಾಗರಿಕ ಜರ್ಮನ್ ಜನಾಂಗಗಳ ದಾಳಿ. ಇದರಿಂದ ಉಂಟಾದ ಅಸಾಯಕ ಪರಿಸ್ಥಿತಿಯಲ್ಲಿ ಪಾದ್ರಿಗಳೇ ನಾಯಕರಾದರು. ಧರ್ಮಗುರುಗಳಿಗೆ ತಾನಾಗಿ ಹೆಚ್ಚುಹೆಚ್ಚು ರಾಜಕೀಯ ಪ್ರಭಾವ ಬರತೊಡಗಿತು. ಜಗತ್ತಿನ ಇತಿಹಾಸದಲ್ಲೇ ಅದ್ಭುತವಾದಂಥ ಪೋಪತ್ವಕ್ಕೆ ಇದೇ ನಾಂದಿಯಾಯಿತು.

ಕ್ರಿ. ಶ. ೪೫೫ ರಲ್ಲಿ ವಂಡಾಲರೆಂಬ ಅನಾಗರಿಕರು ರೋಂ ನಗರವನ್ನು ಧ್ವಂಸಮಾಡಿದ ಮೇಲೆ ಒಂದು ಸಾವಿರ ವರ್ಷಕಾಲ ಇಡೀ ಯುರೋಪೇ ರಾಜಕೀಯ ಕೋಲಾಹಲದಲ್ಲಿ ಮುಳುಗಿತ್ತು. ಅದೇ ಕಾಲವು ರೋಂ ನಗರದ ಧರ್ಮಗುರುಗಳ ಪ್ರತಿಷ್ಠೆಯನ್ನು ಹೆಚ್ಚಿಸಿ ಅವರು "ಜಗದ್ಗುರು"ತ್ವಕ್ಕೆ ಕೈತುಡುಕುವಂತೆ ಮಾಡಿತು.

ಈ ಅವಧಿಯಲ್ಲಿ ರೋಂ ನಗರವನ್ನು ಸುಲಿದಂಥ ಗಾಥ, ಹೂಣ ಮೊದಲಾದ ಕ್ರೂರ, ಅನಾಗರಿಕ ಜನಾಂಗಗಳು ಶಾಂತಿಪ್ರವಾದಿಯಾದ ಕ್ರಿಸ್ತನ ಧರ್ಮವನ್ನು ಸ್ವೀಕರಿಸಿ ಇಡಿ ಉತ್ತರ ಯುರೋಪವು ಕ್ರೈಸ್ತವಾದದ್ದು ಇತಿಹಾಸದ ವಿಚಿತ್ರಗಳಲ್ಲಿ ಒಂದು.

ಏರುತ್ತಿರುವ ಪ್ರತಿಷ್ಠೆಯ ಹುಮ್ಮಸದಲ್ಲಿ ೫ನೇ ಶತಮಾನದಲ್ಲಿ ರೋಮ್ ನಗರದ ಬಿಶಪ್ಪರು ಸಂತ ಪೀಟರನ ಉತ್ತರಾಧಿಕಾರಿಗಳಾದ ತಾವೇ ಎಲ್ಲ ಧರ್ಮಪೀಠಾಧಿಪತಿಗಳಿಗಿಂತ ಶ್ರೇಷ್ಠರೆಂದು ಸಾರಿದರು. ಕ್ಯಾನ್‌ಸ್ಟಾಂಟಿನೋಪಲದ ಪಾದ್ರಿಗಳು ಈ ಹೇಳಿಕೆಯನ್ನು ಧಿಕ್ಕರಿಸಿದ್ದರಿಂದ ಕ್ರೈಸ್ತಧರ್ಮದಲ್ಲಿ ಮೊದಲನೇ ದೊಡ್ಡ ಒಡಕು ಹುಟ್ಟಿತು. ಪೂರ್ವ ಮತ್ತು ಪಶ್ಚಿಮ ಧರ್ಮಪೀಠಗಳು ಅಂದಿನಿಂದ ಪ್ರತ್ಯೇಕವಾದವು.

ರೋಂ ಧರ್ಮಗುರುಗಳು ತಾವು ಧರ್ಮಗುರುಗಳಾದ್ದರಿಂದ ಅರಸರು ಕೂಡ ತಮ್ಮ ಕಿಂಕರರೆಂದು ಸಾಧಿಸತೊಡಗಿದರು. ರೋಮದ ಮುಖ್ಯ ಪಾದ್ರಿ ಪೋಪನೆನಿಸಿದನು. ಇದನ್ನು ಧಿಕ್ಕರಿಸಿದ ಅರಸರ ಪರಿಣಾಮ ನೆಟ್ಟಗಾಗಲಿಲ್ಲ.

ನಾಲ್ಕನೇ ಹೆನ್ರಿಯೆಂಬ ಜರ್ಮನ್ ಅರಸನು ಅವಿಧೇಯತೆ ತೋರಿಸಿದ್ದರಿಂದ ಜಗದ್ಗುರು ಪೋಪ ೭ನೇ ಗ್ರೆಗರಿಯು ಆ ಅರಸನಿಗೆ ಬಹಿಷ್ಕಾರ ಹಾಕಿದಾಗ ಹೆನ್ರಿಯು ವಿಧಿಯಿಲ್ಲದೆ ಪೋಪನ ಆಜ್ಞೆಯ ಪ್ರಕಾರ ಬರಿಗಾಲಲ್ಲಿ ಮಂಜುಬಿದ್ದ ನೆಲದ ಮೇಲೆ ಮೂರು ದಿನಗಳ ವರೆಗೆ ನಿಂತು ಪ್ರಾಯ-ಶ್ಚಿತ್ತ ಮಾಡಿಕೊಳ್ಳಬೇಕಾಯಿತು. ಅಂದಿನ ಪೋಪರ ಅಪರಿಮಿತ ಅಧಿಕಾರಕ್ಕೆ ಇದೊಂದು ಉದಾಹರಣೆ.

೧೨ ನೇ ಶತಮಾನದಷ್ಟು ಹೊತ್ತಿಗೆ ಜರ್ಮನಿಯ ಸಿಂಹಾಸನಕ್ಕೆ ಯಾರು ಉತ್ತರಾಧಿಕಾರಿಯಾಗಬೇಕೆಂದು ವಿಧಿಸುವಷ್ಟು, ಫ್ರೆಂಚ ಅರಸನಿಗೆ ಪರಿತ್ಯಜಿಸಿದ ಹೆಂಡತಿಯನ್ನು ಪುನಃ ಸ್ವೀಕರಿಸಬೇಕೆಂದು ಫರ್ಮಾನು ಹೊರಡಿಸುವಷ್ಟು, ಸ್ಪೇನದ ಅರಸ ಲಿಯಾನನು ತನ್ನ ಹೆಂಡತಿಯನ್ನು ತ್ಯಜಿಸತಕ್ಕದ್ದೆಂದು ಅಪ್ಪಣೆ ಕೊಡುವಷ್ಟು, ಇಂಗ್ಲಂಡಿನ ಅರಸ ಜಾನನು ತನ್ನರಾಜ್ಯವನ್ನೇ ಪೋಪನಿಗೆ ದಾನಮಾಡಿ ಸಾಮಂತನಂತೆ ಕಪ್ಪ ತೆತ್ತು ರಾಜ್ಯ ನಡೆಸಬೇಕು, ಇಲ್ಲವೆ ಧರ್ಮ ಬಹಿಷ್ಕಾರಕ್ಕೆ ಗುರಿಯಾಗಬೇಕೆಂದು ವಿಧಿಸುವಷ್ಟು ಮಟ್ಟಿಗೆ ಪೋಪರ ಲೌಕಿಕಾಧಿಕಾರ ಹಾಗು ಪ್ರತಿಷ್ಠೆ ಬೆಳೆದಿತ್ತು.

ರಾಜಕೀಯ ವಿಚಾರಗಳಲ್ಲಿ ಕ್ರೈಸ್ತಪೀಠಾಧಿಪತಿಗಳು "ಅನುಕೂಲಸಿಂಧು" ನೀತಿಯನ್ನು ಹಲವೇಳೆ ಅನುಸರಿಸಿದ್ದುಂಟು. "ಸೀಜರನಿಗೆ ಸಲ್ಲಬೇಕಾದ್ದನ್ನು ಸೀಜರನಿಗೆ ಸಲ್ಲಿಸು; ದೇವರಿಗೆ

ಸಲ್ಲತಕ್ಕದ್ದನ್ನು ದೇವರಿಗೆ ಸಲ್ಲಿಸು" ಎಂಬ ಕ್ರಿಸ್ತ ವಾಕ್ಯವನ್ನು ಉದಾಹರಿಸಿ ಅವರು ಎಷ್ಟೋ ಸಲ ಅಯೋಗ್ಯ ಅರಸರ ಸಮರ್ಥನ ಮಾಡಿದ್ದುಂಟು.

## ಇಸ್ಲಾಮುದೊಡನೆ ಸೆಣಸಾಟ

ಏಳನೇ ಶತಮಾನದಲ್ಲಿ ಅರಬಸ್ತಾನದಲ್ಲಿ ತಲೆ ಯೆತ್ತಿದ ಇಸ್ಲಾಮು ಧರ್ಮವು ಕ್ರೈಸ್ತ ಧರ್ಮಕ್ಕೆ ಪ್ರಬಲ ಪ್ರತಿಸ್ಪರ್ಧಿಯಾಯಿತು. ಇಸ್ಲಾಮು ಹುಟ್ಟಿ ಎರಡೇ ಶತಮಾನಗಳಲ್ಲಿ ಅದು ಕ್ರೈಸ್ತ ಪ್ರಭಾವ ದಲ್ಲಿದ್ದ ಉತ್ತರ ಆಫ್ರಿಕವನ್ನೆಲ್ಲ ಗೆದ್ದು ಸ್ಪೇನ್ ವರೆಗೆ ವಿಜಯಯಾತ್ರೆ ಮಾಡಿತು. ಜೇರುಸಲೇಮದ ಕ್ರೈಸ್ತ ಪವಿತ್ರ ಸ್ಥಳಗಳನ್ನು ಮುಸ್ಲಿಮರು ಆಕ್ರಮಿಸಿದರು. ಪಶ್ಚಿಮ ಯುರೋಪಿನ ಅರಸರಿಗೂ ಮುಸ್ಲಿಮರಿಗೂ ಎರಡು ಶತಮಾನಕಾಲ "ಧರ್ಮಯುದ್ಧ"ಗಳು ಜರಗಿ ರಕ್ತದ ಕಾಲುವೆಗಳೇ ಹರಿದವು. ಲಕ್ಷಗಟ್ಲೆ ಸೈನ್ಯಗಳು ಪಾಲಿಸ್ತಾನಕ್ಕೆ ಹೋದವು. ಆದರೆ ೧೩ ನೇ ಶತಮಾನದ ನಂತರ ಯುರೋಪಿನ ಕ್ರೈಸ್ತ ಧರ್ಮಯುದ್ಧೋತ್ಸಾಹ ಕುಗ್ಗಿತು. ಅಲ್ಲಿಂದೀಚೆಗೆ ಕ್ರೈಸ್ತರಾಗಲಿ ಮುಸ್ಲಿಮರಾಗಲಿ ಪರಸ್ಪರರನ್ನು ಧರ್ಮಾಂತರಗೊಳಿಸುವಲ್ಲಿ ವಿಶೇಷ ಯಶಸ್ವಿಗಳಾಗಲಿಲ್ಲ.

ರೋಮಿನ ಧರ್ಮಗುರುಗಳ ಎದುರಿಲ್ಲದ ಪ್ರತಾಪ ಕ್ರೈಸ್ತ ಧರ್ಮಕ್ಕೆ ಸಾರ್ವತ್ರಿಕ ಹಿತ ಮಾಡಲಿಲ್ಲ. ಅಧಿಕಾರವಿದ್ದಲ್ಲಿ ದೌರ್ಜನ್ಯ, ನೀರಿದ್ದಲ್ಲಿ ಕೆಸರು. ಎಲ್ಲೆಲ್ಲಿಯೂ ಧರ್ಮಗುರುಗಳು ಕ್ರಿಸ್ತನ ಉಪದೇಶಪಾಲನೆಗಿಂತಲೂ ತಮ್ಮ ವೈಭವಪ್ರದರ್ಶನದ ಹವ್ಯಾಸಕ್ಕೆ ಬಿದ್ದರು. ಸಂನ್ಯಾಸಿಗಳಾದರೂ ಅವರಲ್ಲಿ ಲಂಪಟತನ ಬೆಳೆಯಿತು. ಸ್ವತಃ ಕೆಲ ಪೋಪರು ಕೂಡ ಈ ಆರೋಪಗಳಿಂದ ಮುಕ್ತರಾಗಿರಲಿಲ್ಲ. ೧೪ ನೇ ಶತಮಾನದಲ್ಲಿ ಇದರ ಕಹಿಫಲಗಳು ಪ್ರಕಟವಾಗತೊಡಗಿದವು.

ಒಂದೆಡೆ, ಅರಸರು ಪೋಪರ ಅಧೀನತೆಯಿಂದ ಬೇಸತ್ತಿದ್ದರು. ಅವರು ತಮ್ಮ ಅವಿಚ್ಛಿನ್ನ ಪ್ರಭುತ್ವವನ್ನು ಸ್ಥಾಪಿಸಲು ಬಯಸುತ್ತಿದ್ದರು. ೧೪ ನೇ ಶತಕದಲ್ಲಿ ಫ್ರಾನ್ಸಿನ ಫಿಲಿಪ್ ರಾಜನು ತನ್ನ ದೇಶದ ಆರ್ಚಬಿಶಪನನ್ನು ಪೋಪ ಪದವಿಗೇರಿಸಿ ಪೋಪರ ಪೀಠವನ್ನು ಫ್ರಾನ್ಸಿನ ಅವಿಗ್ನಾನಕ್ಕೆ ವರ್ಗಾಯಿಸಿದನು. ಈ ಪೋಪನೂ ಅವನ ಉತ್ತರಾಧಿಕಾರಿಗಳೂ ೭೦ ವರ್ಷ ಕಾಲ ಫ್ರೆಂಚ ಅರಸರ ಸೆರೆಯಾಳುಗಳಂತೆಯೇ ವಾಸಿಸಿದರು. ಬೇರೆ ಕೆಲವರು ತಾವೇ ಪೋಪರೆಂದು ಹೇಳಿಕೊಂಡರು. ಪ್ರತಿಸ್ಪರ್ಧಿ ಪೋಪರು ಪರಸ್ಪರ ನಿಂದೆಯಲ್ಲಿ ಮಗ್ನರಾಗಿ ಪ್ರತಿಯೊಬ್ಬರು ತಾವೇ ಸಂತ ಪೀಟರನ ನಿಜವಾದ ಉತ್ತರಾಧಿಕಾರಿಗಳೆಂದು ಸಾರಿದ್ದರಿಂದ ಕ್ರೈಸ್ತ ಜಗತ್ತಿನಲ್ಲಿ ಎರಡನೇ ಬಾರಿ ಕೋಲಾಹಲವೆದ್ದಿತು. ಕೊನೆಗೆ ೧೪೧೭ ರಲ್ಲಿ ಕಾನ್‌ಸ್ಟೇನ್ಸದಲ್ಲಿ ಧರ್ಮಪೀಠ ಪರಿಷತ್ತು ಸೇರಿ, ಜಗಳವನ್ನು ತೀರಿಸಿ ಒಬ್ಬನೇ ಪೋಪನನ್ನು ಪ್ರತಿಷ್ಠಾಪಿಸಬೇಕಾಯಿತು.

ಪೋಪ ಜಗದ್ಗುರುಗಳ ಈ ಅಪಕೀರ್ತಿ ಮತ್ತು ಮುಖಭಂಗವು ಧರ್ಮ ಪೀಠಗಳ ಲೌಕಿಕಾಧಿಕಾರ ಹಾಗು ಲಂಪಟತ್ವದ ವಿರುದ್ಧ ಚಳವಳಿಯೆಬ್ಬಿಸಿತು. ಪೋಪರ ಪೀಠವಿದ್ದ ಇಟಲಿಯಲ್ಲೇ ಪೀಟರ್ ವಾಲ್ಡೊ ಎಂಬವನು ಪೋಪರ ಅಧಿಕಾರವನ್ನು ಅಲ್ಲಗಳೆಯುವ ಹೊಸ ಕ್ರೈಸ್ತ ಪಂಥವನ್ನು ಸ್ಥಾಪಿಸಿದನು. ಇಂಗ್ಲಂಡಿನಲ್ಲಿ ಜಾನ್ ವೈಕ್ಲಿಫನೂ ಬೊಹೇಮಿಯಾದಲ್ಲಿ ಜಾನ್ ಹಸ್ಸನೂ ಫ್ಲೊರೆನ್ಸದಲ್ಲಿ ಸವೋನರೋಲಾ (ಇವರಿಬ್ಬರನ್ನೂ ಜೀವಂತ ಸುಡಲಾಯಿತು)ನೂ ಪೋಪರ ವಿರುದ್ಧ ಪ್ರತಿಭಟನೆ ಹೂಡಿದರು. ಇದು ಕ್ರಿಸ್ತಧರ್ಮದ ಕರಾಳಯುಗ. ಕ್ರೈಸ್ತರೇ ಕ್ರೈಸ್ತರ ಮೇಲೆ ಅಮಾನುಷ ಹಿಂಸೆಗಿಳಿದ ಕಾಲ.

## ಲೂಥರನ ಆಹ್ವಾನ

ಆಗ ಬಂದ ಮಾರ್ಟಿನ್ ಲೂಥರ. ಅವನೂ ಒಬ್ಬ ಪಾದ್ರಿ; ಸ್ಯಾಕ್ಸನಿಯ ವಿಟೆನ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಕ್ರೈಸ್ತ ವೇದಾಂತದ ಅಧ್ಯಾಪಕ. ಅವನು ೧೫೧೭ ಅಕ್ಟೋಬರ ೩೧ ರಂದು ತನ್ನ ಮಠದ ಬಾಗಿಲ ಮೇಲೆ ಕ್ರೈಸ್ತ ಮತದ ಹೊಸ ಭಾಷ್ಯವೊಂದನ್ನು ಬರೆದುಹಚ್ಚಿದನು. ಅದು

ರೋಮಿನ ಪಾದ್ರಿಗಳ ಅಧಿಕೃತ ಸಿದ್ಧಾಂತಕ್ಕೆ ವ್ಯತಿರಿಕ್ತವಾಗಿತ್ತು. ಮುಕ್ತಿಯು ಕೇವಲ ಪರಮಾತ್ಮನ ಕೃಪೆಯಿಂದ ಮನುಷ್ಯನಿಗೆ ಲಭಿಸತಕ್ಕದ್ದು. ಪರಮಾತ್ಮನು ತನ್ನಿಚ್ಛೆಯಂತೆ ಪಾಪಿಯನ್ನೂ ಉದ್ಧರಿಸಬಹುದು. ಇದು ಕ್ರಿಸ್ತನಲ್ಲಿ ದೃಢ ಭಕ್ತಿವಿಶ್ವಾಸಗಳಿಂದ ಲಭ್ಯವಾಗುವ ಕೃಪೆಯಲ್ಲದೆ, ತಪಸ್ಸು, ನೀತಿ, ಸದಾಚಾರಾದಿ ಯಾವ ಮಾನುಷ ಕರ್ಮಗಳೂ ಮುಕ್ತಿಯನ್ನು ದೊರಕಿಸಲಾರವು. ಮುಕ್ತಿಗೆ ಸಂತರ ಆಶೀರ್ವಾದವಾಗಲಿ ಧರ್ಮಗುರುಗಳ ಮಧ್ಯಸ್ಥಿಕೆಯಾಗಲಿ ತೀರ್ಥ ಪ್ರಸಾದಗಳಾಗಲಿ ಅಗತ್ಯವಿಲ್ಲ. ಇದು ಲೂಥರನ ಹೊಸ ಭಾಷ್ಯದ ಮುಖ್ಯಾಂಶ.

ಧರ್ಮಗುರುಗಳು ಪರಮಾತ್ಮನಿಗೂ ಮನುಷ್ಯರಿಗೂ ನಡುವೆ ಮಧ್ಯಸ್ಥರಾಗುವ ಅಗತ್ಯವಿಲ್ಲೆಂಬ ಲೂಥರನ ಸಿದ್ಧಾಂತವು ಪೋಪ ಗುರುವಿನ ಅಧಿಕಾರಕ್ಕೆ ನೇರವಾದ ಆಹ್ವಾನವಾಗಿತ್ತು. ಕ್ರೈಸ್ತಜಗತ್ತಿನಲ್ಲಿ ಮಹಾವಿವಾದ ಪ್ರಾರಂಭವಾಯಿತು. ಲೂಥರನನ್ನು ಚರ್ಚಿಗಾಗಿ ವರ್ಮ್ಸ ಪರಿಷತ್ತಿಗೆ ಕರೆಸಿದರು. ಅಲ್ಲಿ ಜರ್ಮನ್ ಚಕ್ರವರ್ತಿ ೫ ನೇ ಚಾರ್ಲಸನು ಲೂಥರನಿಗೆ ''ನಿನ್ನ ಸಿದ್ಧಾಂತಗಳನ್ನು ಹಿಂತೆಗೆದುಕೋ'' ಎಂದು ಕಟ್ಟಪ್ಪಣೆ ಮಾಡಿದನು.

ತನ್ನ ಜೀವ ತಂತುಮಾತ್ರದಿಂದ ಜೋತಾಡುತ್ತಿದ್ದರೂ ಧೀರ ಜರ್ಮನ್ ಬಂಡುಗಾರ ಪಾದ್ರಿ ಲೂಥರನು, "ನಾನೇನನ್ನೂ ಹಿಂತೆಗೆದುಕೊಳ್ಳಲಾರೆ, ಕೊಳ್ಳಬಯಸುವುದೂ ಇಲ್ಲ. ಯಾಕಂದರೆ ಮನಸ್ಸಾಕ್ಷಿಯನ್ನು ಮೀರಿ ನಡೆಯುವುದು ಸುರಕ್ಷಿತವೂ ಅಲ್ಲ, ಸರಿಯೂ ಅಲ್ಲ. ಇದು ನನ್ನ ನಿರ್ಧಾರ. ಬೇರೆ ಹಾದಿಯಿಲ್ಲ. ದೇವರಿದ್ದಾನೆ. ತಥಾಸ್ತು!" ಎಂದು ಧೀರಪಣ ತೊಟ್ಟ.

ಇಂಥ ವೀರತ್ವಕ್ಕಾಗಿ ಜಾನ್ ಹಸ್ಸನಿಗೆ ಚಿತೆಯೇ ಪ್ರತಿಫಲವಾಗಿ ಬಂದಿತ್ತು. ಆದರೆ ಲೂಥರ ಗೆದ್ದ. ಪೋಪನ ಅನುಯಾಯಿಗಳ ದಯಾ-ದಾಕ್ಷಿಣ್ಯಗಳಿಂದಲ್ಲ; ಅಸಹಾಯತೆಯಿಂದ. ಯುರೋಪಿನ ಅರಸರು ಪೋಪರ ಕಾಟದಿಂದ ಕೆರಳಿದ್ದರು. ರೋಮಿನಲ್ಲಿ ಪೋಪರ ವೈಭವಪೂರ್ಣ ಜೀವನಕ್ಕಾಗಿ ತಮ್ಮ ಬೊಕ್ಕಸಗಳಿಂದ ಕಪ್ಪ ತೆತ್ತು ತೆತ್ತು ಅವರಿಗೆ ಸಾಕಾಗಿತ್ತು. ಉಗ್ರ ಸುಧಾರಣಾವಾದಿ ಲೂಥರನು ರಣಕಹಳೆ ಊದಿದೊಡನೆ ಜರ್ಮನಿಯ ಅನೇಕ ಜನರೂ ಅರಸರೂ ಅವನನ್ನು ರಕ್ಷಿಸಲಣಿಯಾದರು. ಆದ್ದರಿಂದಲೇ ಲೂಥರನ ಕೂದಲು ಕೊಂಕಿಸಲು ಪೋಪನಿಗೆ ಸಾಧ್ಯವಾಗಲಿಲ್ಲ. ಲೂಥರನ ಅಭಿಪ್ರಾಯಗಳ ಪಕ್ಷಪಾತಿಗಳಿಗೂ ವಿರೋಧಿಗಳಿಗೂ ಜರ್ಮನಿಯಲ್ಲಿ ಕದನವಾಗಿ ಕೊನೆಗೆ ೧೫೫೫ರಲ್ಲಿ ಶಾಂತಿಯಾಯಿತು. ಇದರ ಫಲವಾಗಿ ಯಾವ ರಾಜ್ಯದ ಅರಸು ಯಾವ ಪಕ್ಷದವನೋ ಅದು ಆ ರಾಜ್ಯದ

## ಇದು ಎಲ್ಲ ಒಳ್ಳೆ ಕ್ರೈಸ್ತರ ಪ್ರಾರ್ಥನೆ

ಸ್ವಾಮೀ, ನನ್ನನ್ನು ನಿನ್ನ ಶಾಂತಿಯ ಉಪಕರಣವಾಗಿ ಮಾಡಿಕೋ. ದ್ವೇಷವಿದ್ದಲ್ಲಿ ಪ್ರೇಮವನ್ನು, ಅನ್ಯಾಯವಾದಲ್ಲಿ ಕ್ಷಮೆಯನ್ನು, ಸಂದೇಹವಿದ್ದಲ್ಲಿ ಶ್ರದ್ಧೆಯನ್ನು, ನಿರಾಶೆಯಿದ್ದಲ್ಲಿ ಪ್ರತ್ಯಾಶೆಯನ್ನು, ಕತ್ತಲೆಯಿದ್ದಲ್ಲಿ ಬೆಳಕನ್ನು, ವಿಷಾದವಿದ್ದಲ್ಲಿ ಆನಂದವನ್ನು ನಾನು ಬಿತ್ತುವಂತಾಗಲಿ.

ಓ ದೈವಿ ಪ್ರಭುವೇ, ನನ್ನ ದುಃಖಗಳಿಗೆ ಸಮಾಧಾನ ಪಡೆಯುವುದಕ್ಕಿಂತ ಪರದುಃಖವನ್ನು ಸಮಾಧಾನಪಡಿಸಬೇಕೆಂದು, ನನ್ನನ್ನು ಇತರರು ತಿಳಿದುಕೊಳ್ಳಬೇಕೆಂಬುದಕ್ಕಿಂತ ಇತರರನ್ನು ನಾನು ತಿಳಿದುಕೊಳ್ಳಬೇಕೆಂದು, ನನ್ನನ್ನು ಇತರರು ಪ್ರೀತಿಸಬೇಕೆಂಬುದಕ್ಕಿಂತ ಇತರರನ್ನು ನಾನು ಪ್ರೀತಿಸಬೇಕೆಂದು ನನ್ನ ಹಂಬಲವಾಗಲಿ. ಯಾಕೆಂದರೆ ಕೊಡುವುದೆಂದರೇ ಪಡೆಯುವುದು, ಕ್ಷಮಿಸುವುದೆಂದರೇ ಕ್ಷಮಾಪಾತ್ರನಾಗುವುದು, ಸಾಯುವುದೆಂದರೇ ಅಮರ ಜೀವನ ಪಡೆಯುವುದು.

— ಅಸೀಸಿಯ ಸಂತ ಫ್ರಾನ್ಸಿಸ.

ಧರ್ಮ ಎಂಬ ಹೊಸ ಪರಂಪರೆ ಸ್ಥಾಪಿಸಲ್ಪಟ್ಟು ಸ
ಯಾಯಿತು.

ಹೀಗೆ ಪಶ್ಚಿಮ ಯುರೋಪಿನ ಕ್ರೈ ಪ್ರಪಂಚದಲ್ಲಿ ಬೆಸೆಯಲಾರದ ಒಡಕು ಹುಟ್ಟಿದ್ದು ಇಂದಿಗೂ ಉಳಿದಿದೆ. ಪೋಪನ ಧಾರ್ಮಿಕ ಅಧಿಕಾರ ಹಾಗು ಪ್ರತಿಷ್ಠಿತ ಮತಗಳ ಬೆಂಬಲಿಗರಿಗೆ "ರೋಮನ್ ಕೆಥೋಲಿಕ" ರೆಂದೂ ಬಂಡೆದ್ದ ಪಂಗಡಗಳಿಗೆ (ಇವು ನೂರಾರು ಪಂಗಡಗಳಾಗಿವೆ) "ಪ್ರೊಟೆಸ್ಟಂಟ" (ಪ್ರತಿಭಟಿಸುವವರು)ರೆಂದೂ ಹೆಸರಾಯಿತು.

ಅರಸರೂ ಅಧಿಕಾರಿಗಳೂ ಕ್ರೈಸ್ತಧರ್ಮದ ಈ ಒಡಕಿನ ಪ್ರಯೋಜನಪಡೆದು ತಮ್ಮ ಅಧಿಕಾರ ಬಲಗೊಳಿಸದೆ ಬಿಡಲಿಲ್ಲ. ಇಂಗ್ಲಂಡಿನ ಆನೇ ಹೆನ್ರಿಯು ಮೊದಲು ರೋಮನ್ ಪಂಥದ ಅನುಯಾಯಿಯಾಗಿ ಪ್ರೊಟೆಸ್ಟಂಟರನ್ನು ಕೊಲ್ಲಿಸಿದರೆ, ಮುಂದೆ ತನ್ನ ಹೆಂಡತಿಯನ್ನು ತ್ಯಜಿಸಲು ಪೋಪನು ಅನುಮತಿ ಕೊಡಲಿಲ್ಲವೆಂದು ಸಿಟ್ಟಾಗಿ ಪ್ರೊಟೆಸ್ಟಂಟರಿಗೆ ಬೆಂಬಲವಿತ್ತು ಕೆಥೋಲಿಕರನ್ನು ಪೀಡಿಸಿ ಕೊಲ್ಲಿಸಿದ್ದನ್ನು ಉದಾಹರಿಸಬಹುದು. ೨೦೦ ವರ್ಷಕಾಲ ಯುರೋಪಿನಲ್ಲಿ ಧರ್ಮವು ಅರಸರ ಸ್ವಾರ್ಥಸಾಧನೆಯ ಉಪಕರಣವಾಗಿ ಧಾರಾಳವಾಗಿ ರಕ್ತ ಹರಿಸಿತು.

## ಶುದ್ಧೀಕರಣ

ಜರ್ಮನಿಯಲ್ಲೆದ್ದ ಪೋಪವಿರೋಧಿ ಬಂಡಾಯವು ರೋಮನ್ ಧರ್ಮಕ್ಕೆ ಒಳಿತನ್ನೂ ಮಾಡದಿರಲಿಲ್ಲ. ರೋಮನ್ ಕ್ರೈಸ್ತ ಮತಗಳ ಹಾಗು ಆಚಾರಗಳ ಶುದ್ಧೀಕರಣವು ಭರದಿಂದಾಗಿ ಎಷ್ಟೋ ಅನೀತಿಗಳು ಮಾಯವಾದವು. ರೋಮನ್ ಕೆಥೋಲಿಕ್ ಪಂಥವು ಇಂದು ಜಗತ್ತಿನ ಅತ್ಯಂತ ದೃಢಸಂಘಟಿತ ಧರ್ಮವಾಗಿ ರೂಪುಗೊಳ್ಳಲು ಲೂಥರನ ಬಂಡಾಯವೇ ಪ್ರೇರಣೆ ಕೊಟ್ಟಿತೆನ್ನಬಹುದು.

"ಯೇಸು ಸಂಘ" ಅಥವಾ ಜೆಸೂಟ ಸಂಸ್ಥೆಯ ಉದಯವೂ ಈ ಬಂಡಾಯದ ಫಲವೇ. ಇಗ್ನೇಶಸ್ ಲೊಯೋಲಾ ಎಂಬವನು ಸ್ಥಾಪಿಸಿದ ಈ ಕಡು ನಿಷ್ಠಾವಂತ ಸಂಸ್ಥೆಯು ಕ್ರೈಸ್ತ ಧರ್ಮದ ವಿಸ್ತಾರಕ್ಕಾಗಿ ಎಷ್ಟೋ ಕಾಲ ಉಗ್ರಮಾರ್ಗವನ್ನು ಅನುಸರಿಸಿದರೂ ಭಾರತ, ಜಪಾನ, ಚೀನಗಳಲ್ಲಿ ಕ್ರೈಸ್ತ ಧರ್ಮ ಹಬ್ಬಿಸಲು ದುಡಿಯಿತು; ಯುರೋಪಿನಲ್ಲಿ ಪ್ರೊಟೆಸ್ಟಂಟ ಪಂಥದ ಹಬ್ಬುಗೆಯನ್ನು ತಡೆಯಿತು.

ಅಮೇರಿಕಾ ಖಂಡದ ಶೋಧವಾದ ಮೇಲೆ ಯಾವಾವ ರಾಜ್ಯದವರು ಎಲ್ಲೆಲ್ಲಿ ರಾಜ್ಯಸ್ಥಾಪಿಸಿದರೋ ಆಯಾ ರಾಜ್ಯದ ಧರ್ಮ ಅಲ್ಲಲ್ಲಿ ಹಬ್ಬಿತು. ಹೀಗೆ ಮಧ್ಯ ಮತ್ತು ದಕ್ಷಿಣ ಅಮೇರಿಕವು ಸ್ಪೇನದ ಪಾಲಾಗಿ ಕೆಥೋಲಿಕ ಪಂಥವನ್ನು ಆಶ್ರಯಿಸಿದರೆ ಉತ್ತರ ಅಮೇರಿಕವು ಹೆಚ್ಚಾಗಿ ಪ್ರೊಟೆಸ್ಟಂಟ ಪಂಥಿಯಾಗಿದೆ.

ಇದು ಕ್ರೈಸ್ತ ಧರ್ಮದ ೨,೦೦೦ ವರ್ಷಗಳ ಕಥೆ. ಈ ಅವಧಿಯಲ್ಲಿ ಕ್ರೈಸ್ತರು ಮೂರ ಪ್ರಧಾನಶಾಖೆಗಳಾಗಿ ಒಡೆದಿದ್ದಾರೆ. ಒಂದು, ರೋಮನ್ ಕೆಥೋಲಿಕ; ಎರಡು, ರಶಿಯ ಹಾಗು ಸುತ್ತ ಮುತ್ತಲಲ್ಲಿರುವ ಪೌರಸ್ತ್ಯ ಸಂಪ್ರದಾಯ; ಮೂರು, ನೂರಾರು ಶಾಖೆಗಳಾಗಿರುವ ಪ್ರೊಟೆಸ್ಟಂಟ್ ಪಂಥಗಳು. ಇವಲ್ಲದೆ ದಕ್ಷಿಣ ಭಾರತದಲ್ಲಿ ಪುರಾತನದಿಂದಲೂ ಬೆಳೆದುಬಂದ ಸೀರಿಯನ್ ಕ್ರೈಸ್ತಪಂಥ ಮೊದಲಾದವೂ ಇವೆ.

ಈ ಚಿಕ್ಕ ಚರಿತ್ರದಲ್ಲಿ ಕ್ರೈಸ್ತ ಧರ್ಮದ ಶಾಖೆಗಳಲ್ಲಿರುವ ಸಾಮ್ಯವೈಷಮ್ಯ, ಆಚಾರ ವೈವಿಧ್ಯಾದಿಗಳನ್ನು ವರ್ಣಿಸಲು ಸಾಧ್ಯವಿಲ್ಲ. ಕ್ರೈಸ್ತೇತರರಿಗೆ ಅದರ ಸೂಕ್ಷ್ಮಗಳು ಅರ್ಥವಾಗುವುದೂ ಕಷ್ಟ. ಯಾಕಂದರೆ ಅಚ್ಚ ಭಾರತೀಯ ಧರ್ಮಗಳ ಕಲ್ಪನೆಗಳಿಗೂ ಕ್ರೈಸ್ತ ಕಲ್ಪನೆಗಳಿಗೂ ಸಾಮ್ಯ ಕಡಿಮೆ.

ಸ್ಥೂಲವಾಗಿ ಹೇಳುವುದಾದರೆ ಕೆಥೋಲಿಕರಲ್ಲಿ ಧರ್ಮಾಚಾರಗಳಿಗೆ ಮಹತ್ವವಿದೆ; ಧಾರ್ಮಿಕ ವಿಚಾರಗಳಲ್ಲಿ ಧರ್ಮಪೀಠದ ಅಪ್ರತಿಹತ ಅಧಿಕಾರವಿದೆ. ಪೋಪನ ವರಿಷ್ಠತೆಯಲ್ಲಿ ಕೆಥೋಲಿಕ ಧರ್ಮಸಂಸ್ಥೆಯು ಯಾವುದೊಂದು ಪ್ರಬಲ

# ಕ್ರಿಸ್ತ ವಚನಾಮೃತ

( ಪರ್ವತ ಪ್ರಸಂಗದಿಂದ ಆಯ್ದುದು )

ಕರುಣೆಯುಳ್ಳವರು ಧನ್ಯರು; ಅವರು ಕರುಣಾಪಾತ್ರರಾಗುವರು. ನಿರ್ಮಲಚಿತ್ತರು ಧನ್ಯರು; ಅವರು ದೇವರನ್ನು ನೋಡುವರು.

ನೀತಿಯ ನಿಮಿತ್ತವಾಗಿ ಹಿಂಸೆಯನ್ನು ಸಹಿಸಿಕೊಳ್ಳುವವರು ಧನ್ಯರು; ಅವರು ಪರಲೋಕಕ್ಕೆ ಬಾಧ್ಯಸ್ಥರಾಗುವರು.

ನರಹತ್ಯೆ ಮಾಡಬಾರದು. ನರಹತ್ಯೆ ಮಾಡುವವನು ನ್ಯಾಯವಿಚಾರಣೆಗೆ ಗುರಿಯಾಗುವನು. ಹತ್ಯೆ ಮಾಡುವದಂತಿರಲಿ, ತನ್ನ ಸಹೋದರನ ಮೇಲೆ ಸಿಟ್ಟಿಗೇಳುವ ಪ್ರತಿ ಮನುಷ್ಯನು (ದೇವರ) ನ್ಯಾಯ ವಿಚಾರಣೆಗೆ ಗುರಿಯಾಗುವನು.

ನಿನ್ನ ಬಲಗಣ್ಣು ನಿನ್ನನ್ನು ಪಾಪದಲ್ಲಿ ಸಿಕ್ಕಿಸುವುದಾದರೆ ಅದನ್ನು ಕಿತ್ತು ಬಿಸುಟುಬಿಡು; ನಿನ್ನ ದೇಹವೆಲ್ಲಾ ನರಕದಲ್ಲಿ ಬೀಳುವುದಕ್ಕಿಂತ ಅವಯವಗಳಲ್ಲಿ ಒಂದು ಹೋಗುವುದು ಹಿತವಲ್ಲವೆ?

ಕೆಡುಕನ್ನು ಎದುರಿಸಬೇಡ. ಒಬ್ಬನು ನಿನ್ನ ಬಲಗೆನ್ನೆಯ ಮೇಲೆ ಹೊಡೆದರೆ ಅವನಿಗೆ ಮತ್ತೊಂದು ಕೆನ್ನೆಯನ್ನು ಒಡ್ಡು. ನಿನ್ನ ಸಂಗಡ ವ್ಯಾಜ್ಯ ಮಾಡಿ ನಿನ್ನ ಒಳ ಅಂಗಿಯನ್ನು ತೆಗೆದುಕೊಳ್ಳಬೇಕೆಂದಿದ್ದವನಿಗೆ ಮೇಲಂಗಿಯನ್ನೂ ಬಿಡು.

ನಿನ್ನನ್ನು ಬೇಡುವವನಿಗೆ ಕೊಡು. ನಿನ್ನಲ್ಲಿ ಕಡ ಈಸಿಕೊಳ್ಳಬಂದವನಿಗೆ ಮುಖ ತಿರುವಿಕೊಳ್ಳಬೇಡ.

ನಿಮ್ಮನ್ನು ಹಿಂಸೆ ಪಡಿಸುವವರಿಗೋಸ್ಕರ ಪ್ರಾರ್ಥಿಸಿರಿ. ಹೀಗೆ ಮಾಡಿದರೆ ನೀವು ಪರಲೋಕದಲ್ಲಿರುವ ನಿಮ್ಮ ತಂದೆಗೆ ಮಕ್ಕಳಾಗುವಿರಿ. ನಿಮಗೆ ಪ್ರೀತಿ ತೋರಿಸುವವರನ್ನೇ ಪ್ರೀತಿಸಿದರೆ ನಿಮ್ಮ ಹೆಚ್ಚಳವೇನು? ಭಂಡರೂ ತಮ್ಮನ್ನು ಪ್ರೀತಿಸುವವರನ್ನು ಪ್ರೀತಿಸುತ್ತಾರೆ.

ಜನರು ನೋಡಲಿ ಎಂದು ನಿಮ್ಮ ಧರ್ಮಕಾರ್ಯಗಳನ್ನು ಅವರ ಮುಂದೆ ಮಾಡಬಾರದು. ಹಾಗೆ ಮಾಡಿದರೆ ಪರಲೋಕದಲ್ಲಿರುವ ನಿಮ್ಮ ತಂದೆಯ ಹತ್ತಿರ ನಿಮಗೆ ಫಲ ಸಿಕ್ಕದು.

ಪ್ರಾರ್ಥನೆ ಮಾಡುವಾಗ ಅಜ್ಞಾನಿಗಳ ಹಾಗೆ ಹೇಳಿದ್ದನ್ನೇ ಸುಮ್ಮಸುಮ್ಮನೆ ಹೇಳಬೇಡ. ಬಹಳ ಮಾತುಗಳನ್ನಾಡಿದರೆ ತಮ್ಮ ಪ್ರಾರ್ಥನೆಯನ್ನು ದೇವರು ಕೇಳುತ್ತಾನೆಂದು ಜನರು ನೆನೆಸುತ್ತಾರೆ.

ನಾಳಿನ ವಿಷಯವಾಗಿ ಚಿಂತೆಮಾಡಬೇಡಿರಿ. ನಾಳಿನ ದಿನವು ತನ್ನದನ್ನು ತಾನೇ ಚಿಂತಿಸಿಕೊಳ್ಳುವದು.

ಇಕ್ಕಟ್ಟಾದ ಬಾಗಿಲಿಂದ ಒಳಕ್ಕೆ ಹೋಗಿರಿ. ಯಾಕಂದರೆ ನಾಶಕ್ಕೆ ಹೋಗುವ ಬಾಗಿಲು ದೊಡ್ಡದು; ದಾರಿ ಅಗಲ. ಅಲ್ಲಿಗೆ ಬಹಳ ಜನ ಹೋಗುವವರು. ಅಮರ ಜೀವನಕ್ಕೆ ಹೋಗುವ ಬಾಗಿಲು ಇಕ್ಕಟ್ಟು; ದಾರಿ ಬಿಕ್ಕಟ್ಟು. ಅದನ್ನು ಕಂಡುಹಿಡಿದವರು ಸ್ವಲ್ಪ ಮಂದಿ.

ಸುಳ್ಳು ಪ್ರವಾದಿಗಳ ವಿಷಯದಲ್ಲಿ ಎಚ್ಚರವಾಗಿರಿ. ಅವರು ಕುರೀ ವೇಷ ಹಾಕಿಕೊಂಡು ನಿಮ್ಮ ಬಳಿಗೆ ಬರುತ್ತಾರೆ. ಆದರೆ ಒಳಗೆ ನೋಡಿದರೆ ಅವರು ಹಿಡಿದುಕೊಂಡು ಹೋಗುವ ತೋಳಗಳೇ.

**ಬೇಡಿಕೊಳ್ಳಿರಿ, ನಿಮಗೆ ದೊರೆಯುವದು; ಹುಡುಕಿರಿ, ನಿಮಗೆ ಸಿಕ್ಕುವದು; ತಟ್ಟಿರಿ, ನಿಮಗೆ ತೆರೆಯುವದು. ನಿಮ್ಮಲ್ಲಿ ಯಾವನಾದರೂ ರೊಟ್ಟಿ ಕೇಳುವ ಮಗನಿಗೆ ಕಲ್ಲನ್ನು ಕೊಡುವನೆ? ಪರಲೋಕದಲ್ಲಿರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಒಳ್ಳೇ ವರಗಳನ್ನು ಕೊಡುವನು.**

## ಇದು ಕ್ರೈಸ್ತರ ವಿಶ್ವಾಸ

ತಂದೆಯಾದ ದೇವರಲ್ಲಿ ನಂಬಿಕೆ ಇಡು; ಅವನು ಸರ್ವಶಕ್ತ. ಅವನು ಭೂಮ್ಯಾಕಾಶಗಳ ಕರ್ತ.

ದೇವರ ಏಕಮಾತ್ರ ಪುತ್ರನಾದ ಯೇಸು ಕ್ರಿಸ್ತನಲ್ಲಿ ನಂಬಿಕೆ ಇಡು; ಅವನೇ ನಮ್ಮ ಸ್ವಾಮಿ. ಅವನು ಪಾವನ ಪರಮಾತ್ಮ ಸಂಭೂತನಾಗಿ ಕನ್ನಿಕೆ ಮೇರಿಯ ಗರ್ಭದಲ್ಲಿ ಉದ್ಭವಿಸಿದನು. ಅವನು ಪೊಂಟಿಯುಸ ಪಿಲಾತನ ಕೈಯಲ್ಲಿ ಕ್ಲೇಶಗಳನ್ನು ಅನುಭವಿಸಿ, ಸಿಲುಬೆಗೇರಿಸಲ್ಪಟ್ಟು, ಸತ್ತು ಹೂಳಲ್ಪಟ್ಟನು. ಅವನು ನರಕಕ್ಕಿಳಿದನು; ಮೂರನೇ ದಿನ ಸತ್ತವರ ಮಧ್ಯದಿಂದ ಪುನಃ ಎದ್ದು ಬಂದನು. ಅವನು ಸ್ವರ್ಗಕ್ಕೇರಿದನು ಮತ್ತು ಅಲ್ಲಿ ಸರ್ವಶಕ್ತನಾದ ತಂದೆಯಾದ ದೇವರ ಬಲ ಮಗ್ಗುಲಲ್ಲಿ ಕುಳಿತಿದ್ದಾನೆ. ಅಲ್ಲಿಂದ ಅವನು ಬರಲಿದ್ದಾನೆ, ಬದುಕಿರುವವರನ್ನೂ ಸತ್ತವರನ್ನೂ ವಿಚಾರಿಸಿ ನ್ಯಾಯ ಕೊಡಲಿದ್ದಾನೆ.

ಪವಿತ್ರಾತ್ಮವನ್ನು ನಂಬು. ಪಾವನ ಕೆಥೋಲಿಕ ಧರ್ಮಪೀಠವನ್ನು ನಂಬು. ಸಂತರ ಸಾಕ್ಷಾತ್ಕಾರವನ್ನು ನಂಬು. ಪಾಪಗಳಿಗೆ ಕ್ಷಮೆಯಿದೆಯೆಂದು ನಂಬು. ದೇಹದ ಪುನರುತ್ಥಾನವನ್ನು ನಂಬು. ಜೀವನದ ಅನಂತತ್ವವನ್ನು ನಂಬು. ತಥಾಸ್ತು!

ಕೇಂದ್ರ ಸರಕಾರದಂತೆಯೇ ಸಂಘಟಿತವಾಗಿದೆ. ಪ್ರೊಟೆಸ್ಟೆಂಟ್ ಪಂಥ ಸುಧಾರಣೆಯ ಹುರುಪಿನಲ್ಲಿ ಹುಟ್ಟಿದ್ದು. ಅದು ದೇವರಿಗೂ ಮನುಷ್ಯನಿಗೂ ನಡುವೆ ಪಾದ್ರಿಯ ದಲ್ಲಾಳಿ ಬೇಡವೆನ್ನುತ್ತದೆ.

ಕ್ರೈಸ್ತ ಧರ್ಮವು ಇಂದಿಗೂ ಒಗ್ಗಟ್ಟಾಗದಂತೆ ಬೇರೆ ಬೇರೆ ಪಂಥಗಳಾಗಿ ಒಡೆದಿದ್ದರೂ ಅದರ ಮೂಲ ವಿಶ್ವಾಸವೊಂದೇ. ಕ್ರಿಸ್ತನು ಮಾನವನ ಏಕಮಾತ್ರ ಉದ್ಧಾರಕನೆಂಬುದೇ ಅದು. ಕ್ರಿಸ್ತನ ಅನುಯಾಯಿಗಳು ಧರ್ಮಾಂಧತೆಯಿಂದ ಕೆಲವೊಮ್ಮೆ ಕ್ರೂರಾಚಾರಗಳನ್ನು ಮಾಡಿದ್ದರೂ ಸೇವಾತತ್ವಕ್ಕೆ ಕ್ರಿಸ್ತಧರ್ಮ ಕೊಟ್ಟ ಪ್ರಾಧಾನ್ಯವನ್ನು ಮತ್ತಾವ ಧರ್ಮವೂ ಕೊಟ್ಟಿಲ್ಲ. ಕ್ರಿಸ್ತನು ತನ್ನ ಜೀವಮಾನದಲ್ಲಿ ಸ್ವತಃ ದೀನದರಿದ್ರರ, ದುಃಖಿ-ಪಾಪಿಗಳ ಕಷ್ಟ ನಿವಾರಣೆಗಾಗಿ ಹೆಣಗಿದ್ದು ಜಗತ್ತಿನ ದುರ್ಗಮ ಭಯಾನಕ ಪ್ರದೇಶಗಳಲ್ಲಿಯೂ ಕ್ರೈಸ್ತ ಸೇವಾ ಪಥಕಗಳ ಸ್ಥಾಪನೆಗೆ ಸ್ಫೂರ್ತಿಯಿತ್ತಿತು.

ಕ್ರಿಸ್ತ ಧರ್ಮದ ಮೇಲಿನ ಚರಿತ್ರೆಯಿಂದ ಅದರ ಬಗ್ಗೆ ತಪ್ಪು ಅಭಿಪ್ರಾಯವಾಗಬಹುದಾಗಿದೆ. ಅದರ ಪ್ರಸಾರಕ್ಕೆ ಕೇವಲ ರಾಜಾನುಗ್ರಹ, ರಾಜಾಜ್ಞೆ ಮತ್ತು ಧರ್ಮಪ್ರಸಾರಕರ ಒತ್ತಂಕೆ ಕಾರಣವಾಯಿತೆನಿಸಬಹುದು.

ಆದರೆ ವಸ್ತುಸ್ಥಿತಿ ಹಾಗಿಲ್ಲ. ಕ್ರೈಸ್ತ ಧರ್ಮದ ಪ್ರಸಾರದ ಮುಖ್ಯ ಕಾರಣವೆಂದರೆ, ಅದರ ಸ್ವರೂಪ ಮತ್ತು ಅದರ ಅನುಯಾಯಿಗಳಿಗೆ ಕ್ರಿಸ್ತನಲ್ಲಿಯೂ ಅವನು ತೋರಿಸಿದ ದಾರಿಯಲ್ಲಿಯೂ ಇದ್ದ ಅಮಿತ ವಿಶ್ವಾಸ. ಕ್ರಿಸ್ತ ಧರ್ಮವು ಬಹು ಕಾಲದಿಂದ ಹಲವು ಕ್ರೂರ ದೈವಗಳ ಅರ್ಚನೆಯಲ್ಲಿ ತೊಳಲುತ್ತಿದ್ದ ಯುರೋಪಿನ ಅನಾಗರಿಕ ಜನಗಳಿಗೆ ಒಬ್ಬನೇ ಸರ್ವಶಕ್ತ ಕರುಣಾಮಯ ದೇವನ ಮತ್ತು ಅವನ ದೂತನ ಬೆಳಕನ್ನು ಪರಿಣಾಮಕರವಾಗಿ ತೋರಿಸಿದವು. ಅವರನ್ನು ತಾಮಸದಿಂದ ಸಾತ್ವಿಕದ ಕಡೆ ಹೊರಳಿಸಿದವು. ಕ್ರೈಸ್ತ ಧರ್ಮವು ನಾಗರಿಕತೆ-ಸಂಸ್ಕೃತಿಗಳ ದೀವಟಿಗೆಯಾಗಿ ಯುರೋಪವನ್ನು ಉದರಿಸಿತು.

# “ನಿನ್ನ ರಾಜ್ಯದ ಸೀಮೆಯೆಲ್ಲಿ?”



**ಮಹಾಭಾರತದ ಒಂದು ನೀತಿ ಕಥೆ**

ಮಹಾರಾಜ ಜನಕನು ಅಧ್ಯಾತ್ಮವಾದಿಯಾಗಿದ್ದಷ್ಟೇ ರಾಜ್ಯಧರ್ಮನಿಷ್ಠನೂ ಆಗಿದ್ದನು. ಶಿಕ್ಷಾರ್ಹರಾದವರನ್ನು ಅವನು ಎಂದಿಗೂ ಸುಮ್ಮನೆ ಬಿಡುತ್ತಿರಲಿಲ್ಲ; ಒಮ್ಮೆ ಒಬ್ಬ ಬ್ರಾಹ್ಮಣನಿಂದ ಜನಕನ ರಾಜ್ಯದಲ್ಲಿ ಮಹಾಪರಾಧವೊಂದು ನಡೆಯಿತು. ಬ್ರಾಹ್ಮಣನಾದ್ದರಿಂದ ಅಪರಾಧಿಯನ್ನು ಗಲ್ಲಿಗೇರಿಸುವ ಹಾಗಿರಲಿಲ್ಲ. ಜನಕ ವಿಚಾರ ಮಾಡಿ ಕೊನೆಗೆ ಅವನಿಗೆ ಗಡಿಪಾರಿನ ಶಿಕ್ಷೆಯನ್ನು ವಿಧಿಸಿದನು.

ಶಿಕ್ಷೆಗೆ ಒಳಗಾದ ಬ್ರಾಹ್ಮಣನು ಮಹಾಧೂರ್ತನೂ ಆಗಿದ್ದನು. ಜನಕ ಮಹಾರಾಜನು ತನಗೆ ಗಡಿಪಾರಿನ ಶಿಕ್ಷೆ ವಿಧಿಸಿದನೆಂದು ಅವನ ಮೈಮನಸುಗಳಲ್ಲಿ ಯಾವ ಪರಿಣಾಮವೂ ಆದಂತೆ ಕಂಡುಬರಲಿಲ್ಲ!

“ಒಡೆಯ, ತಮ್ಮ ಆಜ್ಞೆಯನ್ನು ಶಿರಸಾ ಪಾಲಿಸುವೆನು. ಆದರೆ ತಮ್ಮ ರಾಜ್ಯದ ಗಡಿ ಯಾವುದು? ಈ ರಾಜ್ಯದ ಗಡಿ ತಿಳಿದರೆ ಅದರಿಂದ ಹೊರಗೆ ಹೋಗುವುದಕ್ಕೆ ನನಗೆ ಅನುಕೂಲವಾದೀತು.”

ಜನಕರಾಜನ ಸಭೆಯ ಜನರು ಸಹಾ [illegible] ಮೇಧಿಲೆಯಾದ ಧರಣೀಶಮಣೀರಮಣನ [illegible] ಇಂತಹ ಅರಿತಾಡಿಸುವ ಹುಚ್ಚು [illegible] ಒಂದು ಸಕ್ಕರೂ ಅಪರಾಧಿಯ [illegible] ಬೆರಗಾದರು.

ಆದರೆ ಜನಕರಾಜ ಬೆರಗಾಗದೆ ಚಿಂತಾವಶನಾದ.

“ವಂಶಪರಂಪರೆಯಿಂದ ಬಂದ ಜಗತ್ತೇ ತನ್ನದು. ಅದರ ಅಧಿಕಾರವೂ ತನ್ನದೇ. ಆದರೆ ಜಗತ್ತಿನಲ್ಲಿ ಮಾಂಡಲಿಕರಿದ್ದಾರೆ; ಅವರಿಗೂ ಅಧಿಕಾರವಿದೆ. ಎಂದ ಮೇಲೆ ಮಿಥಿಲೆಯ ಮೇಲೆ ಮಾತ್ರ ತನ್ನ ಸರ್ವಾಧಿಕಾರ....” ಜನಕರಾಜ ವಿಚಾರಿಸುತ್ತ ಹೋದಂತೆ ತನ್ನ ಅಧಿಕಾರ ಕ್ಷೇತ್ರ ಕಡಿಮೆಯಾಗುತ್ತಿರುವುದು ಕಂಡಿತು. ಆತ್ಮಜ್ಞಾನದ ಬೆಳಕಿನಲ್ಲಿ ಮತ್ತೂ ಮತ್ತೂ ಅವನು ತನ್ನ ಅಧಿಕಾರ ಕ್ಷೇತ್ರವನ್ನು ಪರಿಶೀಲಿಸುತ್ತ ಹೋದ. ಕೊನೆಗೆ ತನ್ನ ಅಧಿಕಾರಕ್ಕೆ ಒಳಗಾದ ಪ್ರದೇಶ[illegible] ಅವನು [illegible]. ಮತ್ತು ಬ್ರಾಹ್ಮಣನಿಗೆ ಹೇಳಿದ:

“ಯಾವ ವಸ್ತುವಿನ ಮೇಲೂ ನನ್ನ ಅಧಿಕಾರ ಇಲ್ಲ; [illegible] ಇಷ್ಟ ಬಂದಲ್ಲಿ [illegible]; [illegible].”

ಈಗ ಬ್ರಾಹ್ಮಣನಿಗೆ ಆಶ್ಚರ್ಯವಾಯಿತು ಜನಕ ರಾಜನ [illegible]. ಅವನು ಕುತೂಹಲದಿಂದ ಕೇಳಿದ:

“ಈ ದೊಡ್ಡ [illegible] ತಾವು [illegible]; ಮತ್ತೇಕೆ ಜಗತ್ತಿನ ಮೇಲೆ ಅಧಿಕಾರವನ್ನು ಚಲಾಯಿಸುತ್ತಿರುವಿರಿ?”

ಜನಕರಾಜ ಹೇಳಿದ:

“[illegible]

## ಪ್ರೀತಿಯ ಪದಾರ್ಥ

ಬರ್ಮಾದ ಹೋಟೆಲೊಂದರಲ್ಲಿ ಕುಳಿತು ನಾಲ್ವರು ವಾದವಿವಾದಕ್ಕೆ ತೊಡಗಿದರು. ಜಗತ್ತಿನಲ್ಲಿ ಎಲ್ಲದಕ್ಕಿಂತಲೂ ಪ್ರೀತಿಯ ವಸ್ತು ಯಾವುದೆಂಬುದು ಚರ್ಚೆಯ ವಿಷಯವಾಗಿತ್ತು.

ಒಬ್ಬನೆಂದ "ಹಣ."

ಇನ್ನೊಬ್ಬನೆಂದ "ಹಣವಲ್ಲ, ಮಕ್ಕಳು ಮರಿಗಳು."

ಮಗದೊಬ್ಬ ಆತುರನಾಗಿ ನುಡಿದ "ಅಲ್ಲ; ಹೆಣ್ಣೇ ಹೆಚ್ಚು ಪ್ರೀತಿ ಪಾತ್ರಳು."

ನಾಲ್ಕನೆಯವನು "ಸ್ತ್ರೀಯೆಂದೇನು? ನಮ್ಮ ಪರಿವಾರವೆಲ್ಲವೂ ಪ್ರೀತಿಪಾತ್ರವಾದುದೇ" ಎಂದುಬಿಟ್ಟ.

ಒಡನೆಯೇ ಜಪಾನಿನ ವಿಮಾನಗಳು ಬಾಂಬು ಸುರಿಸತೊಡಗಿದವು. ಎಲ್ಲರೂ ಉಸಿರು ಹಿಡಿದುಕೊಂಡು ಓಡಿದರು.

ಮರುದಿನ ದೂರದ ಕಾಡಿನಲ್ಲಿ ನಾಲ್ವರೂ ಸೇರಿದಾಗ "ನಾನು ಎಲ್ಲ ಸಂಪತ್ತನ್ನು ಬಿಟ್ಟು ಬಂದೆನಲ್ಲಾ" ಎಂದು ಒಬ್ಬನೆಂದರೆ ಇನ್ನೊಬ್ಬನು "ಓಡಿ ಬರುವಾಗ ಒಮ್ಮೆ ಮಕ್ಕಳ ಮುಖವನ್ನಾದರೂ ನೋಡಿ ಬರಲಾಗಲಿಲ್ಲ" ಎಂದ. ಮೂರನೆಯವನು "ನಾನು ಪತ್ನಿಯಿಂದ ಅಗಲುವಂತಾಯಿತಲ್ಲ" ಎಂದು ಕರುಬಿದ. ನಾಲ್ಕನೆಯವನು ಹೇಳಿದ "ನಾನು ಪರಿವಾರವನ್ನೂ ಬಿಟ್ಟು ಓಡಿಬಂದೆ."

ನಾನು ನಿನ್ನೆಯೂ ಅವರೊಡನೆ ಆ ಹೋಟೆಲಲ್ಲಿದ್ದೆ; ಇಂದು ಕಾಡಿನಲ್ಲಿ ಅವರು ಪಶ್ಚಾತ್ತಾಪಪಡುತ್ತಿರುವುದನ್ನು ನೋಡಿದೆ. ತಮ್ಮ ಪ್ರಿಯ ವಸ್ತುವಿನ ವಿಚಾರ ಅವರಿಗೆ ತಿಳಿಯದಿದ್ದರೂ ನನಗೆ ಮಾತ್ರ ತಿಳಿದುಹೋಗಿತ್ತು.

ಗಿಯೇ ತೀರುವುದು. ಅದರಿಂದ ಅಧಿಕಾರಿಯಾಗಲಿ ಅಧಿಕಾರಯೋಗ್ಯ ವಸ್ತುವಾಗಲಿ ಜಗತ್ತಿನಲ್ಲಿ ದೊರೆಯದು. ಎಂದಮೇಲೆ ನಾನು ನನ್ನದೆಂದು ಯಾವ ವಸ್ತುವನ್ನಾದರೂ ಹೇಗೆ ತಿಳಿಯಲಿ? ಆದರೆ ನಾನು ವಿಶ್ವದ ಮೇಲೆ ಹೇಗೆ ಅಧಿಕಾರ ಚಲಾಯಿಸುತ್ತೇನೆ? ಈ ಪ್ರಶ್ನೆಗೆ ಉತ್ತರವೂ ಇಲ್ಲಿಯೇ ಇದೆ. ನನ್ನ ತೃಪ್ತಿಗಾಗಿ ಏನನ್ನೂ ಮಾಡುವುದಿಲ್ಲ. ದೇವ, ಪಿತೃ, ಭೂತ, ಮತ್ತು ಅತಿಥಿಸೇವೆಗಾಗಿ ನಾನು ಎಲ್ಲ ಕಾರ್ಯಗಳನ್ನು ನಡೆಸುವೆನು. ಅದರಿಂದಲೇ ಬೆಂಕಿ, ನೀರು, ನೆಲ, ಗಾಳಿ, ಬಾನು ಮತ್ತು ನನ್ನ ಮನಸಿನ ಮೇಲೆ ನನ್ನ ಅಧಿಕಾರವಿದೆ."

ಜನಕರಾಜನ ಮಾತು ಕೇಳಿ ಬ್ರಾಹ್ಮಣನ ಆಕಾರ ಬದಲಾಯಿತು. ಅವನ ಶರೀರವು ದಿವ್ಯ ರೂಪವನ್ನು ಹೊಂದಿತು. ಈ ಹೊಸ ಆಕೃತಿಯನ್ನು ಜನಕರಾಜ ಕಣ್ದಣಿಯೆ ನೋಡುತ್ತಿರುವಂತೆ ಮುಗುಳುನಗೆಯ ಆ ದಿವ್ಯರೂಪಿಯು ತನ್ನ ಪರಿಚಯ ಮಾಡಿಕೊಡುತ್ತ "ಜನಕರಾಜ, ಬ್ರಾಹ್ಮಣ ವೇಷಧಾರಿ ಧರ್ಮ ನಾನು; ನಿನ್ನ ಪರೀಕ್ಷೆಗಾಗಿಯೇ ಇಲ್ಲಿ ಬಂದು ವಾಸಿಸಿದೆ; ಸತ್ವಗುಣಯುತನಾದ ನೀನು ಬ್ರಹ್ಮೈಕ್ಯನಾಗುವೆಯೆಂದು ನಾನಾಗಲೇ ತಿಳಿದಿರುವೆನು," ಎಂದನು.



ಸೇನಾಪತಿಯಾಗಿದ್ದರೂ
ಶಾಂತಿಪಕ್ಷಪಾತಿ

# ಅಧ್ಯಕ್ಷ ಡ್ವೈಟ್ ಐಸೆನ್‌ಹಾವರ್

ಐಸೆನ್‌ಹಾವರರನ್ನು ಅಮೇರಿಕದ ಜನತೆ ಪುನಃ ರಾಷ್ಟ್ರಾಧ್ಯಕ್ಷ ಪದಕ್ಕೆ ಆರಿಸಿದೆ. ಅವರ ಆಯ್ಕೆ ಪ್ರಚಂಡ ಬಹುಮತದಿಂದ ಆಗಿದೆ.

ಡ್ವೈಟ್ ಡೇವಿಡ್ ಐಸೆನ್‌ಹಾವರರು ಸೇನಾಪತಿಯೆಂದು ಪ್ರಖ್ಯಾತಿಪಡೆದವರು. ಅಮೇರಿಕದ ಇತಿಹಾಸದಲ್ಲಿ ಹಿಂದೆ ಸೇನಾಪತಿಗಳು ಅಧ್ಯಕ್ಷತೆಗೆ ಬಂದಾಗ ಅಷ್ಟೇನೂ ಹಿರಿಮೆ ತೋರಿಸಲಿಲ್ಲ. ಆದರೆ ಐಸೆನ್‌ಹಾವರರು ಇದಕ್ಕೆ ಅಪವಾದ. ಅವರು ತಮ್ಮ ಮೊದಲ ನಾಲ್ಕು ವರ್ಷಗಳ ಅಧಿಕಾರಾವಧಿಯಲ್ಲಿ ಜನಪ್ರಿಯತೆಯನ್ನು ಇನ್ನಷ್ಟು ಹೆಚ್ಚಿಸಿಕೊಂಡಿದ್ದಾರೆ.

ವಾಸ್ತವಿಕವಾಗಿ ಇಂದಿನ ಕಾಲದಲ್ಲಿ ರಾಜನೀತಿಯದಲ್ಲಿಯೂ ಅವರಂತೆ ಯಶಸ್ವಿಯಾದ ಸೇನಾಧಿಕಾರಿ ಜಗತ್ತಿನಲ್ಲಿ ಬೇರೆ ಒಬ್ಬರು ಮಾತ್ರ ಇದ್ದಾರೆ. ಅವರು, ಭಾರತದ ಕೊನೆಯ ವೈಸ-ರಾಯರಾದ ಮೌಂಟ್‌ಬ್ಯಾಟನ್ನರು. ಆದರೆ ಅವರು ಕೂಡ ಐಸೆನ್‌ಹಾವರರಂತೆ ಪ್ರತ್ಯಕ್ಷ ರಾಜಕಾರಣಕ್ಕೆ ಇಳಿದವರಲ್ಲ.

ಅವರು ತಮ್ಮ ಮೊದಲನೇ ಅಧ್ಯಕ್ಷಪದಾವಧಿಯಲ್ಲಿ ಅನೇಕ ದೊಡ್ಡ ಕೆಲಸಗಳನ್ನು ಸಾಧಿಸಿದರು. ತಾವು ಸ್ವತಃ ಯುದ್ಧದಲ್ಲಿ ಪಳಗಿದವರಾದರೂ ಕೊರಿಯದಲ್ಲಿ, ಇಂಡೋಚೀನದಲ್ಲಿ ಶಾಂತಿ ಸ್ಥಾಪನೆಗೆ ಸಕ್ರಿಯ ಸಹಾಯಮಾಡಿದರು. ಸಂಗಡಲೇ ಕಮ್ಯುನಿಸ್ಟರ ಏರಾಟಿಕೆಯನ್ನು ತರುಬಲೂ ಅವರು ಸಮರ್ಥರಾದರು. ಅವರು ಅಧಿಕಾರಕ್ಕೆ ಬಂದ ಒಂದು ವರ್ಷದಲ್ಲಿ ಸ್ಟಾಲಿನ್ನರು ಸತ್ತದ್ದರಿಂದ ಐಸೆನ್‌ಹಾವರರಿಗೆ ಕಮ್ಯುನಿಸ್ಟರನ್ನು ಅಂಕೆಯಲ್ಲಿಡಲು ಅನುಕೂಲವಾಯಿತೆಂಬುದು ನಿಜ. ಆದರೆ ಕಮ್ಯುನಿಸ್ಟರಿಗೆ ಸವಲತ್ತು ಕೊಡದೆಯೂ ಜಗತ್ತನ್ನು ಯುದ್ಧದ ಹಾದಿಯಿಂದ ಹಿಂದೆಗೆಯಲು ಐಸೆನ್‌ಹಾವರರು ಬಹಳ ಮಟ್ಟಿಗೆ ಸಮರ್ಥರಾಗಿದ್ದಾರೆ. ಅದಕ್ಕೆ ಅವರ ಶಾಂತಿಪ್ರಿಯತೆಯೂ ಕಾರಣವಾಗಿದೆ. ಸ್ವತಃ ಕಮ್ಯುನಿಸ್ಟರು ಕೂಡ ಐಸೆನ್‌ಹಾವರರನ್ನು ಅವರ ಗೌರವಗಳಿಂದ ಕಾಣುತ್ತಾರೆ.

ಸ್ವದೇಶದಲ್ಲಂತೂ ಐಸೆನ್‌ಹಾವರರು ಅತ್ಯಂತ ಜನಪ್ರಿಯರಾಗಿದ್ದಾರೆ. ಅವರ ಆಯ್ಕೆ ಅವರ ಸ್ವಂತ ಲೋಕಪ್ರಿಯತೆಯಿಂದಾಯಿತೇ ಹೊರತು, ಅವರ ಪಕ್ಷವಾದ ರಿಪಬ್ಲಿಕನ್ನರ ಮೇಲೆ ಬಹುಸಂಖ್ಯಾಕರಿಗೆ ಅಭಿಮಾನವಿದ್ದುದರಿಂದಲ್ಲ. ಅಮೇ

ರಿಕದ ಪಾರ್ಲಿಮೆಂಟಾದ ಕಾಂಗ್ರೆಸ್ಸಿನಲ್ಲಿ ಅವರ ಪಕ್ಷಕ್ಕೆ ಈ ಸಲ ಬಹುಮತ ಕೂಡ ಸಿಗಲಿಲ್ಲ. ಕಳೆದ ವರ್ಷ ಐಸೆನ್‌ಹಾವರರಿಗೆ ಹೃದಯ ವಿಕಾರವಾಗಿದ್ದು ಅವರು ಹೊಳೆಗೆ ಬಾಗಿದ ಮರ ವೆನಿಸಿದ್ದರೂ ಜನರು ಅವರನ್ನೇ ಆರಿಸಿದ್ದಾರೆ.

ಐಸೆನ್‌ಹಾವರರು ೧೮೯೦ ರಲ್ಲಿ ಟೆಕ್ಸಾಸ ಪ್ರಾಂತದ ಡೆನಿಸನ್ ಎಂಬ ಚಿಕ್ಕ ಪಟ್ಟಣದಲ್ಲಿ ಬಡ ಮನೆತನದಲ್ಲಿ ಹುಟ್ಟಿದರು. ಅವರ ಮುತ್ತ-ಜ್ಜಂದಿರು ಸ್ವಿಸ್‌ಜರ್ಮನ್ ಮೂಲದವರಾಗಿದ್ದು ೧೮ ನೇ ಶತಮಾನದಲ್ಲಿ ಅಮೇರಿಕಕ್ಕೆ ಬಂದು ನೆಲಸಿದವರು. ಐಸೆನ್‌ಹಾವರರು ಅಮೇರಿಕದ ಸೈನಿಕ ವಿದ್ಯಾಲಯದಲ್ಲಿ ಶಿಕ್ಷಣ ಹೊಂದಿ ೧೯೧೫ ರಲ್ಲಿ ಕಾಲ್ದಳದ ಲೆಫ್ಟಿನೆಂಟರಾದರು. ಅವರ ಶಾಲಾಜೀವನದಲ್ಲಾಗಲಿ ಮುಂದೆ ಬಹುಕಾಲದ ಮಿಲಿಟರಿ ಜೀವನದಲ್ಲಾಗಲಿ ಅಂಥ ಪ್ರತಿಭೆ ಕಾಣಿಸಲಿಲ್ಲ. ೧೯೩೯ ರಲ್ಲಿ ಮಹಾಯುದ್ಧ ಪ್ರಾರಂಭವಾದಾಗ ಅವರಿನ್ನೂ ಅಜ್ಞಾತ ಲೆಫ್ಟಿನೆಂಟ ಕರ್ನಲ್ಲರಾಗಿಯೇ ಇದ್ದರು.

೧೯೪೧ ರಿಂದ ಅವರ ಪ್ರಚಂಡ ಪ್ರಗತಿ ಆರಂಭವಾಯಿತು. ಮೂರನೇ ಸೈನ್ಯದ ಚೀಫ್ ಆಫ್ ಸ್ಟಾಫರಾಗಿ ಅವರು ಮಾಡಿದ ಕಾರ್ಯದಿಂದ ಮರುವರ್ಷ ಅವರು ಬ್ರಿಗೇಡಿಯರ ಜನರಲ್ಲರಾಗಿ ಬಡತಿ ಪಡೆದರು. ಯುರೋಪಿಯನ್ ವಿಭಾಗದ ಸೇನಾಪತಿಯಾಗಿ ಅವರು ಉತ್ತರ ಆಫ್ರಿಕ ಸಿಸಿಲಿಗಳಲ್ಲಿ ತೋರಿಸಿದ ರಣಕೌಶಲವೂ ಸೈನಿಕರಲ್ಲಿ ಅವರು ಗಳಿಸಿದ ಜನಪ್ರಿಯತೆಯೂ ಅವರನ್ನು ಅವರ ಮಿಲಿಟರಿ ಜೀವನದ ಪರಾಕಾಷ್ಠೆಗೆ ತಲಪಿಸಿದವು: ಅವರನ್ನು ಹಿಟ್ಲರನ ಅಂತಿಮ ನಾಶಕ್ಕೆ ಕಾರಣವಾದ ಯುರೋಪಿನ ದಾಳಿಯಲ್ಲಿ ಮಿತ್ರ (ಅಮೇರಿಕನ್, ಬ್ರಿಟಿಶ, ಫ್ರೆಂಚ ಇತ್ಯಾದಿ ಎಲ್ಲ) ದಳಗಳ ವರಿಷ್ಠ ಸೇನಾಪತಿ ಪದವಿಗೇರಿಸಲಾಯಿತು.

ಈ ಪದವಿಯಲ್ಲಿ ಅವರು ಯುದ್ಧಗಳ ಇತಿಹಾಸದಲ್ಲೇ ಅಗಾಧವಾದ ನೆಲ - ಜಲ ದಾಳಿಯನ್ನು ಯೋಜಿಸಿ ೧೯೪೪ ಜೂನ್ ೬ ನೇ ದಿನ ಫ್ರಾನ್ಸಿನಲ್ಲಿ ಮಿತ್ರಪಡೆಗಳನ್ನು ಇಳಿಸಿದರು. ಈ ಕಲ್ಪನಾತೀತ ಸಾಹಸದಲ್ಲಿ ಅವರ ನಾಯಕತ್ವದ ಯಶಸ್ಸು ಇತಿಹಾಸಪ್ರಸಿದ್ಧವೇ ಆಗಿದೆ. ಸ್ವತಃ ಅಸಾಮಾನ್ಯ ಸೇನಾಪತಿಯಾದ ರಶಿಯಾದ ಮಾರ್ಶಲ್ ಜುಕೋವರು ಐಸೆನ್‌ಹಾವರರನ್ನು "ನಮ್ಮ ಕಾಲದ ಶ್ರೇಷ್ಠತಮ ರಣಯೋಜಕರು" ಎಂದು ಕರೆದುದು ಸಾಲದೆ?

ಆದರೆ ಐಸೆನ್‌ಹಾವರರ ವ್ಯಕ್ತಿತ್ವದಲ್ಲಿ ರಣಕೌಶಲವು ಒಂದು ಅಂಶ ಮಾತ್ರ. ವಿವಿಧ ಸ್ವಭಾವದ ವ್ಯಕ್ತಿಗಳೊಡನೆ ವರ್ತಿಸುವ ಅವರ ವ್ಯವಹಾರಚಾತುರ್ಯ ಅವರ ಈ ಮಿಲಿಟರಿ ಉದ್ಯಮದಲ್ಲಿ ಬೆಳಕಿಗೆ ಬಂತು. ರೂಜವೆಲ್ಟ, ಚರ್ಚಿಲ್, ಡಿಗಾಲೆ, ಮಾಂಟಿಗೊಮರಿ ಮೊದಲಾದ ಬಲು ಜಟಿಲ ಸ್ವಭಾವದ ಪ್ರಮುಖರ ಸಂಗಡ ವ್ಯವಹರಿಸಿ ದಕ್ಕಿಸಿಕೊಂಡ ಐಸೆನ್‌ಹಾವರರು ಅಸಾಧ್ಯವನ್ನೇ ಸಾಧಿಸಿದ್ದರು.

ಐಸೆನ್‌ಹಾವರರ ವ್ಯಕ್ತಿತ್ವದ ಈ ಮುಖವೇ ಅವರನ್ನು ರಾಷ್ಟ್ರಾಧ್ಯಕ್ಷತೆಗೆ ಏರಿಸಿದ್ದು. ೧೯೪೮ ರಲ್ಲೇ ದೇಶದ ಅಧ್ಯಕ್ಷಪದ ಅವರ ಕಾಲಬುಡಕ್ಕೆ ಬಂದಿತ್ತು. ಅಮೇರಿಕದ ಎರಡೂ ಪ್ರಮುಖ ಪಕ್ಷಗಳು ಅವರನ್ನು ತಮ್ಮ ಹುರಿಯಾಳಾಗಿ ನಿಲ್ಲಿಸಲು ನಾ ಮುಂದೆ ತಾ ಮುಂದೆ ಎಂದು ಕೈಚಾಚಿದ್ದವು. ಆದರೆ ಸೇನಾಪತಿ ಐಸೆನ್‌ಹಾವರರು ರಾಜಕಾರಣದ ಜಂಜಡಕ್ಕಿಳಿಯಲು ಆಗ ಒಪ್ಪಲಿಲ್ಲ.

೧೯೫೦ ರ ಡಿಸೆಂಬರದಲ್ಲಿ ಅವರು ಕಮ್ಯುನಿಸ್ಟ ಆಕ್ರಮಣ ಭೀತಿಯಿಂದ ನಿರ್ವಿಣ್ಣವಾಗಿದ್ದ ಪಶ್ಚಿಮ ಯುರೋಪನ್ನು ಸಂಘಟಿಸಲು ಸ್ಥಾಪಿತವಾಗಿದ್ದ ನ್ಯಾಟೋ ಸಂಸ್ಥೆಯ ಪಶ್ಚಿಮ ಯುರೋಪ ರಕ್ಷಣಬಲಗಳ ವರಿಷ್ಠನಾಯಕರಾಗಿ ನೇಮಕ ಹೊಂದಿದರು. ಹದಿನೇಳು ತಿಂಗಳ ಕಾಲ ಈ ಹುದ್ದೆಯಲ್ಲಿದ್ದು ಅವರು ನಿರಾಶರಾಗಿದ್ದ ಯುರೋಪಿಯನ್ನರಲ್ಲಿ ಆಕ್ರಮಣನಿರೋಧಕ ಚೈತನ್ಯವನ್ನು ತುಂಬಿದ್ದೊಂದು ಚಮತ್ಕಾರವೇ. ಅಷ್ಟರಲ್ಲಿ ರಿಪಬ್ಲಿಕನ್ ಪಕ್ಷದ ಒತ್ತಾಯಕ್ಕೆ ತಲೆವಾಗಿ ಅವರು ರಾಷ್ಟ್ರಾಧ್ಯಕ್ಷ ಪದಕ್ಕೆ ಸ್ಪರ್ಧಿಸಲೊಪ್ಪಿ ಹುದ್ದೆಗೆ ರಾಜೀನಾಮೆ ಇತ್ತು ಬಂದರು.

೨೦ ವರ್ಷದ ಸುದೀರ್ಘ ಅವಧಿಯಲ್ಲಿ ಸಂತತವಾಗಿ ಡೆಮಾಕ್ರೆಟಿಕ ಪಕ್ಷಕ್ಕೆ ಸೋಲುತ್ತ ಬಂದಿದ್ದ ರಿಪಬ್ಲಿಕನ್ ಪಕ್ಷವು ಐಸೆನ್‌ಹಾವರರನ್ನು ಮುಂದಿಟ್ಟುಕೊಂಡದ್ದರಿಂದ ಪುನಃ ಅಧಿಕಾರದ ಗದ್ದುಗೆಯೇರುವುದು ಸಾಧ್ಯವಾಯಿತು.

ಸಂದರ್ಭ ಬಂದಾಗ ನಿಷ್ಠುರರಾಗಬಲ್ಲ ಐಸೆನ್‌ಹಾವರರು ನಿಜವಾಗಿ ಮೃದು ಮನಸಿನ ಸರಳ ಸ್ವಭಾವಿ. ಈ ಶತಮಾನದ ಮಹಾ ಮಿಲಿಟರಿ ಪ್ರಭಾವಂತರಲ್ಲಿ ಗಣಿಸಲ್ಪಡುವವರಾದರೂ ಅವರ ಹೃದಯ ಶಾಂತಿಗಾಗಿ ಹಂಬಲಿಸುತ್ತದೆ. ಯುರೋಪಿನ ಯುದ್ಧವನ್ನು ಕಂಡ ಮೇಲೆ ಶಾಂತಿಗಾಗಿ ಹಂಬಲಿಸದಿರುವುದು ತಮಗೆ ಅಶಕ್ಯವೇ ಆಯಿತೆನ್ನುತ್ತಾರವರು.

ಶಿಕ್ಷಣ ವಿಷಯದಲ್ಲಿ ಸೇನಾಪತಿಗಳಲ್ಲಿ ಸಾಮಾನ್ಯವಾಗಿ ಕಾಣಿಸದಷ್ಟು ಆಸ್ಥೆ ಅವರಿಗೆ. ೧೯೪೮ರಲ್ಲಿ ಅವರು ಕೋಲಂಬಿಯಾ ವಿಶ್ವವಿದ್ಯಾಲಯದ ಅಧ್ಯಕ್ಷರಾದರು.

ಐಸೆನ್‌ಹಾವರರಲ್ಲಿ ಅಹಂಕಾರ, ದರ್ಪ ಯಾವುದೂ ಇಲ್ಲ. ಅವರ ಕೈಕೆಳಗೆ ಹೋರಾಡಿದ ಸೈನಿಕರು ಪ್ರೇಮದಿಂದ "ಐಕ್" ಎಂದು ಅವರಿಗೆ ಇಟ್ಟ ಅಡ್ಡ ಹೆಸರು ಅವರಿಗೆ ಅತ್ಯಂತ ಪ್ರಿಯವಾಗಿದೆ. ರಾಷ್ಟ್ರದ ಅಧ್ಯಕ್ಷರಾದ ಮೇಲೂ ಅವರು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ "ನನ್ನನ್ನು ಐಕ್ ಎಂದು ಕರೆದರೆ ಸಾಕು" ಎಂದರು.

ಅವರು ಪ್ರೇಮಲ ಸ್ವಭಾವದ ಗೃಹಸ್ಥ. ಅವರ ಹೆಂಡತಿ ಮಾಮಿ ಕೂಡ ಅವರಷ್ಟೇ ಜನಪ್ರಿಯತೆ ಗಳಿಸಿದ್ದಾರೆ. ಅವರಿಗೆ ಒಬ್ಬನೇ ಮಗ ; ಜಾನ್. ಅವನೂ ಸೈನ್ಯದಲ್ಲಿದ್ದಾನೆ. ತಮ್ಮ ನಾಲ್ವರು ಮೊಮ್ಮಕ್ಕಳೊಡನೆ ಆಡುವುದೆಂದರೆ ಐಸೆನ್‌ಹಾವರರಿಗೆ ತುಂಬ ಸಂತೋಷ.

ಬಿಡುವಿನ ವೇಳೆಯಲ್ಲಿ ಪತ್ತೆದಾರಿ ಕಥೆ ಓದುವರಾದರೂ ಐಸೆನ್‌ಹಾವರರ ಸಾಹಿತ್ಯ ಶಕ್ತಿ ಕಡಿಮೆ ತರದ್ದಲ್ಲ. ಯುರೋಪಿನ ಮಹಾಯುದ್ಧವನ್ನು ಕುರಿತು ಅವರು ಬರೆದ ಪುಸ್ತಕದ ಲಕ್ಷಾಂತರ ಪ್ರತಿಗಳು ಮಾರಿ ಅವರಿಗೆ ೨೫ ಲಕ್ಷ ರೂಪಾಯಿ ಗೌರವಧನವನ್ನು ತಂದವು. ಅವರು ಒಳ್ಳೇ ವಾಗ್ಮಿಯೂ ಹೌದೆಂಬುದು ಅವರ ಎರಡು ಅಧ್ಯಕ್ಷತ್ವ ಸ್ಪರ್ಧೆಗಳ ಕಾಲಕ್ಕೆ ಮಾಡಿದ ಭಾಷಣಗಳಿಂದ ತಿಳಿಯುತ್ತದೆ.

ತಮ್ಮ ಮೊದಲ ನಾಲ್ಕು ವರ್ಷಗಳ ಅಧ್ಯಕ್ಷತ್ವದ ಅವಧಿಯಲ್ಲಿ ಅವರು ಅನೇಕ ಸಂಶಯಗಳನ್ನು ದೂರೀಕರಿಸಿದ್ದಾರೆ. ಅವರು ಸೇನಾನಿಯಾಗಿದ್ದುದರಿಂದ ಯುದ್ಧಕ್ಕೆ ಜಗತ್ತನ್ನು ಎಳೆಯಬಹುದೆಂಬ ಭಯ ಹೋಗಿ ತಮ್ಮ ವಿದೇಶಮಂತ್ರಿ ಡಲೇಸರ ಯುದ್ಧಾತುರವನ್ನು ಅದುಮುವವರು ಅವರಾದರು. ಬಂಡವಳಗಾರರ ಕೈಗೊಂಬೆಯಾಗಿ ಅವರು ಕೂಲಿಕಾರರಿಗಿದ್ದ ಸವಲತ್ತುಗಳನ್ನು ಕಸಿದುಕೊಳ್ಳಬಹುದೆಂಬ ಭಯವೂ ನಿವೃತ್ತಿ ಹೊಂದಿದೆ. ಕಮ್ಯುನಿಸ್ಟರನ್ನು ಹತ್ತಿಕ್ಕುವ ಹುರುಪಿನಲ್ಲಿ ನಿರಪರಾಧಿ ನಾಗರಿಕರನ್ನು ಪೀಡಿಸುತ್ತಿದ್ದ ಮೆಕಾರ್ಥಿಯನ್ನು ನಿಗ್ರಹಿಸಲೂ ಅವರು ಕಾರಣರಾಗಿ ನಾಗರಿಕ ಸ್ವಾತಂತ್ರ್ಯದ ಪಕ್ಷಪಾತಿಗಳಾದರು.

ಐಸೆನ್‌ಹಾವರರು ಆಸ್ತಿಕರು. ಅವರು ಅಧಿಕಾರಕ್ಕೆ ಬಂದ ಮೇಲೆ ಮಂತ್ರಿಮಂಡಲದ ಸಭೆಗಳ ಪ್ರಾರಂಭದಲ್ಲಿ ಪ್ರಾರ್ಥನೆ ಮಾಡುವ ಪರಂಪರೆಯನ್ನು ಪ್ರಾರಂಭಿಸಿದರು.

ಜಗತ್ತಿನ ಅದೃಷ್ಟನಿರ್ಣಯದ ಬಹುಭಾಗ ಧುರಕ್ಕೆ ಪುನಃ ನಾಲ್ಕು ವರ್ಷದ ಮಟ್ಟಿಗೆ ಹೆಗಲು ಕೊಟ್ಟ ಸೈನಿಕ-ಮುತ್ಸದ್ದಿಯ ವ್ಯಕ್ತಿತ್ವ ಹೀಗಿದೆ. ಅವರನ್ನಿಂದು ಅಮೇರಿಕದಲ್ಲಿ ಪಕ್ಷಾತೀತರೆಂದೇ ಪರಿಗಣಿಸಲಾಗುತ್ತಿದೆ. ಭಾರತದಲ್ಲಿ ಪಕ್ಷದಲ್ಲಿದ್ದೂ ಪಕ್ಷಾತೀತರಾದ ಜವಾಹರರಂತೆ ಅಮೇರಿಕದಲ್ಲಿ "ಐಕ್" ಇದ್ದಾರೆ. ಇದೇ ತಿಂಗಳಲ್ಲಿ ಈ ಉಭಯ ನಾಯಕರು ಸಂಧಿಸಲಿದ್ದಾರೆ. ಅದು ಜಾಗತಿಕ ಶಾಂತಿಗೆ ಪೋಷಕವಾಗುವುದು ಖಂಡಿತ.

# ಚಿರಂತನ ಸಮಸ್ಯೆ — ಹೆಣ್ಣು !

ಅಲ್ಲಾನು ಮೊದಲು ಒಂದು ಗುಲಾಬಿಯನ್ನೂ ಒಂದು ಲವಲಿ ಹೂವನ್ನೂ ಒಂದು ಪಾರಿವಾಳವನ್ನೂ ಒಂದು ಸರ್ಪವನ್ನೂ ಒಂದಿಷ್ಟು ಜೇನನ್ನೂ ಒಂದು ಸೇಬಿನ ಹಣ್ಣನ್ನೂ ಒಂದಿಷ್ಟು ಮಣ್ಣನ್ನೂ ತೆಗೆದುಕೊಂಡು ಸೇರಿಸಿದನು; ಅದೇ ಹೆಣ್ಣಾಯಿತು.

— ಇರಾಣಿ ಕವಿ

ಹೆಂಗಸನ್ನು ಸುಸಂಸ್ಕೃತಳಾಗಿ ಮಾಡುವುದು ಗಂಡಸಿಗೆ ಕಟ್ಟಕಡೆಗಾದರೂ ಸಾಧ್ಯವಾದೀತೋ ಇಲ್ಲವೋ.

— ಜಾರ್ಜ್ ಮರೆಡಿತ್

ಸ್ತ್ರೀಯರು ಹುಟ್ಟನಿಂದಲೇ ಚತುರೆಯರು; ಆದರೆ ಗಂಡಸರು ಕಲಿತೇ ಪಂಡಿತರಾಗಬೇಕು.

— ಕವಿ ಶೂದ್ರಕ

ಹೆಣ್ಣನ್ನುಂಟುಮಾಡಿದ್ದು ದೇವರ ಎರಡನೇ ತಪ್ಪು.

— ನೀತ್ಸೆ

ಹೆಣ್ಣೇ ! ಚೆಲು ಹೆಣ್ಣೇ ! ಗಂಡಸನ್ನು ಹದಗೊಳಿಸಲೆಂದೇ ಸೃಷ್ಟಿ ನಿನ್ನನ್ನು ಮಾಡಿದೆ. ನೀನಿಲ್ಲದಿದ್ದರೆ ನಾವು ಶುದ್ಧ ಪಶುಗಳಾಗುತ್ತಿದ್ದೆವು.

— ಒಟ್‌ವೇ

ಸ್ತ್ರೀಯರೇ ಪುರುಷರ ಸಾವಿಗೆ ಮೂಲ; ಸ್ತ್ರೀಯರೇ ಪುರುಷರ ಚಟಗಳಿಗೆ ಮೂಲ; ಸ್ತ್ರೀಯರೇ ಪುರುಷರ ನರಕಕ್ಕೆ ಮೂಲ; ಸ್ತ್ರೀಯರೇ ಪುರುಷರ ಜಗಳಕ್ಕೆಮೂಲ.

— ಸಂಸ್ಕೃತ ಸುಭಾಷಿತ

ಹೆಂಗಸರೆಂದರೆ ದೊಡ್ಡ ಆಕೃತಿಯ ಮಕ್ಕಳೇ ಸೈ.

— ಲಾರ್ಡ್ ಚೆಸ್ಟರ ಫೀಲ್ಡ್

ಚಿರಂತನ ನಾರೀತತ್ವ ನಮ್ಮನ್ನು ಮೇಲಕ್ಕೆ ತ್ತುತ್ತದೆ.

— ಗಯಟೆ

ಅಹಾ ! ಹೆಂಗಸರ ಮುಷ್ಟಿಯಲ್ಲಿ ಸಿಕ್ಕದೆ ಅವರ ತೆಕ್ಕೆಯಲ್ಲಿ ಸಿಗಲು ಸಾಧ್ಯವಿದ್ದರೆ!

— ಅಂಬ್ರೋಸ್ ಬಿಯರ್ಸ್

ಹೆಣ್ಣಿನ ಹೌದು-ಇಲ್ಲಗಳ ನಡುವೆ ಸೂಜಿ ಹೋಗುವಷ್ಟು ಜಾಗವಿಲ್ಲ.

— ಸರ್ವಾಂಟಿಸ್

ಹತ್ತು ಕೊಳಗ ತುಂಬ ಮಾತು ಭೂಮಿಗೆ ಇಳಿಯಿತು; ಅದರಲ್ಲಿ ಒಂಭತ್ತು ಕೊಳಗ ಹೆಂಗಸು ತೆಗೆದುಕೊಂಡಳು, ಒಂದು ಕೊಳಗ ಗಂಡಸು ತೆಗೆದುಕೊಂಡ.

— ತಾಲ್ಮದ್

ಅತ್ತಿಯ ಹೂವನ್ನು ಕಾಣಬಹುದು, ಬಿಳಿ ಕಾಗೆಯನ್ನು ನೋಡಬಹುದು, ನೀರಿನಲ್ಲಿ ಮೀನಿನ ಕಾಲನ್ನು ಗುರುತಿಸಬಹುದು; ಹೆಣ್ಣಿನ ಮನಸ್ಸನ್ನು ಮಾತ್ರ ತಿಳಿಯಲಾಗದು.

— ಸಂಸ್ಕೃತ ಸುಭಾಷಿತ

ಹೆಣ್ಣಿನ ಹೃದಯದಲ್ಲಿ ಪ್ರೇಮದ ಜ್ಯೋತಿ ಹೊತ್ತಿತೆಂದರೆ ಅದು ಅಚಂಚಲವಾಗಿ ಉರಿಯುವುದು. ಅವಳು ಅನಂತ ಕಾಲದ ವರೆಗೂ ಪ್ರೇಮಿಸುತ್ತಲೇ ಹೋಗುವಳು.

— ಐಜಾಕ ಪೊಕಾಕ್

ಅಡವಿಯೊಳು ಮಳೆ ಹೊಡೆದು ಗಿಡ ಸೇಡುಗೊಂಡಂದು, ಹುಡಿಯೊಳಗೆ ಕಮಲ ಬೆಳೆದಂತೆ ಹೆಣ್ಣ ನುಡಿಯು ನಚ್ಚು ! — ಸರ್ವಜ್ಞ

ಯಾವ ಜಾತಿಯಲ್ಲಿಯೂ ಹೆಣ್ಣು ಗಂಡಿಗಿಂತ ಭಯಂಕರ.

— ಕಿಪ್ಲಿಂಗ್

ಹೆಣ್ಣನ್ನು ಎಷ್ಟೇ ತೆಗಳಲಿ ತಿರಸ್ಕರಿಸಲಿ, ನಾವು ಅವಳೊಡನೆ ಬಾಳಬಹುದಲ್ಲದೆ ಅವಳಿಲ್ಲದೆ ಬಾಳಲಾರೆವು. — ಫ್ರೆಡ್ರಿಕ್ ರೇನಾಲ್ಡ್ಸ್

ಹೆಂಗಸರ ಬಾಯಿಯಲ್ಲಿ ಜೇನಿರುತ್ತದೆ, ಒಡಲಲ್ಲಿ ಹಾಲಾಹಲವಿರುತ್ತದೆ —ಭರ್ತೃಹರಿ

ಹೆಂಗಸರು ಗಂಡಸರಿಗಿಂತ ಬುದ್ಧಿವಂತರು. ಯಾಕಂದರೆ ಅವರಿಗೆ ಕಡಿಮೆ ಜ್ಞಾನವಿದ್ದರೂ ತಿಳುವಳಿಕೆ ಹೆಚ್ಚಾಗಿದೆ. —ಜೇಮ್ಸ್ ಸ್ಟೀಫನ್ಸ್

ಒಲಿದರೆ ನಾರಿ, ಮುನಿದರೆ ಮಾರಿ.

— ಕನ್ನಡ ಗಾದೆ



ಜಯಚಾಮರಾಜೇಂದ್ರ ಒಡೆಯರು : ರಾಜಸತ್ತೆಯಿಂದ ಪ್ರಜಾಸತ್ತೆಗೆ

ಮೈಸೂರಿನ ಐದು ಶತಮಾನಗಳ ಉದಾತ್ತ ಪರಂಪರೆ

# ಪ್ರಜೆಗಳಿಗಾಗಿ ಬಾಳಿದ ಅರಸರು

"ಕುಬೇರನ ನವನಿಧಿಯೇ ನಿನ್ನ ಅಧೀನವಾದರೆ ಏನು ಮಾಡುವೆ ?" ಎಲ್ಲ ಮಕ್ಕಳಿಗೆ ಅವರ ಹಿರಿಯರು ಕೇಳುವಂಥ ಈ ಪ್ರಶ್ನೆಯನ್ನು ನವಮೈಸೂರಿನ ಪ್ರಥಮ ಗವರ್ನರ್ ಆಗಿರುವ ಶ್ರೀ ಜಯ-ಚಾಮರಾಜೇಂದ್ರ ಒಡೆಯರಿಗೆ ಎಳೆತನದಲ್ಲಿ ಅವರ ಹಿರಿಯರು ಕೇಳಿದ್ದರು.

ಆದರೆ ಅದಕ್ಕೆ ಎಲ್ಲ ಮಕ್ಕಳಿಂದ ದೊರೆಯುವ ಉತ್ತರಕ್ಕಿಂತ ಬೇರೆಯಾದ ಉತ್ತರವೇ ದೊರೆಯಿತು. "ಎಲ್ಲವನ್ನು ಬಡವರಿಗೆ ಹಂಚಿಬಿಡುವೆ." ಹೀಗೆ ನಿಸ್ಸಂದಿಗ್ಧವಾಗಿ ನುಡಿದ ಜಯಚಾಮರಾಜೇಂದ್ರರು ಹಳ್ಳಿಹಳ್ಳಿಗೂ ರೇಲು ಓಡಾಡುವಂತಾಗಿ ಎಲ್ಲ ರೈತರೂ ಉಚಿತ ರೇಲು ಪ್ರಯಾಣ ಪಡೆಯುವಂತಾಗಬೇಕೆಂದು ತಮ್ಮ ಎಳೆಯತನದಲ್ಲಿ ಕನಸು ಕಂಡಿದ್ದರು.

ಭಾರತೀಯ ಸಂಸ್ಥಾನಿಕರ ಆಳಿಕೆ ತಗಲಕ ರಾಜ್ಯಭಾರ ಮತ್ತು ದುಂದುಗಾರಿಕೆಗೆ ಕುಪ್ರಸಿದ್ಧವಾಗಿದ್ದರೆ ಅದಕ್ಕೆ ಅಪವಾದವೆಂಬಂತೆ ಸಂಸ್ಥಾನದ ಧರ್ಮದರ್ಶಿಗಳಂತೆ ವರ್ತಿಸಿದವರಲ್ಲಿ ಕರ್ನಾಟಕದ ರತ್ನ ಸಿಂಹಾಸನಾಸೀನರಾಗಿ ಸುಮಾರು ಐದು ಶತಕ ಆಳಿದ ಮೈಸೂರ ರಾಜ

"ಸಂಯುಕ್ತ ಕರ್ನಾಟಕ" ದ ಲೇಖದಿಂದ ಸಂಗ್ರಹಿಸಿದ್ದು



ನಾಲ್ಮಡಿ ಕೃಷ್ಣರಾಜೇಂದ್ರ ಒಡೆಯರು

ಮನೆತನದವರು ಮೊದಲನೆಯವರೆನ್ನಬಹುದು. ಪ್ರಜೆಗಳ ಹಿತಚಿಂತನೆ ಅಭಿವೃದ್ಧಿಯನ್ನೇ ತಮ್ಮ ಗುರಿಯಾಗಿಸಿಕೊಂಡು ಮೈಸೂರರಸರ ರಾಜ್ಯ ಭಾರವು ನಡೆದಿತ್ತು.

ಇಂದು ಭಾರತದ ಗಣರಾಜ್ಯದ ಪ್ರಜೆಯೆಂದು ಹೆಮ್ಮೆಯಿಂದ ತಿಳಿಯುವ ಶ್ರೀ ಜಯಚಾಮರಾಜೇಂದ್ರ ಒಡೆಯರು ಎಳೆಯತನದಿಂದಲೂ ಹಿಡಿದ ಹಾದಿ ಹೊಸತಾದುದೇನೂ ಅಲ್ಲ. ಅದು ನಿರಂತರ ಪ್ರಜಾಹಿತ ಚಿಂತನೆಯ ದೀಕ್ಷೆ ತೊಟ್ಟಿದ್ದ ಅವರ ಹಿರಿಯರ ಘನ ಪರಂಪರೆಯಾಗಿತ್ತು.

ಮೈಸೂರು ರಾಜಮನೆತನದ ಮೂಲಪುರುಷರಾದ ಯದುರಾಯರು ಮೈಸೂರಿಗರಾಗಿರಲಿಲ್ಲ. ಗುಜರಾತಿನಿಂದ ತಮ್ಮ ತಮ್ಮ ಕೃಷ್ಣರಾಯರೊಂದಿಗೆ ಬಂದ ಅವರು ಆಗಿನ ಚಾಮರಾಜರ ಕುಟುಂಬದವರಿಗೆ ಮಾರನಾಯಕನಿಂದಾಗುತ್ತಿದ್ದ ಕಿರುಕುಳವನ್ನು ಪರಿಹರಿಸಿ, ಚಾಮರಾಜರ ಮಗಳು ದೇವರಾಜಮ್ಮನನ್ನು ಮದುವೆಯಾಗಿ ಮೈಸೂರಿನ ರಾಜ್ಯಧುರವನ್ನು ವಹಿಸಿದರು.

ಈ ಪೀಳಿಗೆಯಲ್ಲಿ ಹಿಂದೆ ಆಳಿದ ೨೫ ಜನ ಅರಸರೂ ದಾನ ದಯಾ ಸಮರ ವೀರರಾಗಿದ್ದರು. ಅದಕ್ಕೆಂದೇ ಮೈಸೂರಿನ ಪ್ರಜೆಗಳಿಗೆ ಮಹಾರಾಜರಲ್ಲಿ ಶ್ರದ್ಧೆ ವಿಶ್ವಾಸ.

ನಾಲ್ಮಡಿ ಕೃಷ್ಣನ ಮೈಸೂರಿನ ಮಾತು ನೆನಸಿಕೊಳ್ಳಿ. ಒಮ್ಮೆ ಕೃಷ್ಣರಾಜೇಂದ್ರರು ಒಂದು ತಾಲೂಕು ಕಸಬೆಗೆ ಭೆಟ್ಟಿಕೊಟ್ಟರು. ಊರ ಹೊರಭಾಗದಲ್ಲಿ ಒಂದು ಮುರುಕು ಗುಡಿಸಲು; ಗುಡಿಸಲಿನ ಮುಂದೆ ಹಣ್ಣುಹಣ್ಣು ಮುದುಕಿ; ಮುದುಕಿ ಬಾಳಿದಷ್ಟು ಕಾಲ ಗುಡಿಸಲು ತಾಳಿರಲಿಲ್ಲ ಎಂಬುದನ್ನು ಕೃಷ್ಣರಾಜೇಂದ್ರರು ಆಗಲೇ ಗುರುತಿಸಿದ್ದರು.

ಅಂದು ರಾತ್ರಿ ಮಳೆ ಜಡಿಯಿತು. ಸರಕಾರೀ ಬಂಗಲೆಯಲ್ಲಿದ್ದ ಮಹಾರಾಜರಿಗೆ ಮುದುಕಿಯ ಚಿಂತೆ; ಅವರು ನಿದ್ದೆ ಮಾಡಲಾರದೆ ಹೋದರು. ತಮ್ಮ ಪರಿವಾರದೊಡನೆ ನಡೆದುಕೊಂಡು ಅವರು ಆ ಬಡವೆಯ ಮನೆಗೆ ನಡೆದರು. ಅಂದು ಕೂಲಿ ದೊರೆಯದ್ದರಿಂದ ಊಟ ಮಾಡದೆ ಸಂಕಟಪಡುತ್ತಿದ್ದ ಆ ವೃದ್ಧೆಯ ಜೀವಾವಧಿಗೆ ಸಾಲುವ ಸಂಪತ್ತನ್ನು ಆಗಲೇ ಅವರು ಕೊಟ್ಟು ತಮ್ಮ ಆತ್ಮವನ್ನು ತೃಪ್ತಿಪಡಿಸಿಕೊಂಡರು.

ಅವರ ಹಿಂದೆ ಆಳಿದ ಮುಮ್ಮಡಿ ಕೃಷ್ಣರಾಜರು ಪ್ರತಿ ದಿನ ಮಧ್ಯಾಹ ೩ ಗಂಟೆಯ ಮೊದಲು ಊಟ ಮಾಡುತ್ತಿರಲಿಲ್ಲ. ಮಹಾರಾಜರು ಬೇಗನೆ ಊಟಮಾಡಿ ತಮಗೂ ಬೇಗನೆ ಊಟ ಮಾಡಲು ಅವಕಾಶ ಕೊಡಬೇಕೆಂದು ಒಮ್ಮೆ ರಾಣಿವಾಸದವರು ಅವರನ್ನು ವಿನಂತಿಸಿದರು. ಆಗ ಅವರು ಹೇಳಿದರು :

"ಪ್ರಜೆಗಳೇ ರಾಜನಿಗೆ ದೇವರು. ಮೂರು ಗಂಟೆಯ ಹೊತ್ತಿಗೆ ಪ್ರಜೆಗಳೆಲ್ಲರೂ ಊಟ ಮಾಡಿರುತ್ತಾರೆ. ಅವರ ಭೋಜನವಾದ ಮೇಲೆ ನಮ್ಮ ಭೋಜನ ನಡೆಯುವುದು ನ್ಯಾಯ."

ಮುಮ್ಮಡಿಕೃಷ್ಣರಾಜರು ವಿದ್ಯಾ ಪಕ್ಷಪಾತಿಗಳಿದ್ದರು. ತಾವೂ ಮಹಾ ವಿದ್ವಾಂಸರಾಗಿದ್ದರು. ಸಂಸ್ಥಾನದಲ್ಲಿ ಮೊದಲ ಆಸ್ಪತ್ರೆಯನ್ನೂ ಇಂಗ್ಲೀಷ ಶಾಲೆಯನ್ನೂ ಆರಂಭಿಸಿದರು. ಲಾರ್ಡ್ ಡಾಲ್‌ಹೌಸಿಯ ಕಾಲಕ್ಕಿಂತ ಮೊದಲೇ **ಅಂಚೆಖಾತೆ**ಯನ್ನು ಮೈಸೂರಿನಲ್ಲಿ ಬಳಕೆಗೆ ತಂದುದು ರಾಜಮನೆತನದವರ ಪ್ರಗತಿಶೀಲ ಮನೋಭಾವಕ್ಕೆ ಮತ್ತೊಂದು ನಿದರ್ಶನ.

ಶ್ರೀ ಚಾಮರಾಜೇಂದ್ರರ ಕಾಲದಲ್ಲಿ ದಿವಾನ

ರಂಗಾಚಾರ್ಯರು ಮತ್ತು ದಿವಾನ ಶೇಷಾದ್ರಿ ಅಯ್ಯರರು ತಮ್ಮ ಪ್ರತಿಭೆ ಮತ್ತು ಪರಿಶ್ರಮಗಳಿಂದ ಮೈಸೂರನ್ನು ಇತರ ರಾಜ್ಯಗಳಿಗೆ ಮಾದರಿಯ ಸಂಸ್ಥಾನವನ್ನಾಗಿ ಮಾಡಿದರು. ಕಾಂಗ್ರೆಸ ಸಂಸ್ಥೆ ಭಾರತದಲ್ಲಿ ಸ್ಥಾಪಿತವಾಗುವ ಮೊದಲೇ ಇಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಏರ್ಪಡಿಸಲಾಯಿತು. ಸ್ತ್ರೀವಿದ್ಯಾಭ್ಯಾಸದಲ್ಲಿಯಂತೂ ಭಾರತದಲ್ಲಿಯೇ ಮೈಸೂರು ಮುಂದುವರಿಯುವಂತೆ ಆಯಿತು. ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಓದಿದ ಮಹಿಳೆಯರಿಬ್ಬರು ಭಾರತದಲ್ಲಿನ ಮೊದಲ ಪದವೀಧರೆಯರಾದರು.

ಅನಂತರ ನಾಲ್ಮಡಿ ಕೃಷ್ಣರಾಜರು ಆಡಳಿತದ ಭಾರವನ್ನುಹೊರಲು ಸಮರ್ಥರಾಗುವ ಮೊದಲು ಮಹಾರಾಣಿ ವಾಣೀವಿಲಾಸರವರು ರೀಜಂಟರಾಗಿ ನಗರದಲ್ಲಿ ಪ್ಲೇಗ್ ಮುಂತಾದ ರೋಗಗಳು ಹರಡಿದಾಗ ಪ್ರಜೆಗಳಿಗೆ ಅನೇಕ ಸೌಕರ್ಯಗಳನ್ನು ಕಲ್ಪಿಸಿದ್ದರು.

ಆಗ ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿ ಉತ್ಪತ್ತಿ ಕೇಂದ್ರವನ್ನು ತೆರೆಯುವ ವಿಚಾರ ನಡೆದಿತ್ತು. ಕೆಲವರು ತಜ್ಞರು ಅದು ವ್ಯರ್ಥ ಹಣದ ಅಪವ್ಯಯದಲ್ಲಿ ಪರಿಣಮಿಸುವದೆಂದು ವಿರೋಧಿಸಿದರು. ದಿವಾನ್ ಶೇಷಾದ್ರಿ ಅಯ್ಯರರು ಅದು ಯಶಸ್ವಿಯಾಗುವುದೆಂದರೂ ಅವರ ಸಹೋದ್ಯೋಗಿಗಳು ಅದನ್ನು ಒಪ್ಪಲಿಲ್ಲ. ಈ ಸಂಧಿಯಲ್ಲಿ ಆಗಿನ ಮಹಾರಾಣಿಯವರ ನಿಲುವು ಇಂದಿನ ಮೈಸೂರಿನ ಉದ್ಯಮಾಭಿವೃದ್ಧಿಗೆ ಕಾರಣವಾಯಿತು. ಅವರೆಂದರು : " ನಮ್ಮ ಯೋಜನೆ ಸಫಲವಾದರೆ ಜನತೆಗೆ ಸಹಾಯವಾಗುತ್ತದೆ. ಇದನ್ನು ನೆರವೇರಿಸಿ ಒಂದು ವೇಳೆ ನಷ್ಟವಾದರೆ ಅರಮನೆಯಿಂದ ನಷ್ಟವನ್ನು ಸರಕಾರಕ್ಕೆ ತುಂಬಿಕೊಟ್ಟರಾಯಿತು." ಈ ಯೋಜನೆಯು ನಷ್ಟಕರವೇನೂ ಆಗಲಿಲ್ಲ. ಅಲ್ಲದೆ ಸರಕಾರಕ್ಕೆ ಆದಾಯವನ್ನೇ ತರುತ್ತಲಿದೆ.

ರಾಜನೀತಿಯ ಚತುರತೆಯಲ್ಲಿ ಚಿಕ್ಕದೇವರಾಯರೇ ಸೈ. ದಿಲ್ಲಿಯ ದೊರೆ ಔರಂಗಜೇಬನೊಡನೆ ಅವರು ಗೆಳೆತನ ಬೆಳೆಸಿದ್ದರು. ಅದರ ಜೊತೆಗೆ ಜಗದೇವರಾಯನೆಂಬ ಮೆಚ್ಚಿನ ಬಿರುದೂ ಅವರನ್ನು ಹಿಂಬಾಲಿಸಿದ್ದಿತು. ಸರಕಾರದ ಆಡಳಿತದಲ್ಲಿ ಅವರು ಹೊಸ ಸುಧಾರಣೆ ಮಾಡಿದರು. ಸರಕಾರೀ ಕಚೇರಿಯನ್ನು ಹದಿನೆಂಟು ಶಾಖೆಗಳನ್ನಾಗಿ ಮಾಡಿ ಆಯಾ ಕಚೇರಿಯನ್ನು ನವೀಕರಿಸಿ ಸ್ಥಾಪಿಸಿದರು ಎಂಬ ಈ ವಿಷಯಗಳು ಮೈಸೂರು ರಾಜಮನೆತನದ ಬುದ್ಧಿವೈಭವಕ್ಕೆ ಸಾಕ್ಷಿಯಾಗಿವೆ.

ತೋಳಬಲ್ಮೆಯ ಮಾತಿಗೆ ಅವರಿಗೂ ಹಿಂದಿನ ಕಂಠೀರವ ನರಸರಾಜ, ದೊಡ್ಡದೇವರಾಜರು ಪ್ರಸಿದ್ಧರಾಗಿದ್ದರು. ಮಲ್ಲಯುದ್ಧದಲ್ಲಿ ಹೆಸರಾದ ಕಂಠೀರವ ನರಸರಾಜರ ಕಾಲದಲ್ಲಿ ವಿಜಾಪುರದ ರಣದುಲ್ಲಾಖಾನನು ಮೈಸೂರನ್ನು ನುಂಗಲು ಬಾಯಿಹಾಕಿ ಹಲ್ಲು ಕೀಳಿಸಿಕೊಂಡ. ಕಂಠೀರವ ನರಸರಾಜರು ಅವನನ್ನು ಸಂಪೂರ್ಣ ಸೋಲಿಸಿ ಹಿಂದಕ್ಕೊತ್ತಿದ್ದರು. ಆನಂತರ ದೊಡ್ಡದೇವರಾಜರು " ಪರರಾಯ ಭಯಂಕರ" ರಾಗಿ ಮಧುರೆಯ ನಾಯಕರನ್ನು ಗೆದ್ದು ಧಾರಾಪುರಕ್ಕೆ ತಮ್ಮ ರಾಜ್ಯವನ್ನು ವಿಸ್ತರಿಸಿದರು.

ಕನ್ನಡದ ಸಂಸ್ಕೃತಿಯನ್ನು ಮೈಸೂರಾಳಿಕೆ ಕಾಯ್ದುಕೊಂಡಿತು. ರಾಜಾಧಿರಾಜ ಒಡೆಯರು (೧೫೭೮—೧೬೧೭) ಶ್ರೀರಂಗಪಟ್ಟಣವನ್ನು ಗೆದ್ದರು. ಅಷ್ಟೇ ಅಲ್ಲ, ವಿಜಯನಗರದ ಸಂಸ್ಕೃತಿ ಸಂಪ್ರದಾಯಗಳನ್ನು ತಮ್ಮ ಆಳಿಕೆಯಲ್ಲಿ ಆಚರಣೆಗೆ ತಂದರು.

ಅಂದಿನಿಂದ ಕನ್ನಡ ಸಂಸ್ಕೃತಿಯ ಉತ್ತರಾಧಿಕಾರವನ್ನು ಮೈಸೂರು ವಹಿಸಿಕೊಂಡಿದೆ. ಮೈಸೂರಾಳಿಕೆಯೇ ಕನ್ನಡವಾಳಿಕೆ ಎಂದು ತಿಳಿಯಲ್ಪಟ್ಟಿದೆ. ಮತ್ತು ಈ ಶತಮಾನಗಳ ಕಾಲದಲ್ಲಿ ಮೈಸೂರರಸರು ಪರಾಕ್ರಮ ಬುದ್ಧಿಶಕ್ತಿ ಅನುಕಂಪಗಳೊಡನೆ ಜನತೆಯ ಕಡೆಗೆ ನಡೆದು ಇಂದು ಪ್ರಜೆಗಳಲ್ಲಿ ಸಂಪೂರ್ಣ ಸಮರಸ ಹೊಂದಿದ್ದಾರೆ. ಅವರು ಹೀಗೆ ಶತಮಾನದಿಂದ ಜನತೆಯ ಕಡೆಗೆ ನಡೆದುದನ್ನು ನೋಡಿದ್ದರಿಂದಲೇ ನಾಡಿನ ಜನರು ಇಂದು ತಾವಾಗಿ ಅವರನ್ನು ತಮ್ಮ ರಾಜ್ಯದ ರಾಜ್ಯಪಾಲರನ್ನಾಗಿ ಆರಿಸಿದ್ದಾರೆಂದರೆ ಸಂಪೂರ್ಣ ಸತ್ಯವಾಗುವುದು.

# ನೀವು ಇಂಥ ಪದ್ಯ ಬರೆಯಬಲ್ಲಿರಾ?

"ಬಾಕುಮ" ಬರೆದುದು

"ಚಾರಚುಂಚುಶ್ಚಿರಾರೇಚೀ
ಚಂಚಚ್ಚೀರರುಚಾರುಚಃ
ಚಚಾರ ರುಚಿರಶ್ಚಾರು
ಚಾರೈರಾಚಾರಚಂಚುರಃ ||

ಮೇಲಿನದು ಏನಾಗಿರಬಹುದೆನ್ನುತ್ತೀರಿ? ನಾನು "ಅಮರ ಕೋಶ" ಓದುತ್ತಿದ್ದೆ. ನನ್ನ ಕಿರಿಯ ತಮ್ಮ ಅದನ್ನು ಕೇಳಿ ತನ್ನ ತೊದಲು ನುಡಿಯಿಂದ ಈ ಅರ್ಥವಿಲ್ಲದ ಪದ್ಯವನ್ನು ಕಟ್ಟಿರಬಹುದೆ?

ಅಲ್ಲ ಸ್ವಾಮಿ, ಇದು ದೊಡ್ಡವರೇ ಬರೆದ ಪದ್ಯ; ಭಾರವಿಯೆಂಬ ಮಹಾಕವಿ ಬರೆದಿದ್ದಾನೆ ಇದನ್ನು, ಸಂಸ್ಕೃತದಲ್ಲಿ. ಇದಕ್ಕಾಗಿ ಆತ ತನ್ನ ಬುದ್ಧಿವಂತಿಕೆಯನ್ನು ಬಹಳ ಖರ್ಚು ಮಾಡಿದ್ದಾನೆ; ಎರಡೇ ಅಕ್ಷರಗಳಿಂದ—ಚ ಮತ್ತು ರ ಹೊರತು ಬೇರೆ ಅಕ್ಷರವೇ ಹಣಕದಂತೆ—ಇದನ್ನು ಬರೆಯಲು ಅವನಿಗೆಷ್ಟೋ ಸಮಯ ಹಿಡಿದಿರಬೇಕು. ಈ ಪದ್ಯವು ಅರ್ಥವಿಲ್ಲದ್ದಲ್ಲ. ಅದರ ಅರ್ಥ ಹೀಗಿದೆ —

"ಶತ್ರುಗಳನ್ನು ಜಯಿಸುವ ಅರ್ಜುನನು ಸುಂದರವಾದ ನಾರುಡೆಯನ್ನುಟ್ಟು ಸೊಗಸಾಗಿ ಸಂಚರಿಸಿದ." ಇದೇನು ಮಹಾ ಅರ್ಥ? ಆ ಅರ್ಥದಲ್ಲೇನು ಸೌಂದರ್ಯ ಇದೆ? ಎಂದು ಕೇಳುತ್ತೀರಾ? ಒಪ್ಪಿದೆ. ಆದರೆ ಇಷ್ಟನ್ನು ಎರಡೇ ಅಕ್ಷರಗಳಿಂದ ಬೇರೆ ಯಾವ ಭಾಷೆಯಲ್ಲಿಯಾದರೂ ಹೇಳುವ ಕೆಲಸ ನಿಮ್ಮಿಂದಾದೀತೇ? ಸಾಧ್ಯವಿದ್ದರೆ ಪ್ರಯತ್ನಿಸಿ, ಕನ್ನಡದಲ್ಲಿ ಇಂಥ ಪದ್ಯ ಬರೆಯಿರಿ, ನೋಡೋಣ.

ಬರೆದಿರಿ ಎನ್ನೋಣ. ಅಷ್ಟರಿಂದಲೇ ಸಂಸ್ಕೃತ ಮಹಾಕವಿಗಳಿಗೆ ಸರಿದೊರೆಯಾದೆವೆಂದು ನೀವು ತಿಳಿಯಬಾರದು. ಈ ತರದ ಚಿತ್ರಕಾವ್ಯ ರಚನೆಯಲ್ಲಿ ಅವರು ವಿಚಿತ್ರ ಸಾಮರ್ಥ್ಯವನ್ನು ಗಳಿಸಿಕೊಂಡಿದ್ದಾರೆ. ಎರಡಕ್ಷರದಿಂದ ಪದ್ಯ ಬರೆಯುವಂತೆ ಅವರು ಒಂದೇ ಅಕ್ಷರದಿಂದಲೂ ಪದ್ಯ ಬರೆಯಬಲ್ಲರು. ಚಕ್ರ, ಮುರಜ ಮೊದಲಾದ ಆಕಾರದಲ್ಲಿ ಓದಬರುವ ಪದ್ಯಗಳನ್ನೂ ಬರೆದಿರುವರು.

ಸಂಸ್ಕೃತದಲ್ಲಿ ಅರ್ಥಗೌರವಕ್ಕೆ ಪ್ರಸಿದ್ಧನಾದ ಭಾರವಿಯೇ ತನ್ನ "ಕಿರಾತಾರ್ಜುನೀಯ"ದ ಇಡೀ ೧೫ನೆಯ ಸರ್ಗವನ್ನು ಇಂಥ (ಅರ್ಥಗೌರವವಿಲ್ಲದ) ಪದ್ಯಗಳಿಗಾಗಿ ಮೀಸಲಾಗಿಟ್ಟಿರುವನು. ಮಾಘ ಮೊದಲಾದ ಅನಂತರದ ಕವಿಗಳು ಈ ಸರ್ಕಸ್ಸಿನಲ್ಲಿ ಅವನನ್ನೂ ಹಿಂದೆ ಹಾಕಿರುವರು.

ಈ ರೀತಿಯ ಚಿತ್ರಕಾವ್ಯ ರಚನೆಗೆ ಮೊದಲ ಪ್ರೇರಕವೆಂದರೆ ಶಬ್ದಾಲಂಕಾರಗಳ ಮೋಹ. ಭಾಮಹ, ಉದ್ಭಟ ಮುಂತಾದವರ ಕಾಲದಲ್ಲಿ ಯಮಕ ಅನುಪ್ರಾಸಗಳೆಂದು ಅವು ಬೆಳೆದ ಮೇಲೆ ದಂಡಿಯ ಹೊತ್ತಿಗಾಗಲೇ ಚಕ್ರಬಂಧ, ಗೋಮೂತ್ರಿಕ, ಮುರಜ, ಖಡ್ಗ ಎಂಬ ಹಲವಾರು ಚಿತ್ರಕಾವ್ಯ ಸರ್ಕಸ್ಸುಗಳ ಉಬ್ಬರ ಉಂಟಾಗಿತ್ತು. ಕವಿ ಕಾಳಿದಾಸನಿಂದಲೇ ಶಬ್ದಾಲಂಕಾರದ ಚಟ ಆರಂಭವಾದ ಹಾಗೆ ಕಾಣುತ್ತದೆ. ಅವನ ರಘುವಂಶದ ಒಂಬತ್ತನೆಯ ಸರ್ಗವು ಯಮಕದ ಗಂಗಾಪ್ರವಾಹದೊಂದಿಗೆ ಏರಿಳಿಯುತ್ತದೆ. ಅನಂತರ ಭಾರವಿ, ಮಾಘ ಇಬ್ಬರೂ ಶಬ್ದಾಲಂಕಾರವನ್ನು

ನಾಕಷ್ಟು ಬಳಸಿ ಚಿತ್ರಕಾವ್ಯದ ವೈಚಿತ್ರ್ಯವನ್ನು ತೋರಿಸಿಕೊಟ್ಟರು. ಮತ್ತು ಆ ಕಾಲದ ಎಲ್ಲ ಸಂಸ್ಕೃತ ಕವಿಗಳಿಗೂ ಚಿತ್ರಕಾವ್ಯದ ಸರ್ಕಸ್ಸೇ ದೊಡ್ಡದೆನಿಸುತ್ತಿತ್ತು.

ಸಂಸ್ಕೃತ ಕವಿಗಳ ಇನ್ನೂ ಕೆಲ ಚಮತ್ಕಾರಗಳನ್ನು ನೋಡಿರಿ:

ನನೋನನುನ್ನೋ ನುನ್ನೋನೋ
ನಾನಾ ನಾನಾನನಾ ನನು ।
ನುನ್ನೋ ನುನ್ನೋ ನನುನ್ನೇನೋ
ನಾನೇನಾ ನುನ್ನನುನ್ನನುತ್ ॥

ಇದು ಒಂದೇ ಅಕ್ಷರದ ಸಹಾಯದಿಂದ ರಚಿಸಲ್ಪಟ್ಟ ಪದ್ಯ. ಇದರ ಅರ್ಥ ವಿವರಣೆಯ ಗೊಡವೆ ಇಲ್ಲಿ ಬೇಡ. ಈ ಅಲಂಕಾರಕ್ಕೆ ಏಕಾಕ್ಷರವೆಂದು ಹೆಸರು. ಇದಕ್ಕಿಂತಲೂ ವಿಚಿತ್ರವಾದದ್ದು ಇದು—

ವೇತ್ರಶಾಕಕುಜೇ ಶೈಲೇ ।
ಲೇಶೈಜೇಕುಕಶಾತ್ರವೇ ।
ಯಾತಕಿಂ ವಿದಿಶೋ ಜೇತುಂ ।
ತುಂಜೇಶೋ ದಿವಿ ಕಿಂ ತಯಾ ॥

ಈ ಪದ್ಯದಲ್ಲಿ ಒಂದನೇ ಪಾದವನ್ನು ತಿರುಗಿಸಿ ಓದಿದರೆ ಎರಡನೆಯ ಪಾದವಾಗುತ್ತದೆ ; ಮೂರನೆಯ ಚರಣವನ್ನು ತಿರುಗಿಸಿ ಓದಿದರೆ ನಾಲ್ಕನೆಯ ಚರಣವಾಗುತ್ತದೆ. ಇದಕ್ಕೆ ಪಾದಪ್ರತಿಲೋಮವೆಂದು ಹೆಸರು.

ಇದು ಸಾಲದಿದ್ದರೆ ಇಡೀ ಶ್ಲೋಕವನ್ನೇ ತಿರುಗಿಸಿ ಓದಿದರೆ ಹೊಸತೊಂದು ಬೇರೆ ಅರ್ಥದ ಶ್ಲೋಕವಾಗುವಂತೆಯೂ ಅವರು ಬರೆದಿದ್ದಾರೆ.

| | | | | | | | |
|---|---|---|---|---|---|---|---|
| ಸೇ | ವಾ | ಕಾ | ನಿ | ನಿ | ಕಾ | ವಾ | ದೇ |
| ವಾ | ಓ | ಕಾ | ಸ್ವ | ಸ್ವ | ಕಾ | ಹಿ | ವಾ |
| ಕಾ | ಕಾ | ರೇ | ಭ | ಭ | ರೇ | ಕಾ | ಕಾ |
| ಸಿ | ಸ್ವ | ಭ | ವ್ಯ | ವ್ಯ | ಭ | ಸ್ವ | ನಿ |

ಇದು ಇನ್ನೊಂದು ಪದ್ಯ. ಇದರ ಪಾದಗಳನ್ನು ಮೇಲೂ ಕೆಳಗೂ ಅಡ್ಡವೂ ನೀಟಾಗಿಯೂ ಹಿಂದೂ ಮುಂದೂ ನೀವು ಓದಿದರೆ ಸರಿಯಾಗಿ ಅದೇ ಶ್ಲೋಕ ಬರುತ್ತದೆ.

ವಿಕಾಶಮೀಯುರ್ಜಗತೀಶಮಾರ್ಗಣಾ
ವಿಕಾಶಮೀಯುರ್ಜಗತೀಶಮಾರ್ಗಣಾ ।
ವಿಕಾಶಮೀಯುರ್ಜಗತೀಶಮಾರ್ಗಣಾ
ವಿಕಾಶಮೀಯುರ್ಜಗತೀಶಮಾರ್ಗಣಾ ॥

ಇದೇನು ಅದೇ ಚರಣವನ್ನು ಮತ್ತೆ ಮತ್ತೆ ಬರೆದದ್ದೆಂದು ತಿಳಿಯಬೇಡಿರಿ. ಇದೊಂದು ಇಡೀ ಶ್ಲೋಕ. ಅದರ ನಾಲ್ಕೂ ಪಾದಗಳು ಒಂದೇ ಆಗುವಂತೆ ಭಾರವಿ ಶಬ್ದಗಳನ್ನು ಜೋಡಿಸಿದ್ದಾನೆ. ನಾಲ್ಕು ಪಾದಗಳ ಅರ್ಥ ಬೇರೆ ಬೇರೆ.

ಹಿಂದೆ ಕವಿಗಳ ಪಾಂಡಿತ್ಯದ ಪರೀಕ್ಷೆಗೆ ಇಂಥ ರಚನೆಯ ಸ್ಪರ್ಧೆಯನ್ನು ಏರ್ಪಡಿಸುತ್ತಿದ್ದರು. ಚಕ್ರಬಂಧ, ಮುರಜಬಂಧ, ಗೋಮೂತ್ರಿಕಾ ಬಂಧ ಮುಂತಾದ ಬಂಧಗಳಲ್ಲಿ ಕವಿತೆ ಕಟ್ಟುವುದು ಎಂದರೆ ತಲೆ ಕೆರೆದುಕೊಳ್ಳತಕ್ಕ ವಿಷಯವೇ ಸರಿ.

ಸಂಸ್ಕೃತದಲ್ಲಿರುವಂತೆ ಅಲ್ಲ, ಅದಕ್ಕೂ ಒಂದು ಹೆಜ್ಜೆ ಮುಂದೆ ಪ್ರಾಸದ ವಿಷಯದಲ್ಲಿ ಕನ್ನಡ ಹೋಗಿರಬಹುದು. ಆದರೆ ಎರಡಕ್ಷರ, ಒಂದಕ್ಷರಗಳಿಂದ ಪದ್ಯ ಕಟ್ಟಲು ಸಾಧ್ಯವೇ ? ನಾಗವರ್ಮನೇನೋ ಕೆಲ ಪದ್ಯ ಕಟ್ಟಿದ್ದಾನೆ. ಆದರೆ ಬೇರೆ ಕವಿಗಳು ಈ ದುಸ್ಸಾಹಸಕ್ಕೆ ಕೈ ಹಾಕಿಲ್ಲ. ಸಂಸ್ಕೃತದಲ್ಲಿ ಅನೇಕ ಕವಿಗಳು ನೀರು ಕುಡಿದಂತೆ ಇಂಥ ಸರ್ಕಸ್ಸು ಮಾಡಿದ್ದಾರೆ.

ಸಂಸ್ಕೃತಕ್ಕಾದರೆ ಒಂದು ಶಬ್ದವನ್ನು ಬೇಕಾದ ಹಾಗೆ ಸಂಸ್ಕರಿಸಿ ಉಪಯೋಗಿಸಲು ಅನುಕೂಲವಿತ್ತು. ಏಕೆಂದರೆ ಸಂಸ್ಕೃತದ ವ್ಯಾಕರಣ ಅಷ್ಟು ವಿಶಾಲವಾಗಿದೆ; ಒಂದು ಧಾತುವಿನಿಂದ ನೂರಾರು ಅರ್ಥ ಕೊಡುವ ಶಬ್ದದ ನಾಣ್ಯಗಳನ್ನು ಚಲಾವಣೆಗೆ ತರಲು ಅದು

ದಾರಿ ಮಾಡಿ ಕೊಡುತ್ತದೆ. ಸಂಧಿ ಬಿಂಗಡಿಸುವ ಬೇರೆ ಬೇರೆ ತರಗಳಿಂದ ಒಂದೇ ವಾಕ್ಯಕ್ಕೆ ಬೇರೆ ಬೇರೆ ಅರ್ಥ ಬರಿಸಲಾಗುತ್ತದೆ. ಅದ ರಿಂದಲೇ ಇಂಥ ಕ್ಲಿಷ್ಟ ಪದ್ಯಗಳನ್ನು ಬರೆಯು ವುದು ಸಂಸ್ಕೃತದಲ್ಲಿ ಸಾಧ್ಯವಾಗುತ್ತದೆ.

ಚಿತ್ರಕಾವ್ಯವು ಶಬ್ದಾಲಂಕಾರದ ಬೆಳೆಯಿಂದ ಲಷ್ಟೇ ಉಂಟಾಯಿತೆನ್ನಲಾಗುವುದಿಲ್ಲ. ಅರ್ಥ ಚಿತ್ರವೂ ಸಂಸ್ಕೃತದಲ್ಲಿ ವಿಚಿತ್ರ ಕಾವ್ಯಗಳ ಸೃಷ್ಟಿಗೆ ಕಾರಣವಾಗಿದೆ. 'ರಾಘವ ಪಾಂಡ ವೀಯ' ಮುಂತಾದ ಮಹಾ ಕಾವ್ಯಗಳು ಈ ಜಾತಿಗೆ ಸೇರಿವೆ. ಒಂದೇ ಕಾವ್ಯದ ಪ್ರತಿಯೊಂದು ಪದ್ಯವೂ ರಾಮಾಯಣದ ಕಥೆಯನ್ನೂ ಭಾರತದ ಕಥೆಯನ್ನೂ ಹೇಳುವುದು 'ರಾಘವ ಪಾಂಡವೀ ಯ'ದ ವೈಶಿಷ್ಟ್ಯ. ಇದರಂತೆ ಏಕಕಾಲದಲ್ಲಿ ಐದು ಕಥೆಗಳನ್ನು ಹೇಳುವ ಕಾವ್ಯಗಳೂ ೧೦೦ ಕಥೆಗಳನ್ನು ಹೇಳುವ ಕಾವ್ಯಗಳೂ ಸಂಸ್ಕೃತ ದಲ್ಲಿ ಆಗಿಹೋಗಿದ್ದವೆಂದು ಸಾಹಿತ್ಯ ಚರಿತ್ರೆ ಯಿಂದ ತಿಳಿಯುತ್ತದೆ.

ಇಂಥ ಕಾವ್ಯಗಳಿಂದ, ಶ್ಲೋಕಗಳಿಂದ ಏನು ಪ್ರಯೋಜನ? ಎಂದು ಕೇಳುವದಾದರೆ, ಕಾವ್ಯದ ಆನಂದದ ದೃಷ್ಟಿಯಿಂದ ಪ್ರಯೋಜನ ವಿಲ್ಲ ಎಂದು ಒಪ್ಪಬೇಕಾಗುತ್ತದೆ. ಆದರೆ ನೀವು ಪತ್ರಿಕೆಗಳಲ್ಲಿ ನೋಡುವ 'ಚಕ್ರಬಂಧ' ಸ್ಪರ್ಧೆ ಗಳ ಪ್ರಯೋಜನವೇನು? ಅದು ನಿಮ್ಮ ಬುದ್ಧಿ ಶಕ್ತಿಯನ್ನು ಹರಿತಗೊಳಿಸುತ್ತದೆ, ಶಬ್ದಶಕ್ತಿ ಯನ್ನು ಹೆಚ್ಚಿಸುತ್ತದೆ, ವ್ಯಾಕರಣಜ್ಞಾನವನ್ನು ಬೆಳಸುತ್ತದೆ, ಅಲ್ಲವೆ? ಈ ಚಿತ್ರಶ್ಲೋಕಗಳೂ ಹಾಗೆಯೇ. ಇವುಗಳ ಅರ್ಥಮಾಡಿಕೊಳ್ಳ ಬೇಕಾದರೆ ಸಂಧಿ--ಸಮಾಸ, ಸಂಸ್ಕೃತದ ಅಪಾರ ಶಬ್ದಭಂಡಾರ ಇವೆಲ್ಲವುಗಳ ಸಹಾಯ ಪಡೆಯಬೇಕಾಗುತ್ತದೆ. ಬಲ್ಲವರಿಗೆ, ಪತ್ರಿಕೆಗಳ ಚಕ್ರಬಂಧಗಳಂತೆ, ಚದುರಂಗದಂತೆ, ಇದೂ ಒಂದು ವಿನೋದ. ಅವರು ಅದರಲ್ಲಿ ಅರ್ಥ ಸೌಂದರ್ಯವನ್ನು ಹುಡುಕುವದಿಲ್ಲ. ಏನಾದರೂ ಅರ್ಥ ಹೊರಡಿಸಿದರೇ ಸಾಕಾಗಿರುತ್ತದೆ.

ಆದರೆ ನೀರಸವೆನಿಸುವ ಶಬ್ದಾಲಂಕಾರ ದಿಂದಲೂ ಅರ್ಥಕ್ಕೆ ಸೌಂದರ್ಯ ತರಬಲ್ಲವರಿ ದ್ದಾರೆ. ಶಂಕರಾಚಾರ್ಯರ ಈ ಶ್ಲೋಕ ನೋಡಿರಿ: ವೀಣೆ ನುಡಿಸುತ್ತಿರುವ ದೇವಿಯನ್ನು ಅವರು ಬಣ್ಣಿಸುವುದು ಹೀಗೆ—

ಸರಿಗಮಪಧನಿರತಾಂ ತಾಂ
ವೀಣಾಸಂಕ್ರಾಂತ ಕಾಂತಹಸ್ತಾಂ ತಾಂ
ಶಾಂತಾಂ ಮೃದುಲಸ್ವಾಂತಾಂ
ಕುಚಭರತಾಂ ತಾಂ ನಮಾಮಿ
ಶಿವಕಾಂತಾಂ ।

ವೀಣೆಯ ಧ್ವನಿಯೇ ತರಂಗಿತವಾದಂತೆ ಅನಿ ಸುವುದಿಲ್ಲವೆ?

---

## ಸಜೀವವ್ಯಾಖ್ಯೆ !

ಒಮ್ಮೆ ರವೀಂದ್ರನಾಥ ಠಾಕೂರರು ತಮ್ಮ ಒಬ್ಬ ಅಭಿಮಾನಿಯ ಆಗ್ರಹದಿಂದ ಅವನ ಮನೆಗೆ ತೆರಳಿದರು. ಆ ಅಭಿಮಾನಿ ತನ್ನ ಮನೆಯಲ್ಲಿ ಕವೀಂದ್ರರು ಕುಳಿತು ಕೊಳ್ಳಲೆಂದು ಮರದ ಒಂದು ಸುಂದರ ಕುರ್ಚಿಯನ್ನು ಮುಂದೆ ಮಾಡಿ ಇಟ್ಟನು.

ಕವಿ ತಮ್ಮ ಆ ಅಭಿಮಾನಿಯನ್ನು ಕೇಳಿದರು: "ನಿಮ್ಮ ಈ ಕುರ್ಚಿ ಸಜೀವ ವಾದುದೇ?"

ಕವೀಂದ್ರರ ವಿಚಾರ ಪೂರ್ಣ ತಿಳಿಯದೆ ಈ ಅಭಿಮಾನಿ ಅವರ ಮುಖದ ಕಡೆಗೆ ಪ್ರಶ್ನಾರ್ಥಕ ನೋಟದಿಂದ ದಿಟ್ಟಿಸಿದ.

ಆಗ ಕವಿ ಹೇಳಿದರು: "ಗೊತ್ತಾಗಲಿಲ್ಲ? ಈ ಕುರ್ಚಿಯೊಡನೆ ಬೇರೊಂದು ಜೀವವಿದೆಯೋ? ಇಲ್ಲವೇ? ಅಂದರೆ ಈ ಕುರ್ಚಿಯಲ್ಲಿ ತಗಣೆಯುಂಟೇ ಇಲ್ಲವೇ ಎಂದು."

—ಗೋಪಾಲಚಂದ್ರರಾಯರ ಪುಸ್ತಕದಿಂದ



ರವೀಂದ್ರರು ೧೭ ನೇ ವಯಸ್ಸಿನಲ್ಲಿ ಲಂಡನ್ನಿನಲ್ಲಿದ್ದರು.
ಆಗ ಅವರಿಗೊದಗಿದ ಮೋಜಿನ ಅನುಭವ ಇದು.

# ನಾನು ಬೇಹಾಗ್ ರಾಗ ಹಾಡಿದ್ದು

ಮೂಲ: ರವೀಂದ್ರನಾಥ ಠಾಕುರ                ಅನುವಾದ: ಸ್ವಾಮಿ ಶಂಕರಾನಂದರು

ವಿಲಾಯತಿಯಲ್ಲಿದ್ದಷ್ಟು ದಿನ ಒಂದು ಪ್ರಹಸನ ನನಗೆ ಅಂಟಿಕೊಂಡಿತ್ತು. ಭಾರತ ವರ್ಷದಲ್ಲಿ ದೊಡ್ಡ ಅಧಿಕಾರಿಯಾಗಿದ್ದ ಆಂಗ್ಲನೊಬ್ಬನ ವಿಧವೆ ಹೆಂಡತಿಯ ಪರಿಚಯ ನನಗೆ ಆಗಿತ್ತು. ಆಕೆ ಪ್ರೀತಿಯಿಂದ 'ರುಬಿ' ಎಂದು ನನ್ನನ್ನು ಕರೆಯುತ್ತಿದ್ದಳು. ಅವಳ ಗಂಡ ಸತ್ತ ಸಮಯದಲ್ಲಿ ಆಕೆಯ ಭಾರತೀಯ ಮಿತ್ರನೊಬ್ಬ ಇಂಗ್ಲೀಷಿನಲ್ಲಿ ಒಂದು ಚರಮಗೀತೆಯನ್ನು ಬರೆದುಕೊಟ್ಟಿದ್ದನಂತೆ. ಅವರ ಕಾವ್ಯಶೋಭೆಯನ್ನು

“ ಜೀವನ ” ದಿಂದ

ಕುರಿತು ಹೆಚ್ಚು ಬರೆಯಲಾರೆನು. ನನ್ನ ದೌರ್ಭಾಗ್ಯದಿಂದ ಆ ಕವನವನ್ನು ಬೇಹಾಗ್ ರಾಗದಲ್ಲಿ ಹಾಡಬೇಕೆಂದು ಒಂದು ಟಿಪ್ಪಣಿಯಿತ್ತು.

ಒಂದು ದಿನ ಆಕೆ, "ನೀನು ಈ ಕವನವನ್ನು ಬೇಹಾಗ್ ರಾಗದಲ್ಲಿ ಹಾಡು" ಎಂದು ಬಲಾತ್ಕರಿಸಿದಳು. ನಾನು ದಾಕ್ಷಿಣ್ಯವಶನಾಗಿ ಆಕೆಯ ಮಾತು ನಡೆಸಿದೆ. ಆ ವಿಚಿತ್ರ ಕವನಕ್ಕೂ ಬೇಹಾಗ್ ರಾಗಕ್ಕೂ ಗಂಟು ಹಾಕಿದುದು ಎಷ್ಟು ಹಾಸ್ಯಕರವಾಗಿತ್ತೆಂದು ನನಗೇ ಗೊತ್ತು. ಆದರೂ ಆ ಮಹಿಳೆ ಭಾರತೀಯ ರಾಗದಲ್ಲಿ ತನ್ನ ಗಂಡನ ಶೋಕಗೀತ ಕೇಳಿ ಆನಂದಪಟ್ಟಳು. ಕತೆ ಇಲ್ಲಿಗೆ ಮುಗಿಯಿತೆಂದು ನಾನು ಎಣಿಸಿದ್ದೆ. ಆದರೆ ಹಾಗಾಗಲಿಲ್ಲ.

ಸಂತೋಷಕೂಟಗಳಲ್ಲಿ ಆಗಾಗ ಅವಳ ಭೇಟಿ ನನಗೆ ಆಗುತ್ತಿತ್ತು. ಊಟ ಮುಗಿದ ಮೇಲೆ ಔತಣಕ್ಕೆ ಅತಿಥಿಗಳಾಗಿ ಬಂದಿದ್ದ ಹೆಂಗುಸರೂ ಗಂಡುಸರೂ ಬೈಠಕಖಾನೆಯಲ್ಲಿ ಒಂದೆಡೆ ಕುಳಿತಿರುವಾಗ ಆಕೆ ಬೇಹಾಗ್ ರಾಗದಲ್ಲಿ ಆ ಹಾಡನ್ನು ಹಾಡೆಂದು ನನ್ನನ್ನು ಒತ್ತಾಯಗೊಳಿಸುತ್ತಿದ್ದಳು. ಭಾರತೀಯ ಸಂಗೀತದ ಮಾದರಿಯನ್ನು ಕೇಳಿಯೇವೆಂದು ಉತ್ಸುಕರಾಗಿ, ಅವರೆಲ್ಲ ಬಟ್ಟೆಗಿ ಕಾಡತೊಡಗುತ್ತಿದ್ದರು. ತತ್ಕ್ಷಣ ಆಕೆಯ ಜೇಬಿನಿಂದ ಅಚ್ಚಾದ ಕವನದ ಪ್ರತಿ ಹೊರಬರುತ್ತಿತ್ತು—ನನ್ನ ಕಿವಿಯ ಬುಡ ಕೆಂಪಾಗುತ್ತಿತ್ತು. ತಲೆ ಬಾಗಿಸಿ ನಾಚಿಕೆಯ ದನಿಯಲ್ಲಿ ಹಾಡುತ್ತಿದ್ದೆ—ಈ ಶೋಕಸಂಗೀತವು ನನ್ನನ್ನು ಬಿಟ್ಟು ಇತರರಾರನ್ನೂ ಶೋಕದಲ್ಲಿ ಮುಳುಗಿಸುತ್ತಿರಲಿಲ್ಲ ಎಂದು ಸ್ಪಷ್ಟವಾಗಿತ್ತು. ಹಾಡು ಮುಗಿದೊಡನೆಯೇ ಅವರು ನಗುಮೊಗದಿಂದ "Thank you very much. How interesting" ಎಂದು ಅಭಿನಂದಿಸಿದಾಗ ಅಂತಹ ಚಳಿಯಲ್ಲೂ ನನ್ನ ಮಯ್ಯಲ್ಲಿ ಬೆವರೊಡೆಯುತ್ತಿತ್ತು. ಈ ಮಹಾರಾಯನ ಸಾವು ನನ್ನ ಪಾಲಿಗೆ ಇಂಥ ದುರ್ಘಟನೆಯಾಗುವುದೆಂದು ನಾನು ಹುಟ್ಟಿದಾಗ ಅಥವಾ ಆತ ಸತ್ತಾಗ ಯಾರು ತರ್ಕಿಸಿದ್ದರು?

ಅನಂತರ ನಾನು ಡಾಕ್ಟರ ಸ್ಕಾಟರೊಡನೆ ಉಳಿದುಕೊಂಡು ಲಂಡನ್ ವಿಶ್ವವಿದ್ಯಾಲಯದಲ್ಲಿ ಓದತೊಡಗಿದಾಗ ಕೆಲವು ದಿನಗಳ ಮಟ್ಟಿಗೆ ನನಗೆ ಆಕೆಯ ಭೆಟ್ಟಿಯಾಗಲಿಲ್ಲ. ಲಂಡನ್ನಿನ ಹೊರಗೆ ವಾಸಿಸುತ್ತಿದ್ದ ಅವಳು ತನ್ನಲ್ಲಿಗೆ ಬಂದು ಹೋಗೆಂದು ನನಗೆ ಆಗಾಗ ಕಾಗದ ಬರೆಯುತ್ತಿದ್ದಳು. ಆದರೆ ಶೋಕಗೀತದ ಹೆದರಿಕೆಯಿಂದ ನಾನೇ ಹೋಗುತ್ತಿರಲಿಲ್ಲ. ಒಮ್ಮೆ ಅವಳಿಂದ ಬರಲೇಬೇಕೆಂದು ತಂತಿಯೇ ಬಂದುಬಿಟ್ಟಿತು.

ಕಾಲೇಜಿನಿಂದ ಮನೆಗೆ ಮರಳದೆ ನಾನು ನೆಟ್ಟಗೆ ಸ್ಟೇಷನ್ನಿಗೆ ಹೋದೆ. ಅದು ಮಹಾ ದುರ್ದಿನ; ಬಲವಾದ ಚಳಿ, ಮಂಜು ಬೇರೆ ಸುರಿಯುತ್ತಿತ್ತು. ಹೋಗಬೇಕಾಗಿದ್ದ ಊರು ಲೈನಿನಲ್ಲಿ ಕಟ್ಟಕಡೆಯ ನಿಲ್ದಾಣಕ್ಕಿದ್ದುದರಿಂದ ನೆಮ್ಮದಿಯಾಗಿ ಕುಳಿತುಕೊಂಡು ಮಂದಪ್ರಕಾಶದಲ್ಲಿ ಒಂದು ಪುಸ್ತಕ ಓದತೊಡಗಿದೆ. ಗಾಡಿಯಿಂದ ಯಾವಾಗ ಇಳಿಯಬೇಕು ಎಂದು ವಿಚಾರಿಸುವ ಅವಶ್ಯಕತೆ ನನಗೆ ಕಂಡುಬರಲಿಲ್ಲ.

ತಲಪಬೇಕಾಗಿದ್ದ ನಿಲ್ದಾಣಕ್ಕೂ ಹಿಂದಿನ ನಿಲ್ದಾಣದಿಂದ ಗಾಡಿ ಮುಂದೆ ಹೊರಟಿತು. ಒಂದೆಡೆ ಗಾಡಿ ನಿಂತಿತು. ಕಿಟಕಿಯಲ್ಲಿ ತಲೆ ಹಾಕಿ ಹೊರಗೆ ನೋಡಿದೆ. ಕಗ್ಗತ್ತಲೆ, ಜನವಿಲ್ಲ, ಬೆಳಕಿಲ್ಲ. ಒಳಗಿದ್ದವರೆಲ್ಲ ಹಿಂದಿನ ನಿಲ್ದಾಣದಲ್ಲೇ ಇಳಿದು ಹೋಗಿದ್ದರು. ಗಾಡಿ ಈ ಅಸ್ಥಾನದಲ್ಲಿ ಏಕೆ ನಿಂತಿತು? ಎಂದು ತಿಳಿಯುವಂತಿರಲಿಲ್ಲ. ಅದರಿಂದ ಮತ್ತೆ ಓದುವುದರತ್ತ ಗಮನವಿತ್ತೆ. ಸ್ವಲ್ಪ ಹೊತ್ತಾದ ಮೇಲೆ ಗಾಡಿ ಹಿಂದಕ್ಕೆ ಸರಿಯತೊಡಗಿತು. ನನಗೆ ಆಶ್ಚರ್ಯವಾಯಿತು. ಈ ಗಾಡಿಗಳ ಪೂರ್ವೋತ್ತರ ಅರಿಯಲು ಪ್ರಯತ್ನಿಸುವುದು ವ್ಯರ್ಥವೆಂದು ನಾನು ಭಾವಿಸಿದೆ. ಆದರೆ ಮತ್ತೆ ಹಿಂದಿನ ಸ್ಟೇಷನ್ನಿಗೇ ಗಾಡಿ ಬಂತು. ಈಗ ಮಾತ್ರ ಸುಮ್ಮನೆ ಕುಳಿತಿರಲು ನನ್ನಿಂದಾಗಲಿಲ್ಲ. ಗಾಡಿ ಇಂತಹ ಊರನ್ನು ಯಾವಾಗ ತಲಪುವುದೆಂದು ನಿಲ್ದಾಣದವರನ್ನು ವಿಚಾರಿಸಿದೆ.

"ಅಲ್ಲಿಂದ ಈಗ ತಾನೇ ಹಿಂದಿರುಗಿತಲ್ಲ" ಎಂದು ಅವರು ಹೇಳಿದರು.

"ಮತ್ತೆ ಈಗ ಎಲ್ಲಿಗೆ ಹೋಗುತ್ತಿದೆ?" ಎಂದು ವ್ಯಾಕುಲದಿಂದ ಕೇಳಿದೆ.

"ಲಂಡನ್ನಿಗೆ" ಎಂದು ಉತ್ತರ ಬಂತು.

ಇದು ದಡದಿಂದ ದಡಕ್ಕೆ ಮುಟ್ಟಿಸುವ ಕಡಪಿನ ದೋಣಿ ಎಂದುಕೊಂಡು ನಾನು ಗಡಬಡಿಸಿ ಅಲ್ಲಿಯೆ ಇಳಿದೆ. ಮತ್ತೆ ಉತ್ತರ ದಿಕ್ಕಿಗೆ ಹೋಗುವ ಗಾಡಿ ಯಾವಾಗ ಬರುವುದೆಂದು ವಿಚಾರಿಸಿದೆ. ಈ ರಾತ್ರಿ ಇನ್ನು ಬೇರೆ ಗಾಡಿ ಇಲ್ಲ ಎಂದು ಅವರು ತಿಳಿಸಿದರು. ಹತ್ತಿರದಲ್ಲೆಲ್ಲಿಯೂ ವಸತಿಗೃಹವೂ ಇರಲಿಲ್ಲವೆಂದು ಅವರು ಹೇಳಿದರು.

ಬೆಳಗ್ಗೆ ಹತ್ತು ಹೊಡೆದಾಗ ಊಟ ಮಾಡಿ ಹೊರಬಿದ್ದ ನನಗೆ ಈ ವರೆಗೆ ಗುಟುಕು ನೀರು ಸಹ ಹೊಟ್ಟೆಗೆ ಬಿದ್ದಿರಲಿಲ್ಲ. ಈಗೇನು ಮಾಡಲಿ? ದಪ್ಪವಾದ ಓವರ-ಕೋಟಿನ ಗುಂಡಿಗಳನ್ನು ಕೊರಳ ವರೆಗೆ ಹಾಕಿಕೊಂಡು ಒಂದು ಲಾಂದ್ರದ ಕಂಬದ ಕೆಳಗೆ ಕುಳಿತು ಸ್ಪೆನ್ಸರನ "Data of Ethics" ಓದಲಾರಂಭಿಸಿದೆ. ಈ ಪುಸ್ತಕ ಓದಲು ಇಂಥ ಅವಕಾಶ ಇನ್ನೆಲ್ಲಿ ಸಿಕ್ಕೀತು? ಎಂದು ಸಮಾಧಾನಮಾಡಿಕೊಂಡೆ.

ಸ್ವಲ್ಪ ಹೊತ್ತಿನ ಮೇಲೆ ಒಬ್ಬ ಪೋರ್ಟರ್ ಬಂದು ಒಂದು ಸ್ಪೆಶಲ್ ಗಾಡಿ ಇದೆ; ಅರ್ಧ ಗಂಟೆಯೊಳಗೆ ಬಂದು ತಲಪುವುದು ಎಂದು ತಿಳಿಸಿದ. ಅಲ್ಲಿಂದ ಮುಂದೆ ಉಂಟಾದ ಉತ್ಸಾಹದಲ್ಲಿ ಪುಸ್ತಕ ಓದುವುದು ನನ್ನಿಂದ ಸಾಧ್ಯವಾಗಲೇ ಇಲ್ಲ.

ಏಳೂವರೆಗೆ ನಾನು ತಲಪಬೇಕಾಗಿದ್ದಲ್ಲಿಗೆ ಒಂಬತ್ತೂವರೆಗೆ ತಲಪಿದೆ. ಮನೆಯ ಯಜಮಾನಿ "ಇದೇನು ರುಬಿ, ಸಂಗತಿಯೇನು?" ಎಂದು ಕೇಳಿದಳು. ನನ್ನ ಆಶ್ಚರ್ಯಕರ ಪ್ರಯಾಣದ ಸಂಗತಿಯನ್ನು ನಿರುತ್ಸಾಹದಿಂದ ವಿವರಿಸಿದೆ.

ಅಷ್ಟು ಹೊತ್ತಿಗೆ ಅತಿಥಿಗಳು ಊಟ ಮುಗಿಸಿದ್ದರು. ನನ್ನ ತಪ್ಪು ಸ್ವಯಂಕೃತವಲ್ಲದ್ದರಿಂದ ಕಠಿಣಶಿಕ್ಷೆ ಅನುಭವಿಸಬೇಕಾಗಲಿಕ್ಕಿಲ್ಲ ಎಂದುಕೊಂಡಿದ್ದೆ. ಶಿಕ್ಷೆ ವಿಧಿಸುವಾಕೆಯೂ ಹೆಂಗುಸಲ್ಲವೇ ಎಂದು ಭಾವಿಸಿದ್ದೆ. ಆದರೆ ಆಕೆ "ರುಬೀ, ಬಾ. ಒಂದು ಕಪ್ಪು ಚಹಾ ಕುಡಿವೆಯಂತೆ," ಎಂದಳು.

ನಾನು ಆ ವರೆಗೆಂದೂ ಟೀ ಕುಡಿದವನಲ್ಲ. ಆದರೆ ಜಠರಾಗ್ನಿ ಆರಿಸಲು ಒಂದು ಬಟ್ಟಲು ಟೀ ಅಷ್ಟಿಷ್ಟಾದರೂ ಸಹಾಯಮಾಡೀತೆಂದು ಒಂದೆರಡು ತುಂಡು ಬಿಸ್ಕತ್ತುಗಳೊಡನೆ ಆ ಕಷಾಯವನ್ನು ಕುಡಿದೆ. ಬೈಠಕ್‌ಖಾನೆಗೆ ಬಂದಾಗ ಅಲ್ಲಿ ವಯಸ್ಸು ಮೀರಿದ ಹಲವು ಹೆಂಗುಸರು ನೆರೆದಿದ್ದುದನ್ನು ನೋಡಿದೆ. ಅವರ ನಡುವೆ ಸುಂದರ ಯುವತಿಯೊಬ್ಬಳು ಇದ್ದಳು. ಅಮೇರಿಕದವಳಾದ ಆಕೆ ಯಜಮಾನಿಯ ಸೋದರಳಿಯನನ್ನು ಮದುವೆಯಾಗುವವಳಿದ್ದಳು. ಅವಳ ಪೂರ್ವಾನುರಾಗದ ಸಮಾರಂಭ ಅಂದು ನೆರೆದಿತ್ತು.

ಮನೆಯಾಕೆ "ಸರಿ, ಇನ್ನು ನೃತ್ಯ ಆರಂಭವಾಗಲಿ," ಎಂದಳು. ನನ್ನ ಕುಣಿತದ ಅವಶ್ಯಕತೆ ಏನೇನೂ ಇರಲಿಲ್ಲ. ನನ್ನ ಪ್ಯ-ಮನಗಳಿಗೂ ಉತ್ಸಾಹವಿರಲಿಲ್ಲ. ಆದರೆ ಜಗತ್ತಿನಲ್ಲಿ ಅತಿಯಾಗಿ ಒಳ್ಳೆಯವರಾದವರು ಅಸಾಧ್ಯವಾದುದನ್ನು ಮಾಡಿ ತೋರಿಸುವರು. ಅದರಿಂದಲೇ ಈ ನೃತ್ಯ ಸಭೆ ಆ ಯುವಕ-ಯುವತಿಯರಿಗಾಗಿ ಸೇರಿದ್ದರೂ ಹತ್ತು ಗಂಟೆಯ ಉಪವಾಸದ ಬಳಿಕ ಎರಡು ತುಂಡು ಬಿಸ್ಕತ್ತು ತಿಂದು ಮುಕ್ಕಾಲು ಆಯುಸ್ಸು ಕಳೆದ ಆ ಮುದಿ ಹೆಂಗುಸರೊಡನೆ ನರ್ತನಮಾಡಿದೆ.

ಇಲ್ಲಿಗೇ ಮುಗಿಯಲಿಲ್ಲ, ನನ್ನ ದುರವಸ್ಥೆ. ಅದಾದನಂತರ ಯಜಮಾನಿ "ರುಬಿ, ಇಂದು ನೀನು ರಾತ್ರಿ ಎಲ್ಲಿ ಕಳೆಯುವೆ?" ಎಂದು ಕೇಳಿದಳು. ಈ ಪ್ರಶ್ನೆಗೆ ನಾನು ಎಳ್ಳಷ್ಟೂ ಸಿದ್ಧನಾಗಿರಲಿಲ್ಲ; ದಿಕ್ಕು ಕಾಣದವನಂತೆ ಆಕೆಯ ಮುಖ ನೋಡುತ್ತ ನಿಂತೆ. ಅವಳು, "ಮಧ್ಯರಾತ್ರಿಯ ನಂತರ ಇಲ್ಲಿನ ಹೋಟೆಲುಗಳೆಲ್ಲ ಬಾಗಿಲು ಹಾಕುವವು. ಈಗ ತಡಮಾಡದೇ ನೀನು ಹೋಗಬೇಕು" ಎಂದು ಬೀಳ್ಕೊಡಲೆದ್ದಳು. ಪುಣ್ಯಕ್ಕೆ ಅವಳ ಸೌಜನ್ಯ ಪೂರ್ತಿಯಾಗಿ

ಅಳಿದಿರಲಿಲ್ಲ. ಅದರಿಂದ ನಾನೇ ಹೋಟೆಲನ್ನು ಹುಡುಕಿಕೊಂಡು ಹೋಗಬೇಕಾಗಲಿಲ್ಲ. ಲಾಂದ್ರ ಹಿಡಿದುಕೊಂಡು ಅವಳ ಆಳು ಬಂದು ನನ್ನನ್ನು ಹೋಟೆಲಿಗೆ ತಲಪಿಸಿದನು.

ಈ ಶಾಪ ವರವಾಗಿ ಪರಿಣಮಿಸೀತೆಂದು ಆಶಿಸಿದ್ದೆ. ಅಲ್ಲೇನಾದರೂ — ಸಸ್ಯಾಹಾರವಿರಲಿ, ಮಾಂಸಾಹಾರವಿರಲಿ, ಬಿಸಿಯಾಗಿರಲಿ, ತಂಗುಳಾಗಿರಲಿ—ದೊರೆವುದೇ ಎಂದು ವಿಚಾರಿಸಿದೆ. "ಮದ್ಯ ಇದೆ, ಖಾದ್ಯ ಇಲ್ಲ" ಎಂದು ಉತ್ತರ ಬಂತು. ನಿದ್ರಾದೇವಿಯ ಹೃದಯ ಕೋಮಲ ವಾದುದು. ಅವಳು ಅನ್ನ ಕೊಡದಿದ್ದರೂ ವೈಮರವೆ ಕೊಡುವಳು ಎಂದು ಎಣಿಸಿದೆನಾದರೂ ತನ್ನ ದೇಶೋವಿಶಾಲ ತೊಡೆಯ ಮೇಲೆ ಆಕೆಯೂ ಅಂದು ನನಗೆ ಅವಕಾಶ ಕೊಡಲಿಲ್ಲ. ಕಲ್ಲು ಹಾಸಿದ ನೆಲದ ಆ ಕೋಣೆಯಲ್ಲಿ ಚಳಿ ಕೊರೆಯುತ್ತಿತ್ತು.

ಬೆಳಿಗ್ಗೆ ಆ ಆಂಗ್ಲ-ಭಾರತೀಯ ವಿಧವೆ ಬೆಳಗಿನ ಫಲಹಾರಕ್ಕೆ ನನಗೆ ಕರೆಕಳುಹಿದಳು. ತಂಗಳೂಟದ ಏರ್ಪಾಡಿತ್ತು. ಹಿಂದಿನ ರಾತ್ರಿ ಊಟದ ಮಿಕ್ಕ ಅಂಶವನ್ನು ಇಂದು ತಿನ್ನುವುದೇ ಈ ಫರಾಳ. ಇದರ ಸ್ವಲ್ಪ ಅಂಶ ಬಿಸಿಯಾಗಿಯೊ ತಣ್ಣಗಾಗಿಯೊ ನಿನ್ನೆ ರಾತ್ರಿ ನನಗೆ ಸಿಕ್ಕಿದ್ದಲ್ಲಿ ಪ್ರಪಂಚದಲ್ಲಿ ಯಾರಿಗೂ ದೊಡ್ಡ ನಷ್ಟವಾಗುತ್ತಿರಲಿಲ್ಲ. ಕೊನೆಗೆ ನನ್ನ ಆ ನೃತ್ಯ, ನೀರಿನಿಂದ ದಡಕ್ಕೆ ಎತ್ತಿ ಹಾಕಿದ ಮೀನಿನ ಚಡಪಡಿಕೆಯಂತೆ ಅಷ್ಟು ಶೋಕಾವಹವಾಗುತ್ತಿರಲಿಲ್ಲ.

ಫರಾಳವಾದ ಮೇಲೆ ಯಜಮಾನಿ "ಆ ಬೇಹಾಗ್ ರಾಗದ ಹಾಡು ಒಬ್ಬಳಿಗೆ ಕೇಳಿಸಬೇಕಾಗಿತ್ತು. ಆದರೆ ಅವಳಿಗೆ ಖಾಯಿಲೆ. ಅವಳ ಮಲಗುವ ಕೋಣೆಯ ಹೊರಗೆ ನಿಂತು ನೀನು ಹಾಡಬೇಕು" ಎಂದು ಮೆಟ್ಟಲ ತುದಿಯಲ್ಲಿ ನನ್ನನ್ನು ನಿಲ್ಲಿಸಿದಳು. ಮುಚ್ಚಿದ ಬಾಗಿಲಿನ ಕಡೆಗೆ ಬೊಟ್ಟು ಮಾಡಿ "ಆ ಕೋಣೆಯಲ್ಲಿಯೆ ಇರುವಳು" ಎಂದಳು. ಆ ಅದೃಶ್ಯ ರಹಸ್ಯದ ಕಡೆಗೆ ತಿರುಗಿ ನಿಂತು ಮತ್ತೆ ಶೋಕಗೀತವನ್ನು ಬೇಹಾಗಿನಲ್ಲಿ ಹಾಡಿದೆ. ಅನಂತರ ರೋಗಿ ಏನಾದಳೆಂದು ನಾನು ಯಾರನ್ನೂ ಕೇಳಲೂ ಇಲ್ಲ, ನನಗೆ ಯಾರೂ ಹೇಳಲೂ ಇಲ್ಲ.

ಲಂಡನ್ನಿಗೆ ಹಿಂದಿರುಗಿ ಎರಡು ಮೂರು ದಿನ ಹಾಸಿಗೆಯಲ್ಲಿ ಬಿದ್ದುಕೊಂಡು ದಾಕ್ಷಿಣ್ಯಶೀಲದ ಪ್ರಾಯಶ್ಚಿತ್ತವನ್ನು ಅನುಭವಿಸಿದೆ. ಡಾಕ್ಟರರ ಹುಡುಗಿಯರು, "ನಿನ್ನ ದಮ್ಮಯ್ಯ, ಈ ಔತಣದ ವ್ಯವಹಾರ ನಮ್ಮ ದೇಶದ ಆತಿಥ್ಯದ ಮಾದರಿಯೆಂದು ತಿಳಿಯಬೇಡ. ಇದು ನಿಮ್ಮ ಭಾರತದ ಉಪ್ಪು ತಿಂದುದರ ಫಲ" ಎಂದರು.

## ಬಾಲ್ಯದ ಬರಹ

ಬಾಲ್ಯದ ಬರಹಗಳನ್ನು ಅಚ್ಚು ಹಾಕಿಸುವುದರಿಂದಾಗುವ ಅನಿಷ್ಟಗಳು ಹಲವು. ವಯಸ್ಸಾದಾಗ ಪಶ್ಚಾತ್ತಾಪ ಪಡಲು ಇದರಷ್ಟು ಒಳ್ಳೆಯ ಸಾಧನ ಬೇರೊಂದಿಲ್ಲ. ಆದರೆ ಇದರಲ್ಲೊಂದು ಅನುಕೂಲತೆಯೂ ಇದೆ. ಅಚ್ಚಿನ ಅಕ್ಷರದಲ್ಲಿ ತನ್ನ ಹೆಸರನ್ನು ನೋಡಬೇಕೆಂಬ ಹುಚ್ಚು ಎಳೆ ವಯಸ್ಸಿನಲ್ಲಿಯೇ ಅಡಗಿಹೋಗುವುದು.

— ಠಾಕುರ

ಹೆಣ್ಣು ಜೇಡ ಗಂಡನ್ನು ಕಬಳಿಸುತ್ತದೆ; ಗಂಡು ಜೇನ್ನೊಣ ಸಂತಾನೋತ್ಪಾದನೆಯ ವೇದಿಕೆಯಲ್ಲಿ ಬಲಿಯಾಗುತ್ತದೆ; ಆದರೂ ಸಾಗಿಯೇ ಸಾಗಿದೆ—

# ಸೃಷ್ಟಿಯ ಧೂರ್ತಲೀಲೆ: ಲೈಂಗಿಕ ಆಕರ್ಷಣೆ

ಜೆ. ಪಿ. ಲಾಕ್‌ಹಾರ್ಟ ಮುಮರಿಯವರ ಪುಸ್ತಕದಿಂದ ರೂಪಾಂತರ

ಲೈಂಗಿಕ ಆಕರ್ಷಣೆಯ ಮಾತು ಈಚೆಗೆ ತುಂಬಾ ಕೇಳಿಬರುತ್ತದೆ. ಕೆಲ ಹೆಂಗಸರು ಅಂಥ ಸುಂದರಿಯರಾಗಲಿ ಬುದ್ಧಿವಂತರಾಗಲಿ ಇಲ್ಲದಿದ್ದರೂ ಗಂಡಸರನ್ನು ಆಕರ್ಷಿಸಿ ವಶದಲ್ಲಿಟ್ಟುಕೊಳ್ಳುತ್ತಾರೆ. ಅದೇ ರೀತಿ ಕೆಲ ಚೆಲುವೆಯರೂ ಬುದ್ಧಿವಂತೆಯರೂ ಗಂಡಸರನ್ನು ಆಕರ್ಷಿಸಲು ಅಸಮರ್ಥರಾಗುವುದೂ ಆಗಾಗ್ಗೆ ಕಾಣಬರುವ ಸಂಗತಿ. ಗಂಡು ಹೆಣ್ಣುಗಳನ್ನು ಪರಸ್ಪರ ಸೆಳೆಯುವ ಈ ಶಕ್ತಿಯನ್ನೇ ಲೈಂಗಿಕ ಆಕರ್ಷಣೆಯೆಂಬ ಹೆಸರಿಂದ ಕರೆಯಲಾಗುತ್ತದೆ.

ಆದರೆ ಈ ಲೈಂಗಿಕ ಆಕರ್ಷಣೆಯೆಂದರೆ ನಿಗದಿಯಾಗಿ ಏನು? ಚೆಲುವೆಯರು ಕುರೂಪಿಗಳಿಗಿಂತ ಸುಲಭವಾಗಿ ಗಂಡಸರನ್ನು ಆಕರ್ಷಿಸುವರೆಂದು ಎಲ್ಲರೂ ಬಲ್ಲರು. ಸಾಮಾನ್ಯ ಸುಂದರಿಯರೂ ತಮಗೆ ಒಪ್ಪುವಂಥ ಸೀರೆ ಕುಪ್ಪಸ ತೊಟ್ಟಿದ್ದರೆ ಮನಸೆಳೆಯುತ್ತಾರೆ.



ಅದಕ್ಕಿಂತಲೂ ಹೆಚ್ಚಾಗಿ ಬಟ್ಟೆ ತೊಟ್ಟು ಕೊಳ್ಳುವ ಒನಪು-ಒರಣ, ನಡಿಗೆಯ ಅಂಗ ಭಂಗಿಗಳ ಮೋಹಕತೆ ಇವುಗಳಿಂದ ಕೆಲ ರಮಣಿಯರು ಆಕರ್ಷಕರಾಗಿ ಕಾಣಿಸುತ್ತಾರೆ. ನಗೆಯ ರೀತಿ, ಮಧುರಕಂಠ, ಮುಖದ ಉಲ್ಲಸಿತ ಭಾವ ಇವೂ ನಾರಿಯ ಸಮ್ಮೋಹನಾಸ್ತ್ರಗಳಾಗಿವೆ. ಇವುಗಳಲ್ಲಿ ಯಾವುದು ಹೆಚ್ಚು, ಯಾವುದು ಕಡಿಮೆ ಎಂದು ಹೇಳುವದು ಕಠಿಣ. ಬಹುಶಃ ಎಲ್ಲವೂ ಸೇರಿ ಪುರುಷ ವ್ಯಕ್ತಿಗಳನ್ನು ಸೆರೆ ಹಿಡಿಯುತ್ತವೇನೋ.

ಕೆಲ ಹೆಂಗಸರಲ್ಲಿ ಇವೆಲ್ಲ ಗುಣಗಳೂ ಸೇರಿ ಕೊಂಡಿರುವುದುಂಟು. ಅಂಥವರು ಒಮ್ಮೊಮ್ಮೆ ಇತಿಹಾಸದಲ್ಲಿ ಅತ್ಯಂತ ಉದಾತ್ತ ಅಥವಾ ಅತಿ ಘೋರ ಕೃತಿಗಳಿಗೆ ಪ್ರೇರಣೆ ಕೊಟ್ಟದ್ದುಂಟು.

ಲೈಂಗಿಕ ಆಕರ್ಷಣೆಯು ಗುಟ್ಟೇನೇ ಇರಲಿ, ಅದು ನಿಸರ್ಗದ ಒಂದು ಧೂರ್ತ ತಂತ್ರವೇ ಸೈ. ಪ್ರಪಂಚ ಮುಂದುವರಿಯಬೇಕಾದರೆ ಗಂಡು-ಹೆಣ್ಣಿನ ಸಂಯೋಗ ಅಗತ್ಯ. ಅದಕ್ಕೆ ಅವರು ಪರಸ್ಪರರಿಗೆ ಸ್ಪೃಹಣೀಯರಾಗಬೇಕು. ಅದಕ್ಕೇ ನಿಸರ್ಗವು 'ಲೈಂಗಿಕ ಆಕರ್ಷಣೆ'ಯೆಂಬ ತತ್ವವನ್ನು ನಮ್ಮ ಹೃದಯಗಳಲ್ಲಿಟ್ಟಿದೆ. ಇದಿಲ್ಲದೆ ಹೋದರೆ ಎಲ್ಲ ಜೀವರಾಶಿಗಳೂ ಬಹುಬೇಗ ಅವಸಾನವನ್ನು ಕಾಣುವವು.

ಹಲಕೆಲ ಜೀವಿಗಳಲ್ಲಿ ಲೈಂಗಿಕ ಆಕರ್ಷಣೆ ಹೆಚ್ಚಾಗಿ ಸ್ತ್ರೀಯರಲ್ಲಿ ಕೇಂದ್ರಿತವಾಗಿದ್ದರೆ ಬೇರೆ ಕೆಲ ಜಾತಿಗಳಲ್ಲಿ ಪುರುಷವರ್ಗವೇ ಆಕರ್ಷಣೆಯ ಕೇಂದ್ರವಾಗಿರುತ್ತದೆ. ಆದರೆ ಒಂದಲ್ಲ ಒಂದು ಬಗೆಯ ಲೈಂಗಿಕ ಆಕರ್ಷಣೆ ಮನುಷ್ಯರಲ್ಲಿ ಮಾತ್ರವಲ್ಲದೆ ಸಕಲ ಜೀವರಾಶಿಗಳಲ್ಲಿಯೂ ಇದ್ದೇ ಇದೆ.

ಅತಿ ನಿಮ್ನ ಜೀವಕೋಟಿಯಲ್ಲಿ ಈ ಆಕರ್ಷಣೆ ಹೇಗೆ ಕೆಲಸ ಮಾಡುತ್ತದೆಂದು ನಮಗೆ ಗೊತ್ತಿಲ್ಲ. ಆದರೆ ಅತಿ ಚಿಕ್ಕ ಹೈಡ್ರೋಜೋವಾ ಎಂಬ ಹೆಸರಿನ ಕಣದಂಥ ಜಲಜಾತ ಜೀವಗಳು ಕೂಡ ಯಾವುದೋ ಉತ್ತೇಜನದಿಂದ ಒಂದಕ್ಕೊಂದು ಅಂಟಿಕೊಂಡು ತಮ್ಮಂಥ ಹೊಸ ಜಂತುಗಳ ಉತ್ಪತ್ತಿಗೆ ಕಾರಣವಾಗುತ್ತವೆಂದು ನಾವು ಬಲ್ಲೆವು.

ಜೀವಶ್ರೇಣಿಯಲ್ಲಿ ಮತ್ತೆ ಸ್ವಲ್ಪ ಮೇಲೆ ಬಂದು ಜೇನ್ನೊಣಗಳನ್ನು ತೆಗೆದುಕೊಳ್ಳೋಣ. ಗಂಡು ತುಂಬಿ ಹೆಣ್ಣುತುಂಬಿಯನ್ನು ಬೆನ್ನಟ್ಟಿ ಯಾಕೆ ಆಕಾಶದಲ್ಲಿ ಹಾರುತ್ತ 'ಮದುವೆ' ಯಾಗಲು ಹಾತೊರೆಯುತ್ತದೆ? ಹೆಣ್ಣಿನೊಡನೆ ಸಂಯೋಗವಾದರೆ ತೀರಿತು, ಕೂಡಲೆ ಗಂಡು ಜೇನ್ನೊಣದ ಕೊಲೆಯಾಗುತ್ತದೆ. ಆದರೂ ಅದೇಕೆ ಸಮಾಗಮಕ್ಕೆ ಉತ್ಸುಕವಾಗಬೇಕು? ಯಾರಿಗೂ ಗೊತ್ತಿಲ್ಲ.

ಆ ಮೇಲೆ ಜೇಡರ ಹುಳ. ಅವುಗಳಲ್ಲಿ ಹೆಣ್ಣು ದೊಡ್ಡದು, ಬಲಶಾಲಿ; ಗಂಡು ಚಿಕ್ಕದು. ಸಂಯೋಗವಾಗಿ ಅವರ ಆನಂದಸಮಾಧಿ ಭಗ್ನವಾದ ಕ್ಷಣ ಹೆಣ್ಣು ಹೆಚ್ಚಾಗಿ ಗಂಡನ್ನು ತಿಂದು ಹಾಕಲು ಮುಗಿಬೀಳುತ್ತದೆ. ಹೀಗಿದ್ದರೂ ಗಂಡೇಕೆ ಅದರ ಆಲಿಂಗನಕ್ಕೆ ಹಾತೊರೆಯುತ್ತದೆ? ಗೊತ್ತಿಲ್ಲ.

ಮೀನುಗಳ ಲೈಂಗಿಕ ಆಕರ್ಷಣೆಯನ್ನು ಅರ್ಥಮಾಡಿಕೊಳ್ಳುವುದಂತೂ ಇನ್ನೂ ಕಠಿಣ. ನಾನೊಮ್ಮೆ ಒಂದು ಹೊಳೆಯಲ್ಲಿ ಗಜಿಯನ್ ಎಂಬ ಜಾತಿಯ ಚಿಕ್ಕ ಹೆಣ್ಣು ಮೀನೊಂದು ನದಿಯ ತೀರಭಾಗದಲ್ಲಿ ತತ್ತಿಗಳನ್ನಿಡಲು ಹೋಗುವುದನ್ನು ಕಂಡೆ. ಅದರ ಸ್ವಲ್ಪ ಹಿಂದೆ ಎರಡು ಮಗ್ಗಲುಗಳಲ್ಲಿ ಎರಡು ಗಂಡು ಮೀನು

ಗಳು ಈಸುತ್ತ ಬೆಂಬತ್ತಿದ್ದವು. ಕಲ್ಲಿನ ತುಣುಕುಗಳ ರಾಶಿಯನ್ನು ಕಂಡಲ್ಲೆಲ್ಲ ಹೆಣ್ಣು ತತ್ತಿಗಳನ್ನಿಡುತ್ತಿತ್ತು.

ಅನಂತರ ಗಂಡುಗಳಲ್ಲಿ ಒಂದು ಅಥವಾ ಎರಡೂ ತಮ್ಮ ವೀರ್ಯವನ್ನು ಆ ಅಂಡಗಳ ಮೇಲೆ ಸ್ಖಲನಗೊಳಿಸಿ ತಮ್ಮ ಪಕ್ಕಗಳಿಂದ ಕಲ್ಲಿನ ಚೂರುಗಳನ್ನು ಕೆದರಿ ಫಲಿತ ಅಂಡಗಳನ್ನು ಮುಚ್ಚುತ್ತಿದ್ದವು.

ಶರೀರಸಂಪರ್ಕವೇ ಇಲ್ಲದ ಈ ಸಂತಾನೋತ್ಪತ್ತಿ ಕ್ರಿಯೆಯಿಂದ ಈ ಗಂಡು ಮೀನುಗಳಿಗೆ ಏನು ಸುಖ ಸಿಗುತ್ತಿತ್ತೋ ದೇವರಿಗೇ ಗೋಚರ.

ಎರಡು ಗಂಡು ಮೀನುಗಳು ತಾವೇ ಇದ್ದಾಗ ಶಾಂತಿಯಿಂದ ಬಾಳುತ್ತವೆ. ಆದರೆ ಹತ್ತಿರದಲ್ಲಿ ಹೆಣ್ಣು ಮೀನೊಂದಿದ್ದರೆ ಎಷ್ಟೋ ಸಲ ಅವು ಪ್ರಾಣ ಹೋಗುವವರೆಗೂ ತಮ್ಮಲ್ಲಿ ಹೋರಾಡುವುದುಂಟು.

ಕೆರೆಯ ಮೀನುಗಳಲ್ಲಿ ಈ ಹವ್ಯಾಸವನ್ನು ಅನೇಕರು ನೋಡಿರಬಹುದು. ಗಂಡುಮೀನುಗಳಲ್ಲಿ ಹೆಣ್ಣನ್ನು ತಮ್ಮದಾಗಿ ಮಾಡಿಕೊಳ್ಳುವ ಯಾವುದೋ ಉತ್ಕಟೇಚ್ಛೆ ಇರಬೇಕು. ಆದರಿಂದಲೇ ಅವು ಪ್ರತಿಸ್ಪರ್ಧಿ ಗಂಡುಮೀನುಗಳನ್ನು ದೂರೀಕರಿಸಲು ಹವಣಿಸುತ್ತಿರಬೇಕು. ಆದರೆ ಈ ಸ್ವೈಜ ಇಚ್ಛೆಯ ಸ್ವರೂಪ ಅರ್ಥವಾಗುವದಿಲ್ಲ.

ಇದಕ್ಕೂ ಮೇಲ್ಮಟ್ಟದ ಜೀವಿಗಳಲ್ಲಿ ವಾಸ[illegible] ಆಕರ್ಷಣೆಯ ನಿಮಿತ್ತವಾಗುತ್ತದೆ. [illegible] ದೇಹದ ಹಿಂಭಾಗದಲ್ಲಿರುವ ಒಂದು [illegible] ಒಂದು ಬಗೆಯ ತೀವ್ರ ವಾಸನೆ ಹೊರಹೊಮ್ಮುತ್ತದೆ. ಅದು ಗಂಡುಗಳ ಮನವನ್ನು ಉದ್ರೇಕಿಸುತ್ತದೆ. ಇದು ಇಲಿಗಳಿಂದಾರಂಭಿಸಿ ಆನೆಗಳ ವರೆಗೆ ಎಲ್ಲ ಕಶೇರುಕ ( ಬೆನ್ನೆಲುಬುಳ್ಳ ) ಪ್ರಾಣಿಗಳಲ್ಲಿ ಇರುವ ವೈಶಿಷ್ಟ್ಯ.

ಈ ಆಕರ್ಷಣೆಯಲ್ಲಿ ಮನುಷ್ಯರಾದ ನಮಗೆ ಪರಿಚಿತವಾದ "ಪ್ರೇಮ"ದ ಪ್ರಶ್ನೆಯೇ ಇಲ್ಲ. ಎರಡು ಪ್ರಾಣಿಗಳಲ್ಲಿ ಸ್ನೇಹವಿರುವುದು ಅಪರೂಪವಲ್ಲ. ಆದರೆ ಅದು ಹೆಚ್ಚಾಗಿ ಹೆಣ್ಣು-ಗಂಡುಗಳಲ್ಲಿರುವುದಿಲ್ಲ. ಒಂದೇ ಜಾತಿಯ ಸಲಿಂಗ ಪ್ರಾಣಿಗಳಲ್ಲಿ, ಕೆಲವೇಳೆ ಬೇರೆ ಬೇರೆ ಜಾತಿಯವುಗಳಲ್ಲಿ ಅತಿ ಗಾಢವಾದ ಮೈತ್ರಿ ಬೆಳೆಯುವದುಂಟು. ಆಡು-ಕುರಿ, ಕುದುರೆ-ನಾಯಿಗಳಲ್ಲಿ ಈ ಬಗೆಯ ಅನಿಮಿತ್ತ ಮೈತ್ರಿ ಬೆಳೆದು ಅವು ಒಂದನ್ನೊಂದು ಅಗಲಿದರೆ ತಾಳಲಾರದ ದುಃಖವನ್ನು ಅನುಭವಿಸಿದ ಉದಾಹರಣೆಗಳಿವೆ. ಆದರೆ ಲೈಂಗಿಕ ಮೈತ್ರಿಯ ಅರ್ಥಾತ್ ನಾವು ಪ್ರೇಮವೆಂದು ಕರೆಯುವ ಭಾವನೆಯ ನಿದರ್ಶನಗಳು ಪ್ರಾಣಿಗಳಲ್ಲಿ ಎಲ್ಲಿಯೂ ಕಾಣಿಸುವುದಿಲ್ಲ.

ಪಕ್ಷಿಗಳು ಮಾತ್ರ ಇದಕ್ಕೆ ಹೊರತಾಗಿರುವಂತಿದೆ. ಅವುಗಳಲ್ಲಿ ವಾಸನೆಯು ಲೈಂಗಿಕ ಆಕರ್ಷಣೆಯ ಸಾಧನವಾಗಿಲ್ಲ. ಆಕಾಶದಲ್ಲಿ ವೇಗವಾಗಿ ಹಾರುವ ಅವುಗಳಿಗೆ ವಾಸನೆಯ ಸಾಧನ ಅಷ್ಟೇನೂ ಪ್ರಯೋಜನ ಬೀಳುವಂತಿಲ್ಲ.

ಪಕ್ಷಿಗಳಲ್ಲಿ ಮನುಷ್ಯರ ಹಾಗೆಯೇ ಕಣ್ಣು

ಕೀಗಳು ಲೈಂಗಿಕ ಆಕರ್ಷಣೆಯ ಇಂದ್ರಿಯ ಗಳು. ನವಿಲು ಮೊದಲಾದ ಕೆಲ ಹಕ್ಕಿಗಳಲ್ಲಿ ಗಂಡಿನ ಪುಚ್ಛ-ಪೋಹಕ ಪುಕ್ಕಗಳು ಹೆಣ್ಣನ್ನು ಆಕರ್ಷಿಸುವ ಸಾಧನಗಳು. ಅವುಗಳಲ್ಲಿ ಕೆಲ ವಕ್ಕೆ ಬೆದೆಯ ಋತುವಿನಲ್ಲೇ ಗರಿಗಳು ಸಮೃದ್ಧಿ ಹೊಂದುತ್ತವೆ. ಉದಾಹರಣೆಗೆ ಲಂಡನ್ ಗುಬ್ಬಚ್ಚಿಗಳಲ್ಲಿ ಇತರ ಋತುಗಳಲ್ಲಿ ಗಂಡು ಹೆಣ್ಣುಗಳ ಅಂತರ ಸಹಸಾ ಕಾಣಿಸುವುದಿಲ್ಲ. ವಸಂತಋತು ಬಂದಾಗ ಮಾತ್ರ ಗಂಡಿಗೆ ಚೆಲು ವಾದ ಗರಿಗಳು ಬೆಳೆಯುತ್ತವೆ.

ಬೇರೆ ಹಕ್ಕಿಗಳಲ್ಲಿ ಹಾಡು ಲೈಂಗಿಕ ಆಕರ್ಷ ಣಕ್ಕೆ ನೆರವಾಗುತ್ತದೆ. ವಸಂತಕಾಲದ ಕೋಗಿ ಲೆಯ ಕವಿಜನಪ್ರಿಯ ಪಂಚಮಸ್ವರದ ಗಾನಕ್ಕೆ ಗೆಣೆತನದ ಆಸೆಯೇ ಪ್ರಚೋದನೆ.

ನೃತ್ಯವೂ ಅನುನಯವೂ ಹಲವು ಹಕ್ಕಿಗಳಲ್ಲಿ ಗಂಡುಹೆಣ್ಣುಗಳ ಅನುರಾಗೋತ್ಕರ್ಷ ಮಾಡುವ ಸಾಧನಗಳಾಗಿವೆ. ಪರಸ್ಪರ ತಲೆವಾಗುವುದು, ಒಂದಕ್ಕೊಂದು ಎಲೆಯ ಚೂರುಗಳನ್ನು ಕಾಣಿಕೆ ಕೊಡುವುದು, ಮುಳುಗುವುದು, ಈಸು ವುದು ಮೊದಲಾದ ಶೃಂಗಾರ ಚೇಷ್ಟೆಗಳನ್ನು ಕೆಲ ನೀರು-ಹಕ್ಕಿಗಳು ನಡೆಸುತ್ತವೆ.

ಮನುಷ್ಯರ ದಂಪತಿ-ಪ್ರೇಮದಂತೆ ಹಕ್ಕಿಗಳ ಲ್ಲಿಯೂ ಕೆಲ ಮಟ್ಟಿಗೆ ಇದೆ. ಇದರಲ್ಲಿ ಅವು ಸಸ್ತನಿ ಪ್ರಾಣಿಗಳಿಗಿಂತ ಮನುಷ್ಯರಿಗೆ ಹತ್ತಿರ ವಾದವು. ಎಷ್ಟೋ ಪಕ್ಷಿಜಾತಿಗಳಲ್ಲಿ ಗಂಡು, ತತ್ತಿಗಳನ್ನು ರಕ್ಷಿಸುವುದರಲ್ಲಿ ಮತ್ತು ಮರಿಹಕ್ಕಿ ಗಳಿಗೆ ಗುಟುಕು ಕೊಡುವುದರಲ್ಲಿ ಹೆಣ್ಣಿನೊಡನೆ ಸಹಕರಿಸುತ್ತದೆ. ಒಮ್ಮೆ ಹೆಣ್ಣುಗಂಡುಗಳಲ್ಲಿ ಸಂಗಮವಾಯಿತೆಂದರೆ ಆ ಋತುವಿನ ಮಟ್ಟಿ ಗಾದರೂ ಅವು ಬೇರೆ ಹಕ್ಕಿಗಳೊಡನೆ ವ್ಯಭಿಚಾರ ಕ್ಕಿಳಿಯುವುದಿಲ್ಲ. ವರ್ಷಾನುವರ್ಷ ಅವೇ ಜೋಡಿಗಳು ಏಕನಿಷ್ಠೆಯಿಂದ ದಾಂಪತ್ಯ ಧರ್ಮವನ್ನು ಪಾಲಿಸಿದ ಉದಾಹರಣೆಗಳಿವೆ. ಇದು ಮನುಷ್ಯರೊಳಗಿನ ಏಕಪತ್ನೀ-ಏಕಪತಿ ವ್ರತ ಪಾಲನೆಗೆ ಸಮೀಪವಾದ ನಿರಂತರ ಪ್ರಣಯವೆಂದು ಹೇಳಬೇಕು.

ಇದನ್ನೆಲ್ಲ ನೋಡಿದರೆ ಈ ಲೈಂಗಿಕಾಕರ್ಷಣೆ ಜೀವಜಂತುಗಳ ಉತ್ಕ್ರಾಂತಿಯಲ್ಲಿ ಬಗೆ ಬಗೆಯ ರೂಪಗಳಲ್ಲಿ ವಿಕಾಸ ಹೊಂದಿ, ಬೇರೆ ಬೇರೆ ಇಂದ್ರಿಯಗಳ ಮೂಲಕ ಕಾರ್ಯ ಮಾಡುತ್ತ ಬಂದಿದೆಯೆಂದಾಗುತ್ತದೆ.

ಮನುಷ್ಯರಲ್ಲಿ ಅದು ತುಂಬ ಜಟಿಲ ರೂಪ ದಲ್ಲಿದೆ. ಅದನ್ನು ಹೀಗೇ ಎಂದು ಬಿಡಿಸಿ ಹೇಳಲು ಬರುವುದಿಲ್ಲ. ಆದರೆ ಮಾನವ ಜೀವನದಲ್ಲಿ ಅದರ ಪಾತ್ರ ಮಹತ್ವದ್ದೆಂಬದರಲ್ಲಿ ಸಂಶಯವಿಲ್ಲ.

ಲೈಂಗಿಕ ಆಕರ್ಷಣೆಯು ದೊಡ್ಡ ದೊಡ್ಡ ಉದ್ದಿಮೆ-ವ್ಯಾಪಾರಗಳಿಗೆ ಜನ್ಮವಿತ್ತಿದೆ. ಸೀರೆ-ಕುಪ್ಪಸಗಳು, ಸಿಂಪಿಗರ ಅಂಗಡಿಗಳು, ಸುಗಂಧ ಮತ್ತು ಸೌಂದರ್ಯವರ್ಧಕಗಳು ಇವೆಲ್ಲವೂ ಈ ಒಂದು "ಮಾನವ ದೌರ್ಬಲ್ಯ"ದ ತಳಹದಿಯ ಮೇಲೆ ನಿಂತಿವೆ.

ಗಂಡಸರಿಗೆ ಹೆಂಗಸರ ರೂಪ ಒಯ್ಯಾರಗಳ ಮೇಲೆ ಆಸ್ಥೆ ಉಳಿಯದೇ ಹೋದರೆ ಪೇಟೆ ಯಲ್ಲಿ ಪ್ರಚಂಡ ಬಿಕ್ಕಟ್ಟು ತಲೆದೋರಬಹುದು. ಆದರೆ ಆ ಭಯ ನಿರಾಧಾರವಾದದ್ದು. ಸ್ತ್ರೀ ಸೌಂದರ್ಯದ ಹೆಚ್ಚಳಕ್ಕಾಗಿ ವೆಚ್ಚವಾಗುವ ಹಣ ಎಲ್ಲ ದೇಶಗಳಲ್ಲಿ ವರ್ಷೇವರ್ಷೇ ಹೆಚ್ಚುತ್ತಲೇ ಇದೆ. ನಾಗರಿಕತೆ ಬೆಳೆದಂತೆ ಸಮಾಜದ ಸೀತಾ ದೇವಿಯರು ಸಮಾಜದ ಮೇನಕೆಯರನ್ನು ದೇಹ ಶೃಂಗಾರದಲ್ಲಿ ಹಿಂದೆ ಹಾಕಲು ಧಾವಿಸುತ್ತಿದ್ದಾರೆ.

## ಆ ಆಕರ್ಷಣೆ

"ಇಂದಿರೆಯಂಥ ಸುಂದರಿ ಆ ಕುಂಬಳಕಾಯಿಯಂಥ ಮುದಿಗೂಬೆಯನ್ನು ಮದುವೆಯಾಗಲು ಯಾಕೆ ಒಪ್ಪಿದಳೆಂದು ಅರ್ಥವೇ ಆಗುವದಿಲ್ಲ."

"ಕರೆನ್ಸಿ ನೋಟುಗಳ ಆಸೆ ಇದ್ದವರು ಅವು ಹಳೆಯುವೆಂದು ತಿರಸ್ಕರಿಸುವದಿಲ್ಲ."

# ನ್ಯೂಟ್ರೊ - ಬಿಸ್ಕೀಟು

ಉತ್ತರ ಪ್ರದೇಶದ ಮೋದಿನಗರದಲ್ಲಿರುವ ಮೋದಿ ಸಪ್ಲೈಸ್ ಕಾರ್ಪೊರೇಶನ್ನಿನ ಕಾರಖಾನೆಗಳಲ್ಲಿ ಕೇಂದ್ರ ಆಹಾರ ಸಂಶೋಧನಾಲಯ ಈ ವರ್ಷ ಹೊಸ ಮಾದರಿಯ ಒಂದು ಲಕ್ಷ ಪೌಂಡು ಬಿಸ್ಕೀಟನ್ನು ತಯಾರಿಸಿತು. "ನ್ಯೂಟ್ರೋ ಬಿಸ್ಕೀಟು" ಅಥವಾ "ಪೌಷ್ಟಿಕ ಬಿಸ್ಕೀಟು" ಎಂಬ ಅನ್ವರ್ಥನಾಮದ ಈ ಬಿಸ್ಕೀಟನ್ನು ನೆರೆಹಾವಳಿಯ ಪ್ರದೇಶದಲ್ಲಿ ಸಂತ್ರಸ್ತರಿಗೆ ಹಂಚಲಾಯಿತು. ಪ್ರಧಾನ ಮಂತ್ರಿಗಳು ಸ್ವತಃ ಈ ಬಿಸ್ಕೀಟಿನ ರುಚಿ ನೋಡಿ, ಅದನ್ನು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸಲು ಪ್ರಧಾನ ಮಂತ್ರಿಯ ಪರಿಹಾರ ನಿಧಿಯಿಂದ ಒಂದು ಲಕ್ಷ ರೂಪಾಯಿ ಮಂಜೂರು ಮಾಡಿದರು.

ನ್ಯೂಟ್ರೊ ಬಿಸ್ಕೀಟುಗಳು ಬಿಸ್ಕೀಟುಗಳೇ— ಆದರೆ ಅವುಗಳ ಗುಣ ಹೆಚ್ಚು. ನಾಲ್ಕೈದು ಬಿಸ್ಕೀಟುಗಳನ್ನು ತಿಂದರೆ ನಿಮ್ಮ ಶರೀರದ ದೈನಂದಿನ ಅವಶ್ಯಕತೆಯ ಬಹುಭಾಗ ಪೂರೈಸಲ್ಪಡುವವು. ಪೌಷ್ಟಿಕ ಬಿಸ್ಕೀಟು ಎಂಬ ಹೆಸರು ಇದಕ್ಕೆ ಅನುರೂಪವೇ ಆಗಿದೆ. ಎರಡನೆಯದಾಗಿ, ಈ ಬಿಸ್ಕೀಟುಗಳನ್ನು ಅಗ್ಗವಾಗಿ ತಯಾರಿಸಬಹುದು.

ಇವು ಅಗ್ಗವಾಗಿರಲು ಕಾರಣ, ಅವುಗಳನ್ನು ಶೇಂಗಾ (ನೆಲಗಡಲೆ) ಹಿಟ್ಟು ಮತ್ತು ಕಡಲೆ ಹಿಟ್ಟಿನಲ್ಲಿ ಸಾಮಾನ್ಯ ಬಿಸ್ಕೀಟಿನ ಹಿಟ್ಟನ್ನು ಸೇರಿಸಿ ತಯಾರಿಸುವುದು. ಶೇಂಗಾ ಹಿಟ್ಟೆಂದರೆ ಶೇಂಗಾದಿಂದ ಎಣ್ಣೆಯ ಅಂಶವನ್ನು ಹಿಂಡಿದ ಬಳಿಕ ಉಳಿಯುವ ಚರಟದ ಹಿಟ್ಟು. ಹೀಗಿದ್ದರೂ ಈ ಬಿಸ್ಕೀಟುಗಳಲ್ಲಿ ನಮ್ಮ ಶರೀರ ಪೋಷಣೆಗೆ ಬೇಕಾದ ಪ್ರೋಟೀನು, ವಿಟಾಮೀನು ಮತ್ತು ಖನಿಜಗಳ ಅಂಶ ಧಾರಾಳವಾಗಿದೆ. ಸಾಮಾನ್ಯ ಬಿಸ್ಕೀಟುಗಳಿಗಿಂತ ಮೂರು ಪಟ್ಟು ಪೌಷ್ಟಿಕ ಗುಣ ಇದರಲ್ಲಿದೆ.

ಮೈಸೂರಿನಲ್ಲಿರುವ ಕೇಂದ್ರ ಆಹಾರ ಸಂಶೋಧನಾಲಯದ ವಿಜ್ಞಾನಿಗಳ ಪರಿಶ್ರಮದಿಂದ ಈ ಬಿಸ್ಕೀಟುಗಳು ಸಿದ್ಧವಾಗಿವೆ. ಶೇಂಗಾ ಮತ್ತು ಸೋಯಾ ಅವರೆಗಳಿಂದ ಕೃತಕ ಹಾಲು ಮೊಸರುಗಳನ್ನು ತಯಾರಿಸಿದ ತಜ್ಞರೇ "ಕಸದಿಂದ ರಸ" ತರಿಸುವ ಈ ಬಿಸ್ಕೀಟುಗಳನ್ನು ತಯಾರಿಸುವ ವಿಧಾನವನ್ನೂ ಕಂಡುಹಿಡಿದರು.

ಭಾರತದಲ್ಲಿ ಆಹಾರದ ಕೊರತೆಗಿಂತಲೂ ಇದ್ದ ಆಹಾರದಲ್ಲಿ ಸತ್ವವಿಲ್ಲದಿರುವುದು ದೊಡ್ಡ ಸಮಸ್ಯೆ. ಆಹಾರ ಸಂಶೋಧನಾಲಯವು ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯಲು ಮಾಡಿದ ಪ್ರಯತ್ನಗಳ ಫಲಗಳಲ್ಲಿ "ನ್ಯೂಟ್ರೋ ಬಿಸ್ಕೀಟೂ" ಒಂದು. ಪ್ರತಿ ಪ್ರಾಯಸ್ಥನಿಗೂ ದಿನಕ್ಕೆ ೬೦-೭೦ "ಗ" ದಷ್ಟು ಪ್ರೋಟೀನುಗಳು ಬೇಕೇಬೇಕಾದರೂ ಭಾರತದಲ್ಲಿ ಸಾಧಾರಣ ಜನರಿಗೆ ತಲಾ ೪೫ "ಗ" ಕ್ಕಿಂತ ಹೆಚ್ಚು ಸಿಗುವುದಿಲ್ಲೆಂದು ಜಾಗತಿಕ ಆಹಾರ ಸಂಸ್ಥೆ ಹೇಳಿದೆ. ಪುಷ್ಟಿಯ ಅಭಾವದಿಂದ ಮಕ್ಕಳಲ್ಲಿಯೂ ದೊಡ್ಡವರಲ್ಲಿಯೂ ನಾನಾ ತರದ ರೋಗಗಳು ಸಹಜವಾಗಿಯೇ ತಲೆಯೆತ್ತುತ್ತವೆ.

ಸಂಶೋಧನಾಲಯದ ಪ್ರಕಟನೆಗಳ ಆಧಾರದಿಂದ

ಮೈಸೂರಿನ ಆಹಾರ ಸಂಶೋಧನಾಲಯದ ವಿಜ್ಞಾನಿಗಳನ್ನು ಈ ಬಿಸ್ಕೀಟಿನ ತಯಾರಿಕೆಗೆ ಪ್ರೋತ್ಸಾಹಿಸಿದವರು ಕೇಂದ್ರ ಆರೋಗ್ಯ ಮಂತ್ರಿಗಳೇ ಮೊದಲಾದ ಪ್ರಮುಖರು. ಈ ವರ್ಷ ಫೆಬ್ರವರಿಯಲ್ಲಿ ಹೊಸದಿಲ್ಲಿಯಲ್ಲಿ ಲೇಡಿ ಇರ್ವಿನ್ ಕಾಲೇಜಿನಲ್ಲಿ ನಡೆದ ಆಹಾರ ಪೌಷ್ಟಿಕ ಪ್ರದರ್ಶನದಲ್ಲಿ ಸಂಶೋಧನಾಲಯವು ಭಾಗವಹಿಸಿತ್ತು. ಅಲ್ಲಿ ಅದು ತನ್ನ ನೂತನ ತಯಾರಿಕೆಯಾದ "ವಿವಿಧೋದ್ದೇಶ ಆಹಾರ"ವನ್ನೂ ಪ್ರದರ್ಶಿಸಿತ್ತು. "ವಿವಿಧೋದ್ದೇಶ ಆಹಾರ"ವನ್ನು ಮಿಶ್ರಮಾಡಿ ತಯಾರಿಸಿದ ಪಕೋಡಾ, ಮಿಠಾಯಿ, ಪುರಿಗಳನ್ನು ಸ್ವತಃ ಆಹಾರ ಸಂಶೋಧನಾಲಯದ ಡೈರೆಕ್ಟರರಾದ ಡಾ. ವಿ. ಸುಬ್ರಹ್ಮಣ್ಯರೇ ನಿಂತು ಮಾರಿದರು. ಅವು ರುಚಿಕಟ್ಟಾಗಿ ಜನ ಮೆಚ್ಚಿದರು.

ಈ "ವಿವಿಧೋದ್ದೇಶ ಆಹಾರ" ವೆಂದರೇನು? ಪೌಷ್ಟಿಕಾಂಶಗಳಿಂದ ಸಂಪನ್ನವಾದ ಇದನ್ನು ಎರಡು ಔಂಸಿನಷ್ಟು ಯಾವುದಾದರೂ ರೂಪದಲ್ಲಿ ಸೇವಿಸಿದರೆ ಮನುಷ್ಯ ದೇಹಕ್ಕೆ ಅಗತ್ಯವಾದ ಪೌಷ್ಟಿಕ ಧಾತುಗಳೆಲ್ಲ ಬಹುಭಾಗ ಪೂರೈಸಲ್ಪಡುವವೆಂದು ಡಾ. ಸುಬ್ರಹ್ಮಣ್ಯರು ಹೇಳಿದರು. ಆದರೂ ಎರಡೌಂಸಿಗೆ ಇದಕ್ಕೆ ಕೇವಲ ಒಂದಾಣೆ ಬೆಲೆಯಾಗುತ್ತದೆ.

ಪ್ರಧಾನ ಮಂತ್ರಿಗಳು ಅದರ ಅಗ್ಗತನದಿಂದ ಮನದಟ್ಟಿದವರಾಗಿ ಪ್ರಶ್ನೆಗಳನ್ನು ಕೇಳಿದರು. ಇದರಲ್ಲಿ ಸಾಮಾನ್ಯ ಆಹಾರಕ್ಕಿಂತ ಇಮ್ಮಡಿ ಪ್ರೋಟೀನು, ೩-೬ ಪಟ್ಟು ವಿಟಾಮಿನ್ ಬಿ, ಕಾಲ್ಸಿಯಂ, ರಿಬೋಫ್ಲೇವಿನ್ ಸತ್ವಗಳೂ ತುಂಬ ವಿಟಾಮಿನ್ ಎ, ಮತ್ತು ಡಿ,ಗಳೂ ಇರುವವೆಂದು ಅವರಿಗೆ ತಿಳಿಸಲಾಯಿತು. ಭಾರತೀಯರ ಆಹಾರದಲ್ಲಿ ಇವೆಲ್ಲವುಗಳ ಕೊರತೆಯಿದೆಯೆಂದರಿತ ಪ್ರಧಾನ ಮಂತ್ರಿಗಳು ಈ ಹೊಸ ತಯಾರಿಕೆಯ ಮಹತ್ವವನ್ನು ಕೂಡಲೇ ಅರಿತರು. ಈ "ಆಹಾರ" ಸೇವಿಸಿದ ಇಲಿಗಳು ಸಾಮಾನ್ಯ ಇಲಿಗಳಿಗಿಂತ ಮುಮ್ಮಡಿ ವೇಗದಿಂದ ಬೆಳೆದವೆಂಬ ಸಂಗತಿಯನ್ನೂ ಅವರಿಗೆ ಹೇಳಲಾಯಿತು.

ಈ "ವಿವಿಧೋದ್ದೇಶ ಆಹಾರ" ದಲ್ಲಿರುವ ಮುಖ್ಯಾಂಶಗಳೆಂದರೆ ವಿಶೇಷ ಸಂಸ್ಕಾರದಿಂದ ಅಣಿಗೊಳಿಸಲಾದ ಶೇಂಗಾ ಹಿಟ್ಟು ಮತ್ತು ಕಡಲೆ ಹಿಟ್ಟುಗಳು (ಸೇಕಡಾ ೭೫-೨೫ ಪ್ರಮಾಣದಲ್ಲಿ); ಅವರ ಶಕ್ತಿವರ್ಧನೆಗಾಗಿ ವಿಟಾಮಿನ್ ಮೊದಲಾದ ಸತ್ವಗಳನ್ನು ಹೆಚ್ಚಿಗೆ ಸೇರಿಸಲಾಗಿದೆ.

ಈ "ಆಹಾರದ" ಆಧಾರದಿಂದಲೇ ವಿಶೇಷ ಪದ್ಧತಿಯಿಂದ ನ್ಯೂಟ್ರೊ ಬಿಸ್ಕೀಟುಗಳನ್ನೂ ರೂಪಿಸಲಾಯಿತು.

ಕೇಂದ್ರದ ಅಧಿಕಾರಿಗಳು ಈ "ಆಹಾರ" ದ ಬಗ್ಗೆ ಎಷ್ಟು ಉತ್ಸಾಹತಾಳಿದ್ದಾರೆಂದರೆ ಅದನ್ನು ಜನಪ್ರಿಯಗೊಳಿಸಲು ಒಕ್ಕಲತನ ಮಂತ್ರಿ ಡಾ. ಪಂಜಾಬರಾದ ದೇಶಮುಖರ ಅಧ್ಯಕ್ಷತೆಯಲ್ಲಿ Meals for Millions (ಜನಕೋಟಿಗೆ ಅನ್ನ) ಸಂಘವೊಂದು ಸ್ಥಾಪಿಸಲ್ಪಟ್ಟಿದೆ. ದಿನಕ್ಕೆ ೧-೨ ಟನ್ನಿನಷ್ಟು ಈ "ಆಹಾರ" ತಯಾರಿಸುವ ಸಾಮರ್ಥ್ಯವುಳ್ಳ ಯಂತ್ರ ಸಾಮಗ್ರಿಗಳನ್ನು ಸದ್ಯದಲ್ಲಿಯೇ ಸ್ಥಾಪಿಸಲಾಗುವುದು. ಪೌಂಡಿಗೆ ೧೦ ಆಣೆಯ ಬೆಲೆಯಲ್ಲಿ ಮಾರುತ್ತಿರುವ ಈ "ಆಹಾರ" ಎಲ್ಲ ವಿಧದ ತಿನಸುಗಳಲ್ಲಿಯೂ ಮಿಶ್ರಿಸಲು ಬರುವಂತಿದ್ದು ಆಗಲೆ ಜನಪ್ರಿಯತೆ ಗಳಿಸಿದೆ.

"ನ್ಯೂಟ್ರೋ ಬಿಸ್ಕೀಟು" ಗಳನ್ನು ತಯಾರಿಸುವ ವಿಧಾನವನ್ನು ಸಂಶೋಧನಾಲಯದವರು ಉಪ್ಪಿಟ್ಟಿಗಾರರಿಗೆಲ್ಲ ಒದಗಿಸಿದ್ದಾರೆ. ಅದು ಬೇಗನೆ ಎಲ್ಲೆಡೆ ದೊರೆಯಬಹುದಾಗಿದೆ.

ಸಂಶೋಧನಾಲಯದ ಈ ತಯಾರಿಕೆಗಳು ಜನರಲ್ಲಿ ಸಾಕಷ್ಟು ಬಳಕೆಗೆ ಬಂದರೆ ಆಹಾರದ ಸತ್ವಹೀನತೆಯಿಂದ ಹುಟ್ಟುವ ಅಥವಾ ಬೆಳೆಯುವ ಕ್ಷಯದಂಥ ಘನ ರೋಗಗಳೂ ಕೆಮ್ಮು ನೆಗಡಿಗಳಂಥ ಸಾಮಾನ್ಯ ಅಸ್ವಸ್ಥತೆಗಳೂ ಹಿಡಿತಕ್ಕೆ ಬರಬಲ್ಲವೆಂದು ಡಾ. ಸುಬ್ರಹ್ಮಣ್ಯರು ಅಭಿಪ್ರಾಯಪಡುತ್ತಾರೆ.



ಜೀವನದ ಆನಂದ

# ಕನಸಿನ ಸೊಗಸು

ಜೆ. ಬಿ. ಪ್ರೀಸ್ಟ್ಲಿ

ನನಗೆ ಕನಸು ಕಾಣುವುದೆಂದರೆ ಪ್ರೀತಿ. ಹಾಸಿಗೆ ಸೇರಿ ನಿಶ್ಚಲವಾಗಿ ಬಿದ್ದುಕೊಂಡು, ಯಾವುದೋ ಮಾಯಕದಿಂದ ಬೇರೆಯೇ ಒಂದು ಲೋಕದಲ್ಲಿ ಹೊಕ್ಕು ಅಲೆಯುವು ದೆಂದರೆ ತುಂಬಾ ಆನಂದ. ಎಷ್ಟೋ ಜನರು ಕನಸು ಕಾಣುವುದು ಜೀವನದ ಒಂದು ಅಂಗ ಎಂದೊಪ್ಪಲಿಕ್ಕೇ ಸಿದ್ಧರಿಲ್ಲ. ಅದೊಂದು ಕೆಟ್ಟ ಚಟ—ಶೀನುವ, ಆಕಳಿಸುವ ಅಭ್ಯಾಸದಂತೆ ಎಂದು ಅವರು ಬಗೆದಂತಿದೆ.

ನನಗಿದು ಅರ್ಥವಾಗುವುದಿಲ್ಲ. ನನ್ನ ಕನಸಿನ ಜೀವನ ಜಾಗ್ರತ ಜೀವನದಷ್ಟೇ ಮುಖ್ಯವೆಂದು ನನ್ನ ಹೇಳಿಕೆಯಲ್ಲ. ಆದರೆ ಅದಕ್ಕೂ ಮಹತ್ವವಿದೆಯೆನ್ನುತ್ತೇನೆ. ಅದು ನಮ್ಮ ಜೀವನಲೋಕಕ್ಕೆ ಎರಡು ಹೊಸ ಖಂಡಗಳನ್ನು ಸೇರಿಸಿದಂತಿದೆ; ಮಧ್ಯರಾತ್ರಿಗೂ ಬೆಳಗಿನ ನಾಸ್ತಾಕ್ಕೂ ನಡುವೆ ಆ ಖಂಡಗಳಲ್ಲಿ ಕ್ಷಣಕಾಲ ಮಿಂಚಿನ ಸಂಚಾರ ಮಾಡಿ ಬರಬಹುದು.

ಕನಸಿನ ಬಾಳಿನಲ್ಲಿ ಬೇರೆ ಅನುಕೂಲಗಳೂ ಇವೆ. ಅಲ್ಲಿ ಸತ್ತವರು ಇರುತ್ತಾರೆ,—ನಗುತ್ತ, ಕೆಲೆಯುತ್ತ. ಅಲ್ಲಿ ಗತಕಾಲವಿದೆ; ಒಮ್ಮೊಮ್ಮೆ ಅದು ಮುರಿದುಬಿದ್ದು ಚಲ್ಲಾಪಲ್ಲಿಯಾಗಿದ್ದರೂ ಕೆಲ ವೇಳೆ ಅರಳು ಮಲ್ಲಿಗೆಯಂತೆ ಹೊಚ್ಚ ಹೊಸದಾಗಿರುವುದುಂಟು. ಅಲ್ಲದೆ, ಅಲ್ಲಿ ಭವಿಷ್ಯತ್ತೂ ಇರಬಹುದು,—ನಮ್ಮನ್ನು ನೋಡಿ ಕಣ್ಣು ಮಿಟುಕಿಸುತ್ತ.

ಈ ಸ್ವಪ್ನ ಜೀವನದ ಮೇಲೆ ಎಷ್ಟೋ ಸಲ ನಿಗೂಢ ಚಿಂತೆ-ಭಯಗಳ ಮಬ್ಬು ಮುಸುಕಿರುತ್ತದೆ: ಪ್ರಯಾಣಕ್ಕೆ ಹೊರಟಾಗ ಗಂಟು ಕಟ್ಟಲಾಗದಿರುವುದುಂಟು, ಗಾಡಿಗಳು ತಪ್ಪಿಸಿಕೊಂಡು ಹೋಗುವುದುಂಟು ; ಸ್ನಾನದ ಕೋಣೆಯ ಬಾಗಿಲಲ್ಲಿ ಗೊಂಡಾರಣ್ಯಗಳಿರುವುದುಂಟು ; ಪಡಸಾಲೆಯಲ್ಲಿ ನಾಟಕಶಾಲೆಯ ಭಾಗ ಹೇಗೋ ಸೇರಿಕೊಳ್ಳುವುದುಂಟು ; ಎಚ್ಚರದಲ್ಲಿದ್ದಾಗ ಎಂದೂ ಅನುಭವಿಸಿರಲಾರದಂಥ ಅತಿ ದಾರುಣ-ಭಯಾನಕ ಅನುಭವಗಳು ಕನಸಿನಲ್ಲಿ ಕ್ಷಣಕಾಲ ಮಿಂಚಿಹೋಗುವುದುಂಟು.

ಆದರೆ ಈ ಲೋಕಾಂತರ ಜೀವನದಲ್ಲಿ ಅದರದೇ ನಲಿವುಗಳಿವೆ, ಚೋದ್ಯಗಳಿವೆ, ಸಮಾಧಾನಗಳಿವೆ. ಅಪರೂಪಕ್ಕೊಮ್ಮೆ ಅಲ್ಲಿ ಅಕಸ್ಮಾತ್ತಾಗಿ ಲೋಕೋತ್ತರವಾದ ಆನಂದೋನ್ಮಾದ, ಪ್ರಶಾಂತ ತೇಜಸ್ಸು ಹೊಳೆದುಹೋಗುವುದಿದೆ. ಆಗ ನಮಗೆ ಜಾಗ್ರತ್ ಕಾಲದಲ್ಲಿ ಕಾಣುವುದಕ್ಕಿಂತ ತೀರ ಭಿನ್ನವಾದ ಯಾವುದೋ ಬೇರೆಯೇ ಬಗೆಯ ಜೀವನವನ್ನು ಜೀವಿಸುವಂತೆ ಭಾಸವಾಗುತ್ತದೆ. ಅದು ನಮ್ಮ ಜೀವನಕ್ಕೆ ಹೊಸತೊಂದು ಪಾಕದ ಸವಿಯನ್ನು ಕೊಡುತ್ತದೆ; ಅದಕ್ಕಾಗಿ ನಾವೆಷ್ಟು ಕೃತಜ್ಞರಿದ್ದರೂ ಕಡಿಮೆಯೇ.

ಬರಿ ಕನಸು ಎನ್ನುವಿರಾ? ಯಾಕೆ **ಬರಿ?** ಅದು ಕಾಣಿಸಿದ್ದೂ ನಿಜ, ನೀವು ಕಂಡದ್ದೂ ನಿಜ ತಾನೆ?

ಟೊಂಕದ ಮೇಲೆ ಕೈಯಿಟ್ಟು ಇಟ್ಟಿಗೆಯ ಮೇಲೆ ನಿಂತ ಈ ದೇವನಾರು ?

# ಕನ್ನಡ ವಿಠ್ಠಲ ಮರಾಟಿಗರ ಕುಲದೈವವಾದ!

ರಾಮಚಂದ್ರ ಕೊಟ್ಟಲಗಿ

ಮಹಾರಾಷ್ಟ್ರದ ಜನತೆಯ ಜೀವನವನ್ನು "ಪಾಂಡುರಂಗ ವಿಠ್ಠಲ" "ಪುಂಡಲೀಕ ವಿಠ್ಠಲ" ವ್ಯಾಪಿಸಿದಷ್ಟು ಅನ್ಯ ಯಾವ ದೈವತವೂ ವ್ಯಾಪಿಸಿಲ್ಲ. ಆ ನಾಡಿನ ಜನತೆಗೆ ಅನ್ನ—ನೀರು, ಗಾಳಿ—ಬೆಳಕು ಜೀವ ಧಾರಣೆಗೆ ಅವಶ್ಯಕವಾಗಿರುವಷ್ಟೇ "ಪುಂಡಲೀಕ ವರದೇ (ದಾ) ಹರಿ ವಿಠ್ಠಲ" ನಾಮದ ಉಘೇ ಉಘೇ ನಿತ್ಯಾವಶ್ಯಕವಾಗಿದೆ. ಕಾರ್ತಿಕ-ಆಷಾಢ ಏಕಾದಶಿಗಳಲ್ಲಿ ಭಕ್ತಮಂಡಳಿ ಸಹಸ್ರಾರು ಮೈಲಿನ ದಾರಿ ಸಾಗಿ ಬಿಸಿಲು-ಗಾಳಿ-ಮಳೆಯ ಪರಿವೆಯಿಲ್ಲದೆ, ಅಖಂಡ ನಾಮಸ್ಮರಣರತವಾಗಿ ಪಂಢರಪುರ ವಿಠ್ಠಲದರ್ಶನಾತುರವಾಗಿ ಧಾವಿಸುತ್ತವೆ. ಹೆಣ್ಣು-ಗಂಡು, ಮುದುಕ-ತರುಣ, ಬಡವ-ಬಲ್ಲಿದ, ಸುಶಿಕ್ಷಿತ-ಅಶಿಕ್ಷಿತರೆಂಬ ಭೇದಭಾವಕ್ಕೆ ಶ್ರೀ ವಿಠ್ಠಲ ಚರಣಧೂಳಿ ದರ್ಶನರತರಲ್ಲಿ ಅವಕಾಶವೇ ಇಲ್ಲ. ಶ್ರೀ ಪಾಂಡುರಂಗ ವಿಠ್ಠಲನಿಗೆ ಭಕ್ತರಲ್ಲಿ ಪಂಕ್ತಿಭೇದವಿಲ್ಲ.



ಅಖಿಲ ಮಹಾರಾಷ್ಟ್ರದ ಜೀವನವನ್ನು ಸೂರೆಗೊಂಡ, ಅಗತಿಕರ, ಅನಾಥರ ಕೈವಾರಿಯಾದ ಶ್ರೀ ವಿಠ್ಠಲ, ಆ ನಾಡಿನಲ್ಲಿ ೯೦೦ - ೧೦೦೦ ವರುಷಗಳಿಂದಲಾದರೂ ಆರಾಧ್ಯ ದೇವನಾಗಿ, ಭಕ್ತರ ಈಪ್ಸಿತಾರ್ಥ ಪೂರಕನಾಗಿ, ಮಹಾಕಾರುಣ್ಯಮಯನಾಗಿ ನೆಲೆಸಿ ನಿಂತಿದ್ದರೂ ಅವನ ಕುಲ-ಮೂಲ-ನಾಮಮೂಲ ಇತಿಹಾಸದ ಗರ್ಭದಲ್ಲಿ ಇನ್ನೂ ಅಗಮ್ಯವಾಗಿಯೇ ಉಳಿದಿದೆ.

ಆದರೆ ಮೂಲತಃ ಅವನು ಕನ್ನಡಿಗ ದೈವತ ವೆಂಬುದು ಮಾತ್ರ ಖಂಡಿತ.

ಮಹಾರಾಷ್ಟ್ರದ ಆದ್ಯ ಸಂತ ಕವಿ ಜ್ಞಾನೇಶ್ವರರು, ಸಂತರದ ನಾಮದೇವರು ನಿಸ್ಸಂದಿಗ್ಧವಾಗಿ ಪಾಂಡುರಂಗವಿಠ್ಠಲ ಕನ್ನಡಿಗನೆಂದು ಸಾರಿದ್ದಾರೆ:

" ಕಾನಡಾ ಹಾ ವಿಠ್ಠಲಾ ಕರ್ನಾಟಕು।
ಯೆಣೆ ಮಜಲಾ ವಿಲಾವೇಧು ॥ "
— ಜ್ಞಾನೇಶ್ವರ

"ಕಾನಡಾಃ ವಿಠ್ಠಲವ್ಪೋ ಉಭಾ ಭಿವರೇಲೇರೀ।
ಭಕ್ತಾಂಚೇ ಆರ್ತವ್ಪೋ ಜೀವಾ ಲಾಗಲೇ
ಭಾರೀ ॥ "

" ನಾಮ ಬರವೇ ರೂಪ ಬರವೇ।
ದರ್ಶನ ಬರವೇ ಕಾನಡಿಯಾ ॥
ವೇದಾಂಸೀ ಕಾನಡೇ ಶ್ರುತೀಸೀ ಕಾನಡೇ।
ಪರಬ್ರಹ್ಮ ಉಘಡೇ ಪಂಢರೀಯೇ ॥"
— ನಾಮದೇವ

ಎಂಬುದಾಗಿ ವಿಠ್ಠಲನ ದೇಶ ನಿರ್ದೇಶಮಾಡಿದ್ದಾರೆ. ಕನ್ನಡ ವಿಠ್ಠಲನನ್ನು ಆರಾಧ್ಯ ದೈವತವಾಗಿ ಸ್ವೀಕರಿಸಿದ್ದಾರೆ.

ಪಾಂಡುರಂಗ ವಿಠ್ಠಲ ಎಷ್ಟು ಪುರಾತನ ದೈವತ? ಡಾ. ಭಾಸ್ಕರ ಆನಂದ ಸಾಲೆತ್ತೂರರು ಅವನನ್ನು ಕ್ರಿ. ಶ. ೬ ನೇ ಶತಕದಷ್ಟು ಹಿಂದೆ ಒಯ್ದಿದ್ದಾರೆ. ಕ್ರಿ. ಶ. ೫೧೬ ರ ಒಂದು ಶಾಸನದಲ್ಲಿ ಅವಧೇಯನೆಂಬ ರಾಜನು ಜಗದ್ವಿಠ್ಠನೆಂಬ ಬ್ರಾಹ್ಮಣನಿಗೆ ಆನೇವಾರಿ, ಚಾಳ, ಕಂದಕ, ದುದ್ದಪಲ್ಲಿ ಹಾಗು ಪಾಂಡುರಂಗಪಲ್ಲಿ ಎಂಬೈದು ಗ್ರಾಮಗಳನ್ನು ದತ್ತಿ ಬಿಟ್ಟ ಉಲ್ಲೇಖವಿದೆ. ಈ ಪಾಂಡುರಂಗಪಲ್ಲಿಯೇ ಇಂದಿನ ಪಂಢರಪುರವೆಂದು ಅವರ ಮತ. ಪಾಂಡುರಂಗಪಲ್ಲಿ ಯೊಡನೆ ಉಲ್ಲೇಖಿಸಿದ ಇತರ ನಾಲ್ಕು ಗ್ರಾಮಗಳು ಇಂದಿಗೂ ಪಂಢರಪುರದ ಸುತ್ತಮುತ್ತ ಇವೆ.

ಪದ್ಮಪುರಾಣದಲ್ಲಿಯೂ " ಭೀಮರಥೀ ತಟದಲ್ಲಿರುವ ದ್ವಿಭುಜ ವಿಠ್ಠಲರೂಪಿ ವಿಷ್ಣು "ವಿನ ಉಲ್ಲೇಖವಿದೆ. ಆದರೆ ಆ ಪುರಾಣದ ಕಾಲ ಇನ್ನೂ ಸಂದಿಗ್ಧವಾಗಿದೆ.

ಹೇಮಚಂದ್ರ ತನ್ನ ದೇಶೀನಾಮಮಾಲೆಯಲ್ಲಿ ಪಾಂಡುರಂಗನೆಂದರೆ " ರುದ್ರ-ಶಿವ "ನಿರಬೇಕೆಂದು ಊಹಿಸಿರುವದನ್ನು ಅವಲಂಬಿಸಿ ಡಾ. ಭಾಂಡಾರಕರ ಅವರೂ ಇದನ್ನು ಅನುಮೋದಿಸಿದ್ದಾರೆ. ಅದರಂತೆ ಸರ್ವತ್ರ ದ್ರಾವಿಡ ಸಂಸ್ಕೃತಿ ಸಂಸ್ಕಾರ ಪ್ರಭಾವವನ್ನು ಕಾಣುತ್ತಿದ್ದ ಫಾ. ಹೆರಾಸರು, " ಹರಿದಾಸರ ಆರಾಧ್ಯ ವಿಷಯನಾದ ಪಂಢರಪುರದ ಪಾಂಡುರಂಗ ವಿಠ್ಠಲನಿಗೂ ದ್ರಾವಿಡರ ಲಿಂಗಪೂಜೆಗೂ ಯಾವುದೋ ಪುರಾತನ ಸಂಬಂಧವಿರಲೇಬೇಕು... ಈ ಅನೇಕ ಮೂರ್ತಿಗಳ ಕೈಯಲ್ಲಾಗಲಿ ಮುಕುಟದ ಮೇಲಾಗಲಿ ಲಿಂಗವಿರುತ್ತದೆ" ಎಂದಿದ್ದಾರೆ. ಆದರೆ ಪಂಢರಪುರದ ವಿಠ್ಠಲ ವಿಗ್ರಹದ ಕೈಯಲ್ಲಿಯಾಗಲೀ ಮುಕುಟದಲ್ಲಿಯಾಗಲೀ ಶಿವಲಿಂಗವಿಲ್ಲವೆಂದು ಮೂರ್ತಿಶಿಲ್ಪವಿಶಾರದರು ಅಭಿಪ್ರಾಯಪಟ್ಟಿದ್ದಾರೆ.

ಜೈನರೂ ವಿಠ್ಠಲನ ಮೇಲೆ ಹಕ್ಕು ಮಂಡಿಸಿದ್ದಾರೆ. ಪಾಂಡುರಂಗವಿಠ್ಠಲನು ನೇಮಿನಾಥ ತೀರ್ಥಂಕರನೆಂದು ಸಾರಿದ ಜೈನ ಲೇಖನಗಳು ನೋಡಸಿಕ್ಕುತ್ತವೆ. ಟೊಂಕದ ಮೇಲಿಟ್ಟ ಕೈಯುಳ್ಳ ವಿಠ್ಠಲ ವಿಗ್ರಹದ ವರ್ಣನೆ ಒಂದು ಶ್ಲೋಕದಲ್ಲಿದೆ.

ಪಂಢರಪುರದ ವಿಠ್ಠಲನನ್ನು ಬಿಟ್ಟರೂ ವಿಠ್ಠಲ ಪ್ರಸ್ಥ ಮಾತ್ರ– ಅದು ಯಾವುದೇ ವಿಠ್ಠಲನಿರಲಿ– ಕರ್ನಾಟಕದಲ್ಲಿ ಬೆಳೆದಿತ್ತೆನ್ನುವದಕ್ಕೆ ಸಬಲ ಆಧಾರಗಳಿವೆ. ಮಧ್ವಾಚಾರ್ಯರು ತಮ್ಮ ಶಿಷ್ಯರಿಗೆ ಕೊಟ್ಟ ಆರಾಧ್ಯ ಮೂರ್ತಿಗಳಲ್ಲಿ ವಿಠ್ಠಲ ಮೂರ್ತಿಯೂ ಒಂದು. ವಿಠ್ಠಲ-ವಿಷ್ಣುಗಳು ಅಭಿನ್ನವೆಂಬ ನಂಬಿಕೆ ಅವರ ಕಾಲದಲ್ಲಿ ಸಾಕಷ್ಟು ಸ್ಥಿರವಾಗಿರಬೇಕು.

ಹೊಯ್ಸಳ ರಾಜ ವೀರಬಲ್ಲಾಳ ಮೂರು ನಿಷ್ಕ ಭೂಮಿಯನ್ನು ವಿಠ್ಠಲೇಶನಿಗೆ ದತ್ತಿಬಿಟ್ಟ ವಿವರವಿದೆ. ಈ ಲೇಖ ಶಿವಮೊಗ್ಗೆಯ ಸೋಗಾನೆ ಗ್ರಾಮದ ಶಿವಾಲಯದಲ್ಲಿದೆಯೆಂದು ಪ್ರಕಟವಾಗಿದೆ. ( ಕಾಲ ಕ್ರಿ. ಶ. ೧೨೧೪ ). ಅದರಂತೆ ಸಿಂಘಣ ಯಾದವನ ಊಳಿಗದಲ್ಲಿದ್ದ ದಸ-

ವಂತ ದಣ್ಣಾಯಕನ ಪ್ರಶಸ್ತಿ ಸಮಯದಲ್ಲಿ "ಶ್ರೀ ವಿಠ್ಠಲದೇವದಿವ್ಯಶ್ರೀಪಾದಪದ್ಮಾರಾಧಕ" ಎಂಬ ವಾಕ್ಯ ಬಂದಿದೆ. ಈ ಲೇಖನದ ಕಾಲ ಕ್ರಿ. ಶ. ೧೨೧೭. ಅದೂ ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನ ಉಂಧೀ ಎಂಬಲ್ಲಿಯದು. ಇಲ್ಲಿ ಉಕ್ತರಾದ ವಿಠ್ಠಲೇಶ ವಿಠ್ಠಲರು ಪಂಢರಪುರದ ವಿಠ್ಠಲನೇ ಎನ್ನುವದು ಹೇಗೆ? ಶ್ರೀ ವಿಷ್ಣು—ವಿಠ್ಠಲನಾಗಿ—ವಿಠ್ಠಲೇಶನಾಗಿ ವಿಠ್ಠಲದೇವನಾಗಿ ಕನ್ನಡನಾಡಿನ ಈ ಭಾಗದಲ್ಲಿ ಸಾಕಷ್ಟು ಪ್ರಚಾರ ಪ್ರಶಸ್ತಿ ಪಡೆದಿದ್ದನೆನ್ನುವದಕ್ಕೆ ಇದು ಸಾಕು.

ಅಭಿನವ ದಶಕುಮಾರ ಚರಿತ ರಚಕನಾದ ಚೌಂಡರಸ (ಕಾಲ, ಕ್ರಿ. ಶ. ೧೧೮೫ ರಿಂದ ಕ್ರಿ. ಶ. ೧೨೪೦) ಮಾತ್ರ ಪಂಢರಪುರದ ಮೂಲ ವಿಠ್ಠಲ ಮೂರ್ತಿಯನ್ನು ಪ್ರತ್ಯಕ್ಷವಾಗಿ ಕಂಡೇ ವರ್ಣಿಸಿರಬೇಕು. ಚೌಂಡರಸನಿಗೆ ಅಭಂಗವಿಠ್ಠಲ ಆರಾಧ್ಯ ದೈವತವೂ ಇದ್ದಂತೆ ತೋರುತ್ತಿದೆ:

" ವರಮುಕುಟಂ, ಮುಗುಳ್ನಗೆ ತುಳುಂ-
ಕುವ ಮುದ್ದುಮೊಗಂ, ಜಗನ್ಮನೋ
ಹರಕುಂಡಲಂ, ಪೆಗಲಲ್ಲಿ ಲಸತ್ಪದಕಂ,
ನಿತಂಬದೊಳ್
ಸ್ಥಿರಮೆನಲಿಟ್ಟಹಸ್ತಯುಗಳಂ, ಪೊಸ ಗೋ-
ವಳಗೊಳ್, ಸಲೀನಸ-
ಚ್ಚರಣಸರೋರುಹಂ, ಮೆರೆವ ಚೆನ್ನಿಗ
ವಿಠ್ಠಲರಾಯನೊಪ್ಪಿದಂ ॥ ''

ಈ ವರ್ಣನೆ ಚಕ್ಷುರ್ವೈಸತ್ಯಕ್ಕೆ ಸಾಕ್ಷಿಯಂತಿದೆ. ಪಂಢರಪುರದಲ್ಲಿ ವಿಠ್ಠಲಮೂರ್ತಿಯ ಸ್ಥಾಪನೆ ಎಂತು, ಯಾರಿಂದಾಯಿತೆಂಬ ಮಾತು ಊಹೆ-ಕಲ್ಪನೆಯನ್ನೇ ಅವಲಂಬಿಸಿ ನಿಂತಿದೆ.

ಪುಂಡಲೀಕನೆಂಬ ಭಾಗವತ, ಚಂದ್ರಭಾಗಾ ತಟದಲ್ಲಿ ತನ್ನ ತಂದೆ-ತಾಯಿಯ ಸೇವೆಯಲ್ಲಿ ನಿರತನಾಗಿದ್ದಾಗ, ಅವನ ಭಕ್ತಿಗೆ ಮೆಚ್ಚಿ ಶ್ರೀ ವಿಷ್ಣು ವೈಕುಂಠದಿಂದ ವರದಾನಕ್ಕೆಂದು ಧಾವಿಸಿ ಬಂದನಂತೆ. ಆದರೆ ಅವನ ಭಕ್ತ, ಮಾತಾ-ಪಿತೃಸೇವಾನಿರತನಾಗಿದ್ದವ, ತನಗೆ ಸದ್ಯ ಅವಕಾಶವಿಲ್ಲ ಸಮಾಚಾರ ತೆಗೆದುಕೊಳ್ಳುವದಕ್ಕೆ, ಅಲ್ಲಿ ಒಂದು ಗಳಿಗೆ ನಿಂತಿರು; ಎಂದು ಒಂದು ಇಟ್ಟಂಗಿಯನ್ನು ತೋರಿಸಿದ. ಶ್ರೀಹರಿ, ಭಕ್ತನ ಅನುಜ್ಞೆಗೆ ವಿಸ್ಮಿತನಾಗಿ, ಅಲ್ಲೇ ಟೊಂಕದ ಮೇಲೆ ಕೈಯಿರಿಸಿಕೊಂಡು ನಿಂತುಬಿಟ್ಟನಂತೆ. ಕತೆಗೆ ಕೋಡು ಮೂಡುವದೆನ್ನುವ ಮಾತನ್ನು ಬೇರೆ ಹೇಳಬೇಕಾಗಿಲ್ಲ. ಆದರೆ ಪುಂಡಲೀಕನೆಂಬ ವ್ಯಕ್ತಿ-ಭಕ್ತ, ವಿಠ್ಠಲಮೂರ್ತಿಯ ಪ್ರಾಣ ಪ್ರತಿಷ್ಠಾಪನೆಯನ್ನು ಚಂದ್ರಭಾಗಾತೀರದಲ್ಲಿ ಮಾಡಿದ್ದು ಸತ್ಯ. ಇದೇ ಕಾರಣದಿಂದಾಗಿ ಭಕ್ತನ ಹೆಸರಿನಿಂದಲೇ ಪಂಢರಪುರ-ಪೌಂಡರೀಕ ಕ್ಷೇತ್ರವೆಂದು ಪ್ರಸಿದ್ಧಿ ಪಡೆದಿರಬೇಕು.

ಪಂಢರಪುರದಲ್ಲಿರುವ ಇಂದಿನ ವಿಠ್ಠಲಮೂರ್ತಿ ಮಾತ್ರ ಎರಡು ನೂರು ವರುಷಗಳಿಗಿಂತ ಹಳೆಯದಲ್ಲೆಂದು ಮೂರ್ತಿತಜ್ಞರ ಮತ. ಅಹೋಬಲಮ್, ತಿರುಪತಿ, ಮದ್ರಾಸ ಪ್ರಾಚ್ಯವಸ್ತು ಸಂಗ್ರಹಾಲಯಗಳಲ್ಲಿದ್ದ ಮೂರ್ತಿಗಳು ಅತಿ ಪ್ರಾಚೀನವಾಗಿದ್ದು ಶಿಲ್ಪಕಲೆಯ ದೃಷ್ಟಿಯಿಂದ ಮೇಲ್ತರಗತಿಯವಾಗಿವೆಯೆಂದು ಅವರ ವಾದ. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಪಂಢರಪುರದ ವಿಠ್ಠಲನನ್ನು ಅಲ್ಲಿಗೆ ಒಯ್ಯಲಾಯಿತೆಂಬ ಐತಿಹ್ಯವೂ ಇದೆ. ಮುಸ್ಲಿಮರ ಆಳಿಕೆಯಲ್ಲಿ ವಿಠ್ಠಲನು ಪಂಢರಪುರದಲ್ಲಿ ಸುರಕ್ಷಿತನಲ್ಲೆಂದು ಅವನನ್ನು ಒಯ್ದು ಅಡಗಿಸಿಟ್ಟಿರಬಹುದಾದರೂ ಅದನ್ನು ದೂರದ ವಿಜಯನಗರಕ್ಕೆ ಒಯ್ದಿರಬಹುದೇ? ಮಹಾರಾಷ್ಟ್ರದ ಸಂತ ಸಾಹಿತ್ಯದಲ್ಲಿ ವಿಜಯನಗರಕ್ಕೆ ಬಂದ ಮೂರ್ತಿಯನ್ನು ಮರಳಿ ಒಯ್ದ ಐತಿಹ್ಯಗಳಿವೆ. ಆದರೆ ಅದಕ್ಕೂ ಸಬಲ ಆಧಾರಗಳಿಲ್ಲ.

ಶ್ರೀ ವಿಠ್ಠಲ ಮೂಲ ಮತ್ತು ಆ ದೈವತದ ಪ್ರಾಶಸ್ತ್ಯ "ವೃದ್ಧಿಂ ಕರ್ನಾಟಕೇ ಗತಾ" ಆದರೂ ನಂತರ ಅದೂ ಈ ಎರಡು ಶತಕದಲ್ಲಿ ಹ್ರಾಸ-ಹೊಂದಿ ಇತ್ತೀಚೆಗಂತೂ ತೀರ ಅಟ್ಟಿಸಿದೆಯೆಂದು ಹೇಳಲು ಅಡ್ಡಿಯಿಲ್ಲ. ತದ್ವಿರುದ್ಧವಾಗಿ ಮಹಾರಾಷ್ಟ್ರದಲ್ಲಿ ಅದು ವಿಶಾಲವೃಕ್ಷವಾಗಿ ಅಖಂಡವಾಗಿ ಪಲ್ಲವಿಸತೊಡಗಿದೆ ಎನ್ನುವದಕ್ಕೆ ನಿತ್ಯ ನಿದರ್ಶನಗಳಿವೆ.

**ಒಂದು ಶತಮಾನದಿಂದ ಇದು ಲಂಡನಿಗೆ ಕಾಲಜ್ಞಾನವನ್ನು ಕೊಟ್ಟಿದೆ.**




# ಬಿಗ್ ಬೆನ್ :

# ಜಗತ್ತಿನ ಅತಿ ದೊಡ್ಡ ಗಡಿಯಾರ

ಬ್ರಿಟಿಶ್ ಆಕಾಶವಾಣಿಯನ್ನು ಕೇಳುವವರಿಗೆಲ್ಲ ಪ್ರಖ್ಯಾತ ಬಿಗ್ ಬೆನ್ ಗಡಿಯಾರದ ಟಂ–ಟಂ ಸಪ್ಪಳದ ಪರಿಚಯವಿರುತ್ತದೆ. ಈ ವರ್ಷ ಜುಲೈ ತಿಂಗಳಿಂದ ಸುಮಾರು ಮೂರು ತಿಂಗಳುಗಳ ವರೆಗೆ ಈ ಗಡಿಯಾರವಿರುವ ಪಾರ್ಲಿಮೆಂಟ ಭವನದ ದುರಸ್ತಿ ಕಾರ್ಯ ನಡೆದಿದ್ದಾಗ ಈ ಗಡಿಯಾರ ಮೌನವಾಗಿತ್ತು. ಈ ಸಮಯದಲ್ಲಿ ಈ ಗಡಿಯಾರದ ದುರಸ್ತಿ ಕಾರ್ಯವೂ ನಡೆಯಿತು. ೧೯೩೪ ರಲ್ಲೊಮ್ಮೆ ಈ ಗಡಿಯಾರದ ಚಿಕ್ಕಪುಟ್ಟ ದುರಸ್ತಿ ನಡೆದ ಕಾಲದಲ್ಲೂ ಇದು ಮೌನವಾಗಿತ್ತು. ಇದು ಸ್ತಬ್ಧವಾಗಿರುವ ಕಾಲದಲ್ಲೆಲ್ಲ ಬ್ರಿಟಿಶ್ ಆಕಾಶವಾಣಿಯಲ್ಲಿ ಗ್ರೇಟ್ ಟಾಮ್ (ಇದು ಸೇಂಟ್ ಪಾಲ್ಸ ಕೆಥೆಡ್ರೆಲ್‌ದಲ್ಲಿದೆ) ಗಡಿಯಾರದ ಗಂಟೆಯ ಸಪ್ಪಳ ಕೇಳಿಬರುವದು.

ಬಿಗ್ ಬೆನ್ ಎಂಬ ಹೆಸರು ನಿಜವಾಗಿಯೂ ಇದರಲ್ಲಿರುವ ದೊಡ್ಡ ಗಂಟೆಯ ಹೆಸರಾಗಿದೆಯಲ್ಲದೆ ಗಡಿಯಾರದ್ದಲ್ಲ. ಆದರೆ ಜನರು ಗಡಿಯಾರ ಮತ್ತು ಗಂಟೆಗಳೆರಡೂ ಒಂದೇ ಎಂದು ತಿಳಿಯುತ್ತಿದ್ದಾರೆ. ೧೯೨೩ ರ ಡಿಸೆಂಬರ ೩೧ ರಂದು ಬ್ರಿಟಿಶ್ ಆಕಾಶವಾಣಿ ಮೊಟ್ಟಮೊದಲನೆಯ ಸಲ ಬಿಗ್ ಬೆನ್ ಗಡಿಯಾರ ಗಂಟೆ ಹೊಡೆದದನ್ನು ಬಿತ್ತರಿಸಿತು. ೧೯೨೪ ರ ಫೆಬ್ರುವರಿ ೧೭ ರಿಂದಾರಂಭಿಸಿ ಗಂಟೆಯನ್ನು ತಿಳಿಸಲು 'ಬಿಗ್ ಬೆನ್'ದ ಉಪಯೋಗವನ್ನು ಪ್ರತಿನಿತ್ಯ ಬಿ.ಬಿ.ಸಿ.ಯಲ್ಲಿ ಮಾಡಲಾಗುತ್ತಿದೆ.

೧೯೪೪ ರಲ್ಲಿ ಲಂಡನ್ನಿನ ಮೇಲೆ ಬಾಂಬ ದಾಳಿ ನಡೆದಿದ್ದಾಗ [illegible] ಮೂರು ತಿಂಗಳ ಕಾಲ [illegible]

ಗಲೂ ಬಿಗ್‌ಬೆನ್ ಗಂಟೆಯನ್ನು ಜನರಿಗೆಲ್ಲ ಕೇಳಿಸಿದೆ.

ಈ ಗಡಿಯಾರಕ್ಕೂ ಆಕಾಶವಾಣಿ ಕೇಂದ್ರಕ್ಕೂ ಸಂಬಂಧವನ್ನು ಜೋಡಿಸಿ ಇದರ ಗಂಟೆಯನ್ನು ಬಿತ್ತರಿಸಲು ಏರ್ಪಾಡು ಮಾಡಿದ್ದಾರೆ. ಸಾಗರೋತ್ತರ ಪ್ರದೇಶದವರಿಗಾಗಿ ಬ್ರಿಟಿಶ್ ಆಕಾಶವಾಣಿ ಬಿತ್ತರಿಸುವ ಪ್ರತಿಯೊಂದು ಕಾರ್ಯಕ್ರಮದ ಪ್ರಾರಂಭದಲ್ಲಿ ಬಿಗ್ ಬೆನ್ ಧ್ವನಿಯನ್ನು ಬಿತ್ತರಿಸಲಾಗುತ್ತಿದೆ. ಆಕಾಶವಾಣಿಯಲ್ಲಿ ಇದು ಸಾವಿರಾರು ಮೈಲು ದೂರವಿರುವವರಿಗೆ ಕೇಳಿಸಿದ ಮೇಲೆ ಆ ಗಡಿಯಾರದ ಕೆಳಗೆ ೧೫೦ ಫೂಟು ದೂರದಲ್ಲಿರುವ ವೆಸ್ಟ್‌ಮಿನ್‌ಸ್ಟರ ಸೇತುವೆಗೆ ಕೇಳಿಸುತ್ತದೆ. ಇದಕ್ಕೆ ಕಾರಣ, ರೇಡಿಯೋ ತರಂಗಗಳು ಪ್ರಕಾಶದಷ್ಟು ವೇಗವಾಗಿ ಹಬ್ಬುತ್ತವೆ ; ಆದರೆ ಶಬ್ದವು ಬಹಳ ಮೆಲ್ಲಗೆ ಚಲಿಸುತ್ತದೆ.

ಇಡೀ ಜಗತ್ತಿನಲ್ಲಿಯೆ ಬಿಗ್ ಬೆನ್ ಅತಿ ದೊಡ್ಡದಾದ, ಸರಿಯಾಗಿ ವೇಳೆ ತೋರಿಸುವ, ಬಹು ದೊಡ್ಡದಾಗಿ ಗಂಟೆ ಹೊಡೆಯುವ ಗಡಿಯಾರವಾಗಿದೆ. ಅದಕ್ಕಿರುವ ನಾಲ್ಕು ಮುಖಫಲಕಗಳು ಪ್ರತಿಯೊಂದೂ ೨೩ ಫೂಟು ವ್ಯಾಸದ್ದಾಗಿದೆ. ಹಿಂದೆ ಇದರ ಪ್ರತಿ ಮುಖಫಲಕವನ್ನು ೩೧೨ ಗಾಜಿನ ತುಣುಕುಗಳ ಜೋಡಣೆಯಿಂದ ತಯಾರಿಸಿದ್ದರು. ಇದರಿಂದ ಗಡಿಯಾರದ ಮುಖಕ್ಕೆ ಜೇಡನ ಬಲೆಯಂಥ ರೂಪ ಇತ್ತು. ಇದರ ತಾಮ್ರದ ಮಿನಿಟಿನ ಮುಳ್ಳುಗಳು ೧೪ ಫೂಟು ಉದ್ದವಿದ್ದು ವರ್ಷದಲ್ಲಿ ಮುಖಫಲಕದ ಮೇಲೆ ಒಟ್ಟು ೧೦೦ ಮೈಲು ಹಾದಿ ಕ್ರಮಿಸುತ್ತದೆ.

ಬಿಗ್‌ಬೆನ್ ಗಡಿಯಾರದ ತೂಕ ೧೩॥ ಟನ್ ಇದೆ. ಅದು ಪ್ರತಿನಿತ್ಯ ತನ್ನ ವೇಳೆಯನ್ನು ಎರಡು ಸಲ ಗ್ರೀನವಿಚ್ ವೇಧಶಾಲೆಗೆ ತಂತಿ ಮೂಲಕ ತಿಳಿಸುವ ವ್ಯವಸ್ಥೆ ಇದೆ.

ಈ ಗಡಿಯಾರದ ನಿಜವಾದ ಹೆಸರು "ದಿ ಗ್ರೇಟ್ ಕ್ಲಾಕ ಆಫ್ ದಿ ಪ್ಯಾಲೇಸ ಆಫ್ ವೆಸ್ಟಮಿನ್‌ಸ್ಟರ'' (ವೆಸ್ಟಮಿನ್‌ಸ್ಟರ ಅರಮನೆಯ ಮಹಾಗಡಿಯಾರ) ಎಂದಿದೆ. ೧೮೫೯ ರಲ್ಲಿ ಈ ಗಡಿಯಾರ ಕಾರ್ಯ ಆರಂಭಿಸಿತು. ಇದರ ದೊಡ್ಡ ಗಂಟೆಗೆ "ಸೇಂಟ್ ಸ್ಟಿಫನ್" ಎಂದು ಕರೆಯಬೇಕೆಂದು ಪಾರ್ಲಿಮೆಂಟಿನಲ್ಲಿ ಸರ್ ಬೆಂಜಾಮಿನ್ ಹಾಲ್ ಎಂಬವರು ವಾದಿಸುತ್ತಿದ್ದಾಗ ಓರ್ವ ಸದಸ್ಯರು "ಬಿಗ್ ಬೆನ್" ಎಂದು ಹೆಸರಿಟ್ಟು ಈ ವಾದವನ್ನು ಮುಗಿಸಿಬಿಡಬಾರದೆ? ಎಂದು ಕೂಗಿದರು. ಬೆಂಜಾಮಿನ್ನರು ಸ್ಥೂಲಕಾಯರಿದ್ದುದನ್ನು ಲಕ್ಷಿಸಿ ಮಾಡಿದ ಹಾಸ್ಯವಿದಾಗಿತ್ತು. ಈ ಹೆಸರೇ ಮುಂದೆ ಗಡಿಯಾರಕ್ಕೆ ಅಂಟಿಕೊಂಡುಬಿಟ್ಟಿತು.

ಗ್ರೇಟ್‌ಟಾಮ್ ಗಡಿಯಾರವು ಬಿಗ್‌ಬೆನ್‌ದ ಬದಲು ಉಪಯೋಗಿಸಲು ಅರ್ಹವಿದೆ. ಇದು ೫ ಟನ್ ತೂಕದ ಗಡಿಯಾರ. ಇದು ೧೮೬೩ರಲ್ಲಿ ತಯಾರಿಸಲ್ಪಟ್ಟಿತು. ಇದಕ್ಕೆ ಕೀಲಿ ಕೊಡಲು ಒಂದು ತಾಸು ಹಿಡಿಯುತ್ತದೆ.

ವೆಸ್ಟಮಿನ್‌ಸ್ಟರ ಅರಮನೆಯಲ್ಲಿ ಈಗ ಬಿಗ್ ಬೆನ್ ಇರುವಲ್ಲಿ ಕ್ರಿ. ಶ. ೧೩೦೦ ರಿಂದಲೂ ಒಂದಲ್ಲ ಒಂದು ಗಡಿಯಾರವಿದ್ದೇ ಇತ್ತು. ೧೮೩೪ ರಲ್ಲಿ ಅರಮನೆ ಅಗ್ನಿಗಾಹುತಿಯಾದಾಗ "ಬಿಗ್‌ಬೆನ್'' ಗಿಂತ ಹಿಂದಿನ ಗಡಿಯಾರವೂ ನಾಶವಾಯಿತು. ಈ ಗಡಿಯಾರದ ಗಂಟೆಯನ್ನು ಗೋಪುರಕ್ಕೇರಿಸಿದಾಗ ಅದರಲ್ಲಿ ಒಂದು ಸಣ್ಣ ಬಿರುಕುಂಟಾಯಿತು. ಆದರೆ ಒಡಕನ್ನು ಒಡನೇ ತುಂಬಿದ್ದಾಯಿತು. ಇಂದಿಗೂ ಆ ಒಡಕು ಇದೆ. ಆ ಬಿರುಕಿನ ಮೇಲೆ ಗಂಟೆಯ ಮಣಿ ಹೊಡೆಯುದಂತೆ ಅದನ್ನು ಒಂದು ಬದಿಗೆ ತುಸು ಓರೆಯಾಗಿ ನಿಲ್ಲಿಸಲಾಯಿತಲ್ಲದೆ ತುಸು ಹಗುರಾದ ಮಣಿಯನ್ನೂ ಹಾಕಲಾಯಿತು.

೧೮೫೯ ರಿಂದಲೂ ನಿರಂತರವಾಗಿ ಸರಿಯಾದ ಸಮಯವನ್ನು ತೋರಿಸುತ್ತ ಬಂದ ಬಿಗ್‌ಬೆನ್ ಎರಡು ಸಲ ಮಾತ್ರ ಕರ್ತವ್ಯಚ್ಯುತವಾದ ದಾಖಲೆಗಳಿವೆ. ಒಮ್ಮೆ ವಿಪರೀತ ಚಳಿಯ ದೆಸೆಯಿಂದ ಕಾಲು ಗಂಟೆ ಹೊಡೆಯಲು ಅದು ತಪ್ಪಿತು. ಇನ್ನೊಮ್ಮೆ ಮಿನಿಟಿನ ಮುಳ್ಳಿನ ಮೇಲೆ ಒಂದು ಹಕ್ಕಿ ಕುಳಿತದ್ದರಿಂದ ಬಿಗ್‌ಬೆನ್ ನಾಲ್ಕೂವರೆ ನಿಮಿಷ ಹಿಂದೆ ಬಿತ್ತು.

ಮಾನವ ಕಾರುಣ್ಯದ ಅಮೃತದಿಂದ
ಸಾಧಿಸಲಾರದ್ದೇನಿದೆ?

# ದರೋಡೆಗಾರ ಜಗ್ಗಾ ಕವಿಯಾದ


ಮೂಲ:
ಸೋಮ ಆನಂದ

ಅನುವಾದ:
ಎನ್ ಎಸ್ ವಿ.




ಪಂಜಾಬಿ 'ಮುಷೈರಾ'ದಲ್ಲಿ ಕುಳಿತಿದ್ದೆ. ಪಂಜಾಬಿನ ಪ್ರಮುಖ ಕವಿಗಳೆಲ್ಲರೂ ಅಲ್ಲಿಗೆ ಬಂದಿದ್ದರು; ವಾತಾವರಣ ಸ್ತಬ್ಧವಾಗಿತ್ತು. "ಈಗ ಜಗತ್‌ಸಿಂಗ ಜಗ್ಗಾ ಕೆಲವು ಪದ್ಯಗಳನ್ನು ಓದುತ್ತಾರೆ" ಎಂದು ಹೊಸ ಕವಿಯ ಹೆಸರನ್ನು ಸಭೆಯಲ್ಲಿ ಸಾರಿದಾಗ ಸಣ್ಣದೊಂದು ಗೊಂದಲವೆದ್ದಿತು.

ಮೈಕ್ರೋಫೋನಿನ ಮುಂದೆ ಉದ್ದನೆಯ ವ್ಯಕ್ತಿಯೊಂದು ಬಂದು ನಿಂತಿತು; ವ್ಯಕ್ತಿಯ ವಿಚಲಿತ ಕಣ್ಣುಗಳು, ಕಣ್ಣುಗಳ ತೀಕ್ಷ್ಣನೋಟ ಭಾವುಕತೆಯನ್ನು ಸೂಚಿಸುವಂತಿದ್ದವು. ಲುಂಗಿ ಮತ್ತು ದೊಡ್ಡದೊಂದು ಕುರ್ತಾ ತೊಟ್ಟಿದ್ದ ಅವನು ಪಂಜಾಬಿನ ಮಾದರಿ ಒಕ್ಕಲಿಗನಂತೆ ತೋರುತ್ತಿದ್ದ. "ಖಂಡಿತವಾಗಿ ಈ ಮನುಷ್ಯ ಭಯಂಕರ ಡಕಾಯಿತ ಜಗ್ಗಾ ಆಗಿರಲಾರ" ಎಂದುಕೊಂಡೆ ನಾನು.

ಚಪ್ಪರದ ನಾಲ್ಕು ಮೂಲೆಗಳಲ್ಲೂ ಅವನ ಹಾಡು ಪ್ರತಿಧ್ವನಿಸುತ್ತಿತ್ತು. ನನ್ನ ಯೋಚನೆ ಹಿಂದೆ ಹಿಂದೆ ಸಾಗಿತ್ತು.

ಜನರು ಅವನನ್ನು ಅಸಾಮಾನ್ಯ ಡಕಾಯಿತ

ಬೆಂಗಳೂರಿನ "ಸೋದರಿ" ಪತ್ರಿಕೆಯಿಂದ

ನೆಂದು ರೆಯುತ್ತಿದ್ದರು. ಶ್ರೀಮಂತರನ್ನು ಸುಲಿದು ಬಡವರಿಗೆ ಹಂಚುವ ಪಂಜಾಬಿನ ರಾಬಿನ್ ಹುಡ್ ಇವ ಎನ್ನುತ್ತಿದ್ದರು. ಲ್ಯಾಲಾಪುರದಲ್ಲಿ ಜಗ್ಗಾನ ಹೆಸರನ್ನು ಕೇಳಿದ ಪೋಲೀಸರು ಕೂಡ ನಡುಗುತ್ತಿದ್ದರು. ಒಮ್ಮೆ ದೊಡ್ಡ ಮರದ ಕೆಳಗೆ ಜಗ್ಗಾ ಕುಳಿತಿದ್ದಾಗ ಒಣರೆಂಬೆ ಮುರಿದು ಬಿದ್ದು ಜಗ್ಗಾ ಸತ್ತು ಹೋದ. ಆಗ ಅವನ ರಕ್ತ ಸುರಿದು ಒಂಬತ್ತು ಮಣದಷ್ಟು ಮಣ್ಣು ಒದ್ದೆಯಾಗಿತ್ತೆಂದು ಒಂದು ಹಳ್ಳಿಯ ಹಾಡು ಹೇಳುತ್ತದೆ.

ಆದರೆ ಸತ್ತುಹೋದ ಜಗ್ಗಾ ನನ್ನೆದುರಿಗೆ ಹಾಡುತ್ತಿದ್ದಾನೆಂದರೆ ನಾನು ನನ್ನ ಕಣ್ಣು-ಕಿವಿಗಳನ್ನೇ ನಂಬದಾದೆ.

'ಮುಷೈರಾ' ಮುಗಿದ ಬಳಿಕ ನಾನು ಅವನ ಬಳಿಗೆ ಹೋದೆ. ಅವನು ತನ್ನ ಜೀವನದ ಸಂಪೂರ್ಣ ಕಥೆಯನ್ನು ಹೇಳಿದ. ಅದು ಕಾಲ್ಪನಿಕ ಕಥೆಯಷ್ಟು ಆಶ್ಚರ್ಯಕರವಾಗಿತ್ತು.

"ನಾನೇ ಜಗ್ಗಾ ಡಾಕೂ-ಆದರೆ ನಾನೊಬ್ಬನೇ ಅಲ್ಲ," ಎಂದು ಅವನು ಆರಂಭಿಸಿದ. ಪಂಜಾಬಿನಲ್ಲಿ ತನಗಿಂತ ಹಿಂದಿನವರು ಇಬ್ಬರು "ಜಗ್ಗಾ" ಆಗಿ ಹೋದರು. ಜಗ್ಗಾ ಚರಿತ್ರೆಯು ತಮ್ಮ ಮೂವರ ಸುತ್ತ ಹೆಣೆಯಲ್ಪಟ್ಟಿದೆ ಎಂದು ಅವನು ಹೇಳಿದ.

ಡಕಾಯಿತನಾದ ತಾನು ಹಾಡುಗಾರನಾದ ಬಗೆಯನ್ನು ಆತ ನಿರೂಪಿಸಿದ:

ನಲುವತ್ತು ವರ್ಷಗಳ ಹಿಂದೆ ಲ್ಯಾಲಾಪುರ ಜಿಲ್ಲೆಯ ಒಂದು ಹಳ್ಳಿಯಲ್ಲಿ ಈ ಜಗ್ಗನ ಜನನವಾಯಿತು. ತಂದೆ ತಾಯಿ ಅವನ ಬಗ್ಗೆ ಹೆಚ್ಚು ಆಸೆಯಿಟ್ಟು ಶಾಲೆಗೆ ಕಳಿಸಿದರು; ಹಳ್ಳಿಯ ಮಕ್ಕಳು ಶಾಲೆಗೆ ಹೋಗುವ ರೂಢಿ ಅಲ್ಲಿ ಹೆಚ್ಚಾಗಿರದ್ದರಿಂದ ಶಾಲೆಗೆ ಹೋಗದೆ ಗೆಳೆಯರೊಡನೆ ಅಲೆದು ಸಂಜೆಗೆ ಹಿಂದಿರುಗುವುದೇ ಜಗತಸಿಂಗನಿಗೆ ಪ್ರಿಯವಾಗಿ ತೋರಿತು. ಒಂದು ದಿನ ಶಾಲೆಗೆ ಹೋಗುವದು ತನ್ನಿಂದ ಸಾಧ್ಯವಿಲ್ಲವೆಂದು ತಂದೆಗೆ ಹೇಳಿಬಿಟ್ಟ. ಅಂದಿನಿಂದ ಅವನನ್ನು ಒತ್ತಾಯದಿಂದ ಶಾಲೆಗೆ ಕಳಿಸಬೇಕಾಯಿತು.

ಒಮ್ಮೆ ಜಗತಸಿಂಗನ ಅಜ್ಜ ಬಂದವರು ಅವನನ್ನು ಬೇರೊಂದು ಹಳ್ಳಿಯಲ್ಲಿದ್ದ ಸೋದರಮಾವನ ಮನೆಗೆ ಕರೆದುಕೊಂಡು ಹೋದರು. ಅಲ್ಲಿ ಜಗ್ಗಾ ಸಂಪೂರ್ಣ ಬದಲಾವಣೆಯನ್ನು ಹೊಂದಿದ. ಅವನ ಮಾವಂದಿರ ಉದ್ಯೋಗ ದರೋಡೆ ಮಾಡುವುದು; ತಮ್ಮ ಕಸುಬಿನ ಮೇಲಿನ ಅಪಾರ ವಿಶ್ವಾಸದಿಂದ ಅವರು ಜಗತಸಿಂಗನಿಗೆ ತರಬೇತಿ ನೀಡಿದರು.

ಜಗತಸಿಂಗನಿಗೆ ಡಕಾಯಿತರಿಗಿರಬೇಕಾದ ಧೈರ್ಯವೂ ದೇಹಶ್ರಮವನ್ನು ಸಹಿಸುವಶಕ್ತಿಯೂ ಯಥೇಷ್ಟವಾಗಿದ್ದಿತು. ದರೋಡೆಯ ಉದ್ಯೋಗವನ್ನೇ ಅಂಗೀಕರಿಸಿದ ಜಗ್ಗಾ ತನ್ನ ೧೯ ನೆಯ ವರ್ಷದಲ್ಲಿ ಮೊದಲ ಬಾರಿ ಸೆರೆಮನೆಯ ವಾಸವನ್ನು ಕಾಣಬೇಕಾಯಿತು.

ನಾಲ್ಕು ವರ್ಷದ ಕಾರಾಗೃಹ ವಾಸದ ಅವಧಿಯನ್ನು ಮುಗಿಸಿಕೊಂಡ ಜಗತಸಿಂಗ ತನ್ನ ದರೋಡೆಯನ್ನು ಬಿಟ್ಟು ನೀತಿವಂತ ನಾಗರಿಕನಾಗಿ ಬಾಳಬೇಕೆಂದು ಬಯಸಿದ. ಹೀಗೆ ನಿರ್ಧರಿಸಿ ಆತ ಸೈನಿಕನಾಗಿ ಸೇರಿದ. ಅಷ್ಟರಲ್ಲಿ ಅವನ ಮನಸನ್ನು ತಿರುಗಿಸುವ ಘಟನೆ ಜರುಗಿತು. ರಕ್ಷಣಾದಳವೊಂದರಿಂದ ಅವನ ಮಾವ ಕೊಲ್ಲಲ್ಪಟ್ಟನು. ಜೊತೆಗೆ ಜಗ್ಗಾ ತನ್ನ ಜೀವನಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಹುಡುಗಿ ಇನ್ನೊಬ್ಬನನ್ನು ಮದುವೆಯಾದಳು.

ಈಗ ಜಗತಸಿಂಗನ ಹೃದಯದಲ್ಲಿನ ದರೋಡೆಗಾರತನ ಮತ್ತೆ ಜಾಗೃತವಾಯಿತು. ತನ್ನ ಮಾವನ ಸಾವಿಗೆ ಪ್ರತೀಕಾರವೆನ್ನುವಂತೆ ಆತ ಸೇನೆಯಿಂದ ಹೊರಬಂದು ಮತ್ತೆ ಡಕಾಯಿತಿಗಿಳಿದ. ದರೋಡೆಗಾರಿಕೆಯಲ್ಲಿ ಅವನು ಪ್ರಸಿದ್ಧನಾಗಿ ಮನೆಮಾತೂ ಆಗಿಹೋದ.

ಒಮ್ಮೆ, ಫರೀದಕೋಟೆಗೆ ಹೋದಾಗ ಗೆಳೆಯರ ವಿಶ್ವಾಸಘಾತದಿಂದ ಜಗ್ಗಾ ಪೋಲೀಸರ ಕೈಗೆ ಸಿಕ್ಕ. ಪೋಲೀಸರ ಹತ್ತಿರ ಸಾಕಷ್ಟು ಸಾಕ್ಷ್ಯವಿಲ್ಲದೆ ಹೋದುದರಿಂದ ಅವನಿಗೆ ಮರಣದಂಡನೆ ತಪ್ಪಿತು. ಆದರೆ ಭಯಂಕರ ಕೈದಿಯೆಂದು ಅವನನ್ನು ಏಕಾಂತದಲ್ಲಿ (ಅಂಧೇರಿ

ಕೋಣೆಯಲ್ಲಿ) ಬಂಧಿಸಿಟ್ಟರು.

ಫಿರೋಜ್‌ಪುರದ ಜೈಲಿಗೆ ಶ್ರೀ ಮೆಹತಾ ಎಂಬವರು ಹೊಸ ಸುಪರಿಂಟೆಂಡೆಂಟರಾಗಿ ಬಂದರು. ಒಂದು ದಿನ ಸೆರೆಮನೆಯ ಕೋಣೆಗಳೆದುರು ಹಾಯ್ದು ಹೋಗುತ್ತಿದ್ದಾಗ ಅವರಿಗೆ ಕೈದಿಯೊಬ್ಬನು ಹಾಡುತ್ತಿರುವುದು ಕೇಳಿಸಿತು. ಅವರು ಅವನ ಸುಂದರ ಮಂಜುಳ ಶಾರೀರದಿಂದ ಹೊಮ್ಮಿದ ಗಾನಮಾಧುರಿಯಿಂದ ಚಕಿತರಾದರೂ ಸುಮ್ಮನೆ ಹೊರಟು ಹೋದರು.

ಮರುದಿನ ಹಾಡುಗಾರ ಕೈದಿ—ಜಗತಸಿಂಗನಿಗೆ ಆಫೀಸಿನಿಂದ ಕರೆ ಬಂತು. ಕೈಗೆ ಬೇಡಿಗಳನ್ನು ಹಾಕಿ ಸರಪಳಿಗಳಿಂದ ಬಂಧಿಸಿ ಅವನನ್ನು ಕಾವಲಿನವರು ಮೆಹತಾರೆದುರು ಕರೆದು ತಂದರು.

ಒಡನೆಯೇ ಕೈದಿಯನ್ನು ಬಂಧಿಸಿದ ಸಂಕಲೆಗಳನ್ನು ಕಳಚುವಂತೆ ಪೋಲಿಸರಿಗೆ ಮೆಹತಾ ಅಪ್ಪಣೆ ಮಾಡಿದರು. ಉಳಿದ ಎಲ್ಲರನ್ನೂ ಕಚೇರಿಯಿಂದ ಹೊರಗೆ ಕಳಿಸಿ ಹೊಸ ಸುಪರಿಂಟೆಂಡೆಂಟರು ಜಗತ ಸಿಂಗನೊಡನೆ ಏಕಾಂತದಲ್ಲಿ ಮಾತನಾಡಿದರು.

ಹೊಸ ಸುಪರಿಂಟೆಂಡೆಂಟರು ತಮ್ಮ ಪಕ್ಕದ ಕುರ್ಚಿಯನ್ನು ತೋರಿಸಿ ಕುಳಿತುಕೊಳ್ಳುವಂತೆ ಹೇಳಿದರು. ಜಗತಸಿಂಗನಿಗೆ ಆಶ್ಚರ್ಯ—ಇಷ್ಟರತನಕ ಯಾವ ಪೋಲೀಸ ಅಧಿಕಾರಿಯೂ ತನ್ನೊಡನೆ ಹೀಗೆ ಮಾತನಾಡಿದ್ದಿಲ್ಲ. ತಮ್ಮ ಪಕ್ಕದಲ್ಲಿ ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಕೇಳಿಕೊಂಡದ್ದಂತೂ ಅವನಿಗೆ ನಂಬಲಿಕ್ಕಾಗದ ವಿಷಯವೇ ಆಗಿದ್ದಿತು. ಜಗ್ಗಾ ನೆಲದ ಮೇಲೆಯೇ ಕುಳಿತ.

"ನೀನು ಬಹಳ ಚೆನ್ನಾಗಿ ಹಾಡುತ್ತೀಯ. ಜೇಲಿನಲ್ಲಿ ಒಂದು ನಾಟಕ ಏರ್ಪಡಿಸಬೇಕೆಂದಿದ್ದೇನೆ. ನೀನೂ ಅದರಲ್ಲಿ ಭಾಗವಹಿಸಬಯಸುವಿಯಾ ?" ಹೊಸ ಸುಪರಿಂಟೆಂಡೆಂಟರು ಅವನನ್ನು ಕೇಳಿದರು.

ಯಾವ ವಿಷಯದಲ್ಲಿಯೂ ಸ್ವಂತ ನಿರ್ಧಾರ ಕೈಕೊಳ್ಳಲು ಈ ವರೆಗೆ ತನಗೆ ಪೋಲೀಸರು ಅವಕಾಶವನ್ನು ಕೊಟ್ಟಿರಲಿಲ್ಲ. ಅವರೇ ತಾನು ಮಾಡಬೇಕಾದ ಕೆಲಸವನ್ನು ನಿರ್ಧರಿಸಿ ಅಪ್ಪಣೆ ಕೊಡುತ್ತಿದ್ದರು. ಇಂದು ತನ್ನ ಕೆಲಸದ ಕುರಿತು ನಿರ್ಧರಿಸಲು ಕೆಲ ನಿಮಿಷಗಳ ಅವಕಾಶ ದೊರೆತಿದ್ದಿತು. ಜಗತಸಿಂಗ ಈ ನಿರ್ದೇಶವನ್ನು ತಿರಸ್ಕರಿಸಲಿಲ್ಲ. ಇಂಥ ಸಂದರ್ಭಗಳಲ್ಲಿ ಆತ ಜಗಳಕ್ಕೆ ನಿಲ್ಲದಿದ್ದುದು ಇದೇ ಮೊದಲ ಬಾರಿ.

ಮೆಹತಾರಿಗೆ ಜಗತಸಿಂಗನ ಮೇಲೆ ನಂಬಿಕೆಯುಂಟಾಯಿತು. ಜಗ್ಗಾ ಜೇಲು ಅಧಿಕಾರಿಗಳನ್ನು ಸಂಬೋಧಿಸುವಾಗ ಕೆಟ್ಟ ಪದಗಳನ್ನೇ ಬಳಸುತ್ತಿದ್ದ. "ಇಂತಹ ಅಸಹ್ಯವಾದ ಮಾತುಗಳನ್ನು ಏಕೆ ಉಪಯೋಗಿಸುತ್ತೀಯಾ ?" ಎಂದು ಅವನನ್ನು ಒಮ್ಮೆ ಮೆಹತಾ ಕೇಳಿದರು.

"ಮತ್ತೇನು ಮಾಡಲಿ, ಮೆಹತಾ ಸಾಹೇಬ್? ಈ ಅಧಿಕಾರಿಗಳು ಎಂದೂ ನನಗೆ ವಿಚಾರ ಮಾಡುವ ಸ್ವಾತಂತ್ರ್ಯವನ್ನೇ ಕೊಟ್ಟಿಲ್ಲ. ನನ್ನನ್ನು ಈ ಕತ್ತಲೆ ಕೋಣೆಯಲ್ಲಿ ಕೂಡಿಹಾಕಿದ್ದಾರೆ. ನನ್ನ ಗೆಳೆಯರಿಗೆ ಅಪಾರ ಯಾತನೆ ಕೊಡುತ್ತಾರೆ. ಇತರ ಗುಂಪಿನವರನ್ನೇ ಕೈದಿಗಳ ನಾಯಕರನ್ನಾಗಿ ಆರಿಸುತ್ತಾರೆ. ನಮ್ಮವರಿಗೆ ಈ ಸೌಲಭ್ಯ ಇಲ್ಲ. ಅದರಿಂದ ಅವರ ಸುಟ್ಟ ಮೂತಿಗಳನ್ನು ಬೈಯುವುದು ಹೊರತು ಬೇರೆ ಮಾರ್ಗ ನನಗೆ ತೋರುವುದಿಲ್ಲ."

"ನಿನ್ನ ಏಕಾಂತ ಬಂಧನ ಇಂದಿಗೆ ಮುಕ್ತಾಯವಾಯಿತು. ನಿನ್ನವರನ್ನೂ 'ಲಂಬಾರ್ದಾರ್' (ಕೈದಿಗಳ ನಾಯಕ) ರನ್ನಾಗಿ ನೇಮಿಸುವಂತೆ ಮಾಡುತ್ತೇನೆ" ಎಂದರು ಮೆಹತಾ.

ಜಗತಸಿಂಗನಿಗೆ ಒಮ್ಮೆಗೇ ನಂಬಿಕೆ ಬರಲಿಲ್ಲ. ಅವನು ತನಗಾಗದವರ ಹೆಸರುಗಳನ್ನು ತನ್ನ ಗೆಳೆಯರೆಂದು ಮೆಹತಾರಿಗೆ ತಿಳಿಸಿದ. ಮರುದಿನ ಅವರೆಲ್ಲರೂ "ಲಂಬಾರ್ದಾರ್" ಆದಾಗ ಅವನಿಗೆ ನಂಬಿಕೆ ಹುಟ್ಟಿತು. ಜಗ್ಗಾಗೆ ಕ್ರಮೇಣ ಮೆಹತಾರು ಹೆಚ್ಚಿನ ಸ್ವಾತಂತ್ರ್ಯವನ್ನು ಕೊಟ್ಟರು. ಕೈದಿಗಳು ಆಡಿದ ನಾಟಕವೂ ಯಶಸ್ವಿಯಾಯಿತು; ಜಗತಸಿಂಗನ ಪಾತ್ರ ಅತ್ಯುತ್ತಮವಾಗಿದ್ದಿತು.

ಕೆಲವು ದಿನಗಳನಂತರ ಕೈದಿಗಳ ಸುಧಾರ

ಣೆಯ ಹೊಸ ಯೋಜನೆಯೊಂದನ್ನು ಪ್ರಕಟಿಸ ಲಾಯಿತು. ಯೋಜನೆಯ ಪ್ರಯೋಗಕ್ಕೆ ಒಬ್ಬ ಕೈದಿಯ ಹೆಸರನ್ನು ಸೂಚಿಸುವಂತೆ ಶ್ರೀ ಮೆಹ-ತಾರನ್ನು ಮೇಲಧಿಕಾರಿಗಳು ಕೇಳಿದ್ದರು. ಮೆಹತಾ ವಿಚಾರ ಮಾಡಿ, ಜಗ್ಗಾನ ಹೆಸರನ್ನು ಆರಿಸಿದರು. ಪೋಲೀಸ ಅಧಿಕಾರಿಗಳು ಪ್ರತಿಭಟಿಸಿದರು. ಆದರೆ ಮೆಹತಾ ಹಟ ಬಿಡಲಿಲ್ಲ.

ಒಮ್ಮೆ ಪಂಜಾಬದ ಮುಖ್ಯಮಂತ್ರಿ ಶ್ರೀ ಭೀಮಸೇನ ಸಾಚಾರರು ಜೇಲಿಗೆ ಭೇಟಿಯಿತ್ತರು. "ಬಿಡುಗಡೆಯಾದನಂತರ ಏನು ಮಾಡಬೇಕೆಂದಿರುವೆ?" ಎಂದು ಅವರು ಜಗ್ಗಾನನ್ನು ಪ್ರಶ್ನಿಸಿದರು.

"ನಾನು ರೈತನಾಗುತ್ತೇನೆ" ಜಗ್ಗಾ ತಟಕ್ಕನೆ ಉತ್ತರವಿತ್ತ. ಆ ಮೇಲೆ ಜಾಮೀನಿನ ಮೇಲೆ ಎರಡು ತಿಂಗಳ ಅವಧಿಗೆ ಜಗ್ಗಾನ ಬಿಡುಗಡೆಯಾಯಿತು. ಈ ಅವಧಿಯನ್ನು ಕಳೆಯುವುದು ಅವನಿಗೆ ಸುಲಭವಾಗಲಿಲ್ಲ. ಪೋಲೀಸರು ಅವನನ್ನು ಡಕಾಯಿತನೆಂದೇ ಇನ್ನೂ ತಿಳಿಯುತ್ತಿದ್ದರು. ಅತ್ತ ಅವನ ಹಿಂದಿನ ಗೆಳೆಯರು ತಮ್ಮ ನಾಯಕನಾಗೆಂದು ಒತ್ತಾಯಪಡಿಸುತ್ತಿದ್ದರು. ಅದರಿಂದ ಅವನಲ್ಲಿ ಮಾನಸಿಕ ದ್ವಂದ್ವಯುದ್ಧವೇ ನಡೆಯಿತು. ಸ್ವತಂತ್ರ ಹಾಗೂ ಸ್ವೇಚ್ಛೆಯ ಡಕಾಯಿತ ಜೀವನ—ಕಸುಬುಗಳತ್ತ ಆಕರ್ಷಣೆ ಇರುತ್ತಿತ್ತು. ಈ ಪ್ರಾಯೋಗಿಕ ಕಾಲವನ್ನು ಪ್ರಾಮಾಣಿಕತೆಯಿಂದ ಜಗತಸಿಂಗ ಯಶಸ್ವಿಯಾಗಿ ಮುಗಿಸಿದ.

ಜಗ್ಗಾನ ಬಿಡುಗಡೆಯಾಗಿ ಸುಮಾರು ಎರಡು ವರ್ಷ ಕಳೆದವು. ದರೋಡೆಗಾರಿಕೆಯ ಜೀವನದಿಂದ ಅವನ ಇತರ ಇಪ್ಪತ್ತುಮಂದಿ ಗೆಳೆಯರೂ ದೂರಾದರು. ಬಿಡುಗಡೆಯೇ ಇಲ್ಲದೆ ಸೆರೆಯಲ್ಲಿ ಕೊಳೆಯುತ್ತಿದ್ದ ಅವರು ಈಗ ಆತ್ಮಸ್ವಾತಂತ್ರ್ಯ ಯೋಧರಾಗಿದ್ದಾರೆ. ಜಗತಸಿಂಗ, ಈಗ ಪಂಜಾಬ ಸರಕಾರದ ಪ್ರಚಾರ ಶಾಖೆಯ ನಾಟಕ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಾನೆ.



## ಮಾತಿಗೆ ಮಾತು

"ಅಲ್ಲೆ, ಕೇಳಿದಿಯೇನು? ಒಳ್ಳೆಯ ನಿದ್ದೆ ಸೌಂದರ್ಯವನ್ನು ಬೆಳೆಸಿಕೊಳ್ಳಲು ತುಂಬ ಸಹಾಯ ಮಾಡುತ್ತದೆಂದು ಒಬ್ಬ ಡಾಕ್ಟರರು ಇಲ್ಲಿ ಬರೆದಿದ್ದಾರೆ."

"ಹುಂ. ಈಗ ಗೊತ್ತಾಯಿತು. ನಮ್ಮ ಅಡಿಗೆಯವಳು ಬಹುಶಃ ಯಾವದೋ ಸೌಂದರ್ಯ ಸ್ಪರ್ಧೆಗೆ ನಿಲ್ಲಬೇಕೆಂದು ಬಯಸುತ್ತಿರಬೇಕು."

*

"ಛೆ! ಛೆ! ಈವೊತ್ತು ಯಾರ ಮುಖ ನೋಡಿದ್ದೆನೊ ಏನೋ! ಎಷ್ಟು ಅಂಗಡಿ ತಿರುಗಿದರೂ ನನಗೆ ಬೇಕಾದ್ದು ಸಿಗಲಿಲ್ಲ."

"ಹೌದೇನು? ಈ ಕಾಲದಲ್ಲಿ ಉದ್ದರಿ ಸಿಗುವದು ಬಹು ಕಠಿಣವಾಗಿದೆ."

*

"ಅಲ್ಲರೀ, ನನ್ನ ಅಣಕ ಮಾಡಿದ್ದಕ್ಕೆ ನಿಮ್ಮ ಹುಡುಗನನ್ನು ಬಯ್ದಿರೇನು?"
"ಹೌದು. ಮೂರ್ಖರಂತೆ ಮಾಡಬಾರದು ಎಂದು ಗದರಿಸಿದೆ."

ನಿಮ್ಮ ಮಗು ಸಿಡಿಮಿಡಿಗೊಂಡಿದ್ದರೆ
ಅದಕ್ಕೆ ಕಾರಣವಿರಲೇಬೇಕು.

# ಮಕ್ಕಳೇಕೆ ರಂಪ ಮಾಡುತ್ತಾರೆ?







ಪ್ರತಿಯೊಂದು ಮಗು ಒಮ್ಮೆಯಲ್ಲ ಒಮ್ಮೆ ಕಾಡಿಯೋ ಜಗಳವಾಡಿಯೋ ತೀರುವದು. ಇದು ಅದಕ್ಕೆ ಉಸಿರಾಡುವಷ್ಟೇ ಸಹಜವಾದುದು. ಯಾಕೆಂದರೆ ಯಾವಾಗಲೂ ಎಲ್ಲದಕ್ಕೂ ಹೊಂದಿಕೊಂಡು ಹೋಗುವುದು ಎಳೆಯ ಮಕ್ಕಳಿಗೆ ಸಾಧ್ಯವಿಲ್ಲ. ಅದರಂತೆಯೆ ಎಳೆಯ ಮಗುವೆಂದರೆ ಒಳ್ಳೆ ಗುಣ ನಡತೆಗಳ ಗುದಾಮಾಗಲಿ ಆತ್ಮಸಂಯಮದ ಖನಿಯಾಗಲಿ ಅಲ್ಲ.

ಆದರೆ ಹಟಹಿಡಿದು ನಿರಂತರ ಜಗಳವಾಡುವ ವಿಷಯವೇ ಬೇರೆ. ಒಂದು ಮಗು ಯಾವಾಗಲೂ ಜಗಳ ತೆಗೆಯುವ ಹಟಮಾರಿತನ ತೋರಿಸುತ್ತಿದ್ದರೆ ಆ ಮಗುವಿಗೆ ಏನಾದರೂ ಹೆಚ್ಚು ಕಡಿಮೆಯಾಗಿರಲೇ ಬೇಕು.

ಸಾಮಾನ್ಯವಾಗಿ ಮಕ್ಕಳು ಜಗಳಗಂಟತನ ತೋರಿಸಲು ದೈಹಿಕ ಕಾರಣಗಳೇ ಇರುತ್ತವೆ. ಅವಕ್ಕೆ ಮಿತಿಮೀರಿ ಬಳಲಿಕೆಯಾಗಿದ್ದರೆ ರಾತ್ರಿಯ ನಿದ್ದೆಯಿಂದ ದೊರೆತ ವಿಶ್ರಾಂತಿ ಸಾಲದಿರಬಹುದು. ವಯಸ್ಕರಿಗೂ ಕೂಡ ಹೆಚ್ಚು ಬಳಲಿದರೆ ಇರುಳ ನಿದ್ದೆಯೇ ಸಾಕಾಗುವುದಿಲ್ಲ. ಕೆಲ ತಾಯಂದಿರು ಬೇಸಿಗೆಯ ಸುಖಾವಹವಾದ ರಾತ್ರಿಗಳಲ್ಲಿ ನಿತ್ಯವೂ ಮಕ್ಕಳೊಡನೆ ಆಡುತ್ತ ಅವನ್ನು ಬಹಳ ಹೊತ್ತಿನ ತನಕ ನಿದ್ದೆ ಮಾಡಗೊಡುವುದಿಲ್ಲ; ಹಗಲಿನ ಸೊಗಸಿನ ದಿನಗಳಲ್ಲಿ ಮಕ್ಕಳನ್ನು ನಿದ್ದೆ ಮಾಡಲು ಬಿಡುವುದಿಲ್ಲ. ಇದರಿಂದ ಮಗುವಿನ ಚರ್ಯೆಯಲ್ಲಿ ಬದಲಾವಣೆಯಾಗುವುದು.

"ಮದರ್" ಪತ್ರಿಕೆಯಿಂದ

ಆರೋಗ್ಯವಾಗಿಲ್ಲದ ಮಗು ಕೂಡ ಹಟಮಾಡುವುದು. ಆದ್ದರಿಂದ ಮಗು ಹಟ ಮಾಡುತ್ತಿದ್ದರೆ, ಕಾಡುತ್ತಿದ್ದರೆ ಅದರ ದಿನಚರಿಯಲ್ಲಾಗಲಿ ಆರೋಗ್ಯದಲ್ಲಾಗಲಿ ಕುಂದುಂಟಾಗಿದೆ ಎಂದು ತಿಳಿಯಬೇಕು. ಮಗುವಿನ ದಿನಚರಿಯ ಬಗ್ಗೆ ತಾಯಿ ಡಾಕ್ಟರರ ಸಲಹೆ ಪಡೆಯಬೇಕು.

ಮಗುವಿನ ನಾಲಿಗೆಯಲ್ಲಿ ಅಗ್ರ ಹೆಚ್ಚಾಗಿದ್ದರೆ ಅದರ ಪ್ರಭಾವವು ಆರೋಗ್ಯದ ಮೇಲೆ ಕಂಡುಬಂದೀತು. ಹಾಗೆಯೇ ಮಗುವಿನ ಸ್ವಭಾವದಲ್ಲಿ ಬದಲಾವಣೆಯನ್ನೂ ಮಾಡೀತು. ಅಗ್ರ (ಅಂಗಳ) ಹೊರಬರಬೇಕೆಂದೇನೂ ಇಲ್ಲ. ಆದರೆ ಅಗ್ರಬಂದ ಹಾಗೆ ಅದನ್ನು ತೆಗೆಯುವುದು ಹೆಚ್ಚು ಪ್ರಯೋಜನಕರವಾದುದು. ಬಹಳ ಸಣ್ಣ ಮಕ್ಕಳಾಗಿದ್ದರಂತೂ ಅಗ್ರ ತೆಗೆಯುವುದು ಅತ್ಯಂತ ಮುಖ್ಯವಾದುದು.

ಮಕ್ಕಳ ಆರೋಗ್ಯ ಸರಿಯಿರದಿದ್ದರೆ ಹೇಗಾದರೂ ಮಾಡಿ ಅದನ್ನು ಬೇಗನೆ ಗುಣಪಡಿಸಬೇಕು. ಇದಕ್ಕೆ ಸಾಕಷ್ಟು ಶುದ್ಧ ಗಾಳಿ, ನಿದ್ದೆ, ವಿಶ್ರಾಂತಿ, ಮತ್ತು ಸರಿಯಾದ ಪಥ್ಯ ಅವಶ್ಯ. ಈ ಪಥ್ಯದಲ್ಲಿ ಸಸಾರಜನಕಗಳು (ಪ್ರೋಟೀನು) ಕಡಮೆಯಾಗಿದ್ದು ವಿಟಾಮಿನ್‌ಗಳು ಮತ್ತು ಲೋಹಾಂಶಗಳು ಹೆಚ್ಚಿರಬೇಕು. ಏಕೆಂದರೆ ಅವು ಗಾಳಿಯ ಮೂಲಕ ಮಗುವಿಗೆ ರೋಗ ಸಂಪರ್ಕವಾಗುವುದನ್ನು ತಡೆಯಬಲ್ಲವಲ್ಲದೆ ತಕ್ಕಷ್ಟು ಪೋಷಣೆಯನ್ನೂ ಕೊಡುತ್ತವೆ.

ಹಲ್ಲು ಕೆಡುವುದು ಕೂಡ ಮಗುವಿನ ಆರೋಗ್ಯ ಮತ್ತು ನಡತೆಯ ಮೇಲೆ ಕುಪ್ರಭಾವವನ್ನು ಬೀರುವುದು. ಆದರಿಂದ ಈ ಬಗೆಗೆ ಎಚ್ಚರಿಕೆಯಿರಬೇಕು. ಇಂಥ ಸಂದರ್ಭದಲ್ಲಿ ದಂತವೈದ್ಯರಿಂದ ಮಗುವಿನ ಪರೀಕ್ಷೆ ಮಾಡಿಸಬೇಕು.

ಇಷ್ಟು ಪರಿಶೀಲನೆಯಿಂದ ಮಗು ಸಂಪೂರ್ಣ ಆರೋಗ್ಯಶಾಲಿಯೆಂದು ಖಚಿತಪಡಿಸಿಕೊಂಡು ಮಗುವಿನ ಹಟಮಾರಿತನಕ್ಕೆ ಮಾನಸಿಕ ಕಾರಣಗಳಿವೆಯೇ ಎಂದು ವಿಚಾರಿಸಬೇಕು. ನಿರಾಶೆ, ಚಿಂತೆ, ಅಸುರಕ್ಷಿತ ಭಾವನೆ ಮುಂತಾದವು ಮಗುವಿನಲ್ಲಿವೆಯೇ ಎಂದು ಜಾಗರೂಕತೆಯಿಂದ ತಾಯಿ ಕಂಡುಕೊಳ್ಳಬೇಕು. ಮಗುವಿನ ಮಾನಸಿಕ ಕ್ಷೋಭೆಯ ಕಾರಣವನ್ನು ಕಂಡುಹಿಡಿದು ನಿವಾರಿಸಬೇಕು.

ಮಗುವಿಗೆ ಮನೆಯ ಹೊರಗೆ ಆಡಲು ಸ್ವಾತಂತ್ರ್ಯವಿಲ್ಲದೆ ಅದು ಚಿಂತೆಗೊಳಗಾಗಬಹುದು. ಮನೆಯ ಮುಂದೆ ಆಡಲು ಅಂಗಳ ಅಥವಾ ಹೂದೋಟವಿಲ್ಲದಿದ್ದರೆ ಅಥವಾ ನೆರೆಮನೆ ಅತಿ ಹತ್ತಿರವಾಗಿದ್ದಾಗ ನೆರೆಯವರಿಗೆ ತಮ್ಮ ಮಗು ತೊಂದರೆ ಕೊಡಬಾರದೆಂದು ತಾಯಿ ತಂದೆಗಳು ಅದನ್ನು ನಿರ್ಬಂಧಿಸಿಟ್ಟರೆ ಮಗುವಿನ ಆಟ-ಓಟಗಳ ಆಶೆ ಅದುಮಿಹೋಗಬಹುದು. ಒಟ್ಟಿನ ಮೇಲೆ ಸಾಮಾನ್ಯ ಮಕ್ಕಳಿಗೆ ಅಷ್ಟಿಷ್ಟು ಗಲಭೆ ಮಾಡುವುದು, ಓಡಾಡುವುದು ಬೇಕೇಬೇಕಾಗಿರುತ್ತದೆ. ಅದಕ್ಕೆ ತಾಯಿ-ತಂದೆ ಸಾಕಷ್ಟು ಅವಕಾಶವೀಯದಿದ್ದರೆ ಮಾನಸಿಕ ಕ್ಷೋಭೆಗೆ ಕಾರಣವಾದೀತು.

ಮಗುವಿನ ಆಟ-ಓಟಗಳಲ್ಲಿ ಶಿಸ್ತು ಇರಬಾರದೆಂದಲ್ಲ; ಅವುಗಳಲ್ಲಿ ಹದವಾದ ಹಿಡಿತ ಬೇಕೇಬೇಕು. ಆದರೆ ಸುಮ್ಮನೇ ಒಂದು ಕಡೆ ಕುಳಿತಲ್ಲೇ ಇರುವುದರಿಂದ ಮಾತ್ರ ಮಗು ಅಸಂತೋಷಗೊಳ್ಳುವುದು; ಅಲ್ಲದೆ ಅದರ ಸ್ವಭಾವವೂ ಕೆಡುವುದು. ಅದಕ್ಕಾಗಿ ತಾಯಿ ಹತ್ತಿರದ ಸಾರ್ವಜನಿಕ ಪಾರ್ಕಿಗೆ ಮಗುವನ್ನು ಕರೆದೊಯ್ಯುವುದು ಒಳ್ಳೆಯದು. ಅಲ್ಲಿ ಅದು ಬೇಕಾದಂತೆ ಮನಬಂದಂತೆ ಆಡಲವಕಾಶವಿದೆ. ಕೈ-ತುಂಬ ಕೆಲಸವಿರುವ ತಾಯಿಗೆ ಮಗುವನ್ನು ಪಾರ್ಕಿಗೆ ಕರೆದೊಯ್ಯುವುದು ಸುಲಭ ಸಾಧ್ಯವಲ್ಲ. ಆದರೂ ಮಗುವಿನ ಹಿತಕ್ಕಾಗಿ—ತನ್ನ ಒಳ್ಳೆಯದಕ್ಕಾಗಿ ಆಕೆ ಈ ಅಭ್ಯಾಸವನ್ನು ಇಟ್ಟುಕೊಳ್ಳಲು ಪ್ರಯತ್ನಿಸಬೇಕು.

ಮಗುವಿನ ನಿರಾಶೆಗೆ ಆಟದ ಸಾಮಾನು ಸರಿಯಾಗಿಲ್ಲದಿರುವುದೂ ಕಾರಣವಾಗಬಹುದು. ಮಗುವಿನ ಪ್ರಾಯ ಮತ್ತು ಮನಸಿನ ಮಟ್ಟಕ್ಕೆ ಸರಿದೂಗದಂಥ ಗೊಂಬೆಯಿಂದ ಅದು ಸಿಟ್ಟಾಗುವದು. ಮಗುವಿಗೆ ಇತರ ಮಕ್ಕಳ ಜತೆಯೂ ಬೇಕು. ಜೊತೆಗಾರರಿಲ್ಲದೆ ಅವು ಸಿಡಿಮಿಡಿ

ಗೊಳ್ಳುವುದೂ ಉಂಟು.

ಯಾವಾಗಲೂ ಹಿರಿಯರೊಂದಿಗೆ ಆಡುವುದು ಮಗುವಿನ ಸಂತಾಪಕ್ಕೆ ಮತ್ತೊಂದು ಕಾರಣ. ಯಾಕೆಂದರೆ ಅದಕ್ಕೆ ಆಗ ತನ್ನದೇ ಎಂದು ಪ್ರತ್ಯೇಕವಾಗಿ ತನ್ನ ಗೊಂಬೆಗಳಿಗೂ ಮತ್ತಿತರ ಸಾಮಾನುಗಳಿಗೂ ಖಾಸಗಿ ಸ್ಥಳ ಉಳಿಯುವುದಿಲ್ಲ.

ಮನೆಯಲ್ಲಿ ಜಗಳ, ಭಿನ್ನತೆ, ಹೆತ್ತವರಲ್ಲಿ ಹಿರಿಯರಲ್ಲಿ ಬಡಿದಾಟ ಮುಂತಾದವಿದ್ದರೂ ಮಗುವಿಗೆ ಮಾನಸಿಕ ಸುಖವಿಲ್ಲ. ಹಾಗೆಯೇ ಶೀಘ್ರಕೋಪಿ ಮತ್ತು ಚಂಚಲ ತಾಯಿ ಕೂಡ ಮಗುವಿನ ಅಸಂತೋಷಕ್ಕೆ ಕಾರಣವಾದಾಳು. ಸಿಟ್ಟು, ಕೊನೆಯಿಲ್ಲದ ಸಿಡುಕು ನುಡಿ ಮುಂತಾದ ವಿಚಿತ್ರನಡತೆಗಳು ಸಾಮಾನ್ಯವಾಗಿ ಪ್ರಬುದ್ಧರಲ್ಲಿಯೂ ಮುದುಕರಲ್ಲಿಯೂ ಇರುವುದುಂಟು.

ಈ ವಿಷಯವನ್ನು ಪ್ರತಿಯೊಬ್ಬ ತಾಯಿಯೂ ನೆನಪಿನಲ್ಲಿಟ್ಟುಕೊಳ್ಳಬೇಕು. ತನ್ನ ತೊಡಕುಗಳನ್ನು ಚಳಲಿಕೆಯನ್ನು ಕಡಮೆಮಾಡಿಕೊಳ್ಳಲು ತಾಯಿ ಪ್ರಯತ್ನಿಸಿದಂತೆಲ್ಲ ಮಗುವು ನಗುವುದು ಅದರ ಮನಸ್ಸು ಸಂತೋಷಗೊಳ್ಳುವುದು.

---

## ಆಶೆ

ಯೌವನದೊಡನೆ ಆಶೆಯೂ ಹೋಗುತ್ತದೆನ್ನುತ್ತಾರೆ. ಆದರೆ ನನ್ನ ಅಭಿಪ್ರಾಯದಲ್ಲಿ ಆಶೆಯೆಂಬುದು ಮನುಷ್ಯನಿಗೆ ದೊರೆಯುವ ಕೊನೆಯ ವರ; ತರುಣರಿಗೆ ದೊರೆಯದ ವರ ಅದೊಂದೇ. ತರುಣರ ಪಾಲಿಗೆ ಒಂದೊಂದು ಘಟನೆಯ ಕೊನೆಯೂ ಜಗತ್ತಿನ ಕೊನೆಯೆನಿಸುತ್ತದೆ. ಆದರೆ ಎಲ್ಲವನ್ನು ಅನುಭವಿಸಿ ಮತ್ತೆ ಆಶಾವಾದಿಯಾಗಿರುವುದು ಮಧ್ಯ ವಯಸ್ಸಿನವನಿಗೆ ಮಾತ್ರ ಇರುವ ಸ್ಫೂರ್ತಿ. ಎಂಥೆಂಥ ವಿಪತ್ತುಗಳು ಬಂದರೂ ಆತ್ಮ ಅಮರನೆಂಬ ಜ್ಞಾನ ಆ ಸ್ಫೂರ್ತಿಯ ನೆಲೆ.

—ಜಿ. ಕೆ. ಚೆಸ್ಟರಟನ್

## ಸ್ವಾರ್ಥ

ಸ್ವಾರ್ಥವೆಂದರೆ ತಾನು ಬಯಸಿದಂತೆ ಬಾಳುವುದಲ್ಲ; ನಾವು ಬಾಳಬಯಸಿದಂತೆ ಇತರರು ಬಾಳಬೇಕೆಂದು ಹೇಳುವುದೇ ಸ್ವಾರ್ಥ. ನಿಃಸ್ವಾರ್ಥವೆಂದರೆ ಪರರನ್ನು ಅವರ ಪಾಡಿಗೆ ಬಾಳಲು ಬಿಡುವುದು; ಅದರಲ್ಲಿ ಕೈಹಾಕದಿರುವುದು. ಸ್ವಾರ್ಥವು ತನ್ನ ಸುತ್ತಲೂ ಶುದ್ಧ ಏಕರೂಪ ಆವರಣವನ್ನುಂಟುಮಾಡಲು ಹವಣಿಸುತ್ತದೆ. ನಿಃಸ್ವಾರ್ಥವು ಅನಂತ ವೈವಿಧ್ಯದಲ್ಲಿ ಸೊಗಸನ್ನು ಗುರುತಿಸುತ್ತದೆ, ಅದನ್ನು ಒಪ್ಪಿಕೊಳ್ಳುತ್ತದೆ, ಅದರಲ್ಲಿ ಸಹಭಾಗಿಯಾಗುತ್ತದೆ, ಅದನ್ನು ಆಸ್ವಾದಿಸುತ್ತದೆ.

—ಆಸ್ಕರ್ ವೈಲ್ಡ್

## ವಿದ್ಯೆ

ವಿದ್ಯೆಗೂ ಬುದ್ಧಿಗೂ ಅಂತರವರಿಯದಿರುವುದು ನಮ್ಮ ತತ್ವಜ್ಞಾನದ ದೊಡ್ಡ ದೌರ್ಬಲ್ಯ. ಗುಂಜಿತೂಕ ಬುದ್ಧಿಗೆ ಧಡೆಯಷ್ಟು ವಿದ್ಯೆಯ ಬೆಲೆ ಇದೆ. ಬುದ್ಧಿಯಿದ್ದಲ್ಲಿ ವಿದ್ಯೆ ತಾನಾಗಿ ಮುಂದುವರಿಯುತ್ತದೆ; ಆದರೆ ಬರಿ ವಿದ್ಯೆ ಮಾತ್ರ ಇದ್ದಲ್ಲಿ ಅದರ ಫಲಗಳು ಅಶಿಕ್ಷಿತ ಮೂಢತನದ ಫಲಗಳಿಗಿಂತಲೂ ಪರಮಘೋರವಾಗುವವು.

—ಲುಯಿ ಬ್ರೂಲಫೀಲ್ಡ್

# ದೊಡ್ಡವರ ಸಣ್ಣ ಕತೆಗಳು

## ಮೋಹನನ ದರ್ಶನ

ದೀನಬಂಧು ಆಂಡ್ರೂಸರು ಮತ್ತು ಗಾಂಧಿಜಿಯವರು 'ಮೋಹನ' ಮತ್ತು 'ಚಾರ್ಲಿ' ಎಂದು ಒಬ್ಬರನ್ನೊಬ್ಬರು ಸಂಬೋಧಿಸುತ್ತಿದ್ದರು. ಒಂದು ದಿನ ಆಂಡ್ರೂಸರು ಸೇವಾಗ್ರಾಮಕ್ಕೆ ಬಂದಾಗ ಉದ್ದ ಅಂಗಿ ತೊಟ್ಟು ಕರಿಯ ದಪ್ಪಂಚಿನ ದೋತರವನ್ನು ಬಂಗಾಲಿ ಮಾದರಿಯಲ್ಲಿ ಉಟ್ಟಿದ್ದರು.

ಬಾಪೂ ಆಂಡ್ರೂಸರನ್ನು ನೋಡಿದೊಡನೆಯೇ ಕೇಳಿದರು: "ಚಾರ್ಲಿ, ಇದೇನು ನಿನ್ನ ಇಂದಿನ ವೇಷ?''

"ಏನಾಯಿತು?'' ದೀನಬಂಧು ಆಶ್ಚರ್ಯದಿಂದ ಕೇಳಿದರು.

ಬಾಪೂ ನಸು ನಗೆ ಬೀರುತ್ತ ಹೇಳಿದರು: "ಇಂಥ ದೋತರವನ್ನು ಹೆಂಗಸರಷ್ಟೇ ಉಡುತ್ತಾರೆ!''

ದೀನಬಂಧು ಆಂಡ್ರೂಸರು ಅಪ್ರತಿಭರಾಗಲಿಲ್ಲ. ಬಾಪೂನ ಕಡೆಗೆ ಕಣ್ಣು ಮಿಟುಕಿಸಿ ಅವರೆಂದರು: "ಏನು ತಪ್ಪಾಯಿತು? ನಾನಾದರೂ ನನ್ನ ಮೋಹನನ ದರ್ಶನಕ್ಕಾಗಿಯೇ ಬರುತ್ತಿದ್ದೇನಲ್ಲ!''

—ರಾಮ ನಾರಾಯಣ ಚೌಧರಿ

## ವಿಶ್ವೇಶ್ವರಯ್ಯನವರ ಪ್ರಾಮಾಣಿಕತೆ

ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ಅವರಿಗೆ ಅರಿವಿಲ್ಲದೆಯೇ ಅವರ ಸಮೀಪದ ಬಂಧು ಒಬ್ಬರಿಗೆ ಮೈಸೂರು ಸರಕಾರದ ಒಂದು ದೊಡ್ಡ ಉದ್ಯೋಗ ದೊರೆಯುವುದರಲ್ಲಿತ್ತು. ಅವರು ಆ ಉದ್ಯೋಗ ಪಡೆಯಲು ಅರ್ಹರೂ ಆಗಿದ್ದರು. ಆದರೆ ಈ ವಿಷಯ ತಮಗೆ ತಿಳಿದೊಡನೆಯೇ ವಿಶ್ವೇಶ್ವರಯ್ಯನವರು ಆ ಬಂಧುವನ್ನು ಕರೆಸಿ ಅವರಿಗೆ ಸರಕಾರ ಕೊಡುವ ಸಂಬಳವನ್ನು ತಾವೇ ಕೊಡುವುದಾಗಿ ಭರವಸೆ ನೀಡಿ ಅವರು ಆ ಕೆಲಸವನ್ನು ಸ್ವೀಕರಿಸದಂತೆ ಮಾಡಿದರು. ಬಂಧುಗಳಿಗೆ ಅನುಗ್ರಹಮಾಡಿದನೆಂಬ ಅಪವಾದಕ್ಕೆ ಎಳ್ಳಷ್ಟು ಅವಕಾಶ ಇರಬಾರದೆಂಬುದೇ ಅವರ ಹಂಬಲವಾಗಿತ್ತು.

ವಿಶ್ವೇಶ್ವರಯ್ಯನವರು ತಮ್ಮ ಖಾಸಗಿ ಹಾಗು ಸರಕಾರಿ ಹಣದಲ್ಲಿ ಎಷ್ಟು ಎಚ್ಚರದಿಂದ ವ್ಯತ್ಯಾಸ ಮಾಡುತ್ತಿದ್ದರೆಂದರೆ, ಶ್ರೀಮನ್ಮಹಾರಾಜರಿಗೆ ತಮ್ಮ ರಾಜೀನಾಮೆಯನ್ನು ಸಲ್ಲಿಸಲು ಹೋಗುವಾಗ ದಿವಾನರಾಗಿ ಸರಕಾರದ ಕಾರಿನಲ್ಲಿ ಹೋಗಿದ್ದರು; ಆದರೆ ಹಿಂತಿರುಗಿ ಬರುವಾಗ ಸರಕಾರದ ಗಾಡಿಯನ್ನು ಬಿಟ್ಟು ತಮ್ಮ ಸ್ವಂತ ಮೋಟಾರಿನಲ್ಲಿ ಬಂದರು.

—ವ್ಹಿ. ಎಸ್. ನಾರಾಯಣರಾಯರ ಪುಸ್ತಕದಿಂದ

## ಅತಿಥಿ

ಆಫ್ರಿಕದ ಜನರಿಗೆ ಬಿಳಿಯರು ಮಾಡಿದ ಅನ್ಯಾಯದ ಪರಿಮಾರ್ಜನೆಗೆಂದು ಅವರ ಸೇವೆಯನ್ನು ಕೈಕೊಂಡಿರುವ ಪ್ರಸಿದ್ಧ ತತ್ತ್ವಜ್ಞಾನಿ ಆಲ್ಬರ್ಟ ಶ್ವೈತ್ಸರರ ಎರಡನೇ ಆಫ್ರಿಕ ಸಂಚಾರ ಕಾಲದಲ್ಲಿ ಅವರಿಗೆ ನೆರವಾಗಲು ನೋಯೆಲ್ ಜಿಲೆಸ್ಪಿಯೆಂಬ ತರುಣ ಬಂದಿದ್ದನು. ಅವನು ಒಂದು ದಿನ ತನ್ನ ಮಳೆ ಅಂಗಿ ತೊಟ್ಟುಕೊಳ್ಳುತ್ತಿದ್ದಾಗ ಅದರಿಂದ ಒಂದು ಜೀರುಂಡೆ ಹುಳ ಕೆಳಗೆ ಬಿತ್ತು. ಅದು ಕೋಟಿನಲ್ಲಿ ಅನೇಕ ತೂತುಗಳನ್ನು ಮಾಡಿತ್ತು.

ಜಿಲೆಸ್ಪಿಗೆ ಕೆರಳಿತು. ಅವನು ಆ ಹುಳವನ್ನು ಮೆಟ್ಟಲು ಕಾಲೆತ್ತಿದನು. ಆಗ ಶ್ವೈತ್ಸರರು ಅವನ ಹೆಗಲ ಮೇಲೆ ಮೃದುವಾಗಿ ಕೈಯಿಟ್ಟು ಹೇಳಿದರು:

"ಸಾವಧಾನ, ನೋಯಲ್! ನೀನೀಗ ಅದರ ದೇಶದಲ್ಲಿ ಅತಿಥಿಯಾಗಿದ್ದೀ ಎಂದು ಮರೆಯಬೇಡ!''

—ಮ್ಯಾಗ್ನಸ್ ರಾಟರ್

ಸ್ವಾಗತಿಸುವವರು ತಮಿಳರು, "ವಾಂಗೊ ಸಾರ್" ಎಂದು; ತೆಲುಗು ಮಂದಿ "ರಾ ಇಕಡಾ" ಎಂದು ಆಮಂತ್ರಿಸಿದರೆ ಇಲ್ಲ, ಎನ್ನಬೇಡಿ. ಸುಮಾರು ೮ ಲಕ್ಷ ಜನಸಂಖ್ಯೆಯಿರುವ ಈ ನಗರದಲ್ಲಿ ಅವರೇ ಹೆಚ್ಚಿನವರು.

ತೆಲಗು ವ್ಯಾಪಾರಿಗಳ, ಹಸಿದ ತಮಿಳರ ನಡುವೆ ಇಲ್ಲಿನ ಕನ್ನಡ ಜನ ಪೇಚಾಡಿದ್ದಾರೆ; ತಮ್ಮ ಉಸಿರಲ್ಲಿಯೇ ಸಂಶಯ ತಾಳುವ ಸ್ಥಿತಿಗೆ ಅವರು ಇಳಿದಿದ್ದಾರೆ. ಉತ್ತರ ಕರ್ನಾಟಕ ದವರೇನು ನೀವು? (ಎಂಥ ಒರಟು ಜನರಪ್ಪ!) ಮಂಗಳೂರಿಂದ ಬಂದಿರಾ? (ಬೆರಳು ತೋರಿಸಿ ದರೆ ಕೈ ನುಂಗಿ ಬಿಡುತ್ತೀರಿ!) ಹೈದರಾಬಾದಿ-ನವರೇ? (ಹಿಂದುಳಿದವರು.) ಕೊಡಗಿನವರೇ? (ಜಂಭದ ಕೋಳಿಗಳು!) ಎಂದು ಬೇರೆ ಬೇರೆ ವ್ಯಂಗ್ಯ ಸೂಚಿಸುವ ಧ್ವನಿಗಳೊಂದಿಗೆ ಪ್ರಶ್ನಿಸುತ್ತಾರೆ. ಮದರಾಸಿಗಳ ತುಳಿತಕ್ಕೆ ಸಿಕ್ಕಿದ ಅವರ ಈ ಶಂಕೆಯ ಮಾತುಗಳಿಗಾಗಿ ನಿಮಗೆ ಬೇಸರವಾದರೆ ಅದನ್ನು ಹೊರಗೆ ತೋರಿಸಬೇಡಿ. ಪಾಪ! ಸೊರಗಿದ ಜೀವ ನೊಂದು ಕೊಂಡೀತು. (ಮದರಾಸಿಗಳ ತುಳಿತಕ್ಕೆ ಕನ್ನಡಿಗರು ಎಷ್ಟು ನಜ್ಜುಗುಜ್ಜಾಗಿದ್ದಾರೆಂದು ಮೈಸೂರಾಡಳಿತೆಯ ಯಂತ್ರದ ಕೀಲಿನಂತಿದ್ದ ನವರತ್ನ ರಾಮ ರಾಯರು ತಮ್ಮ ನೆನಪುಗಳಲ್ಲಿ ಹೇಳಿದ್ದಾರೆ.)

ನೀವು ರಾಜಾಜಿ ನಗರಕ್ಕೆ ತೆರಳುವವರೋ? ಅಂದರೆ ಎಡಕ್ಕೆ ತಿರುಗಿ ನಡೆಯಿರಿ. ಬಲಕ್ಕೆ ಇರುವ ದೊಡ್ಡ ಹೊಂಡ-ಅದು ಕೆರೆ-ಅಲ್ಲ ತಪ್ಪಿದೆ ಅಂಬುಧಿ ಹೊಸ ಸುಭಾಷ ನಗರ. ನಗರದಲ್ಲಿ ಇದೊಂದೇ ಅಂಬುಧಿಯಲ್ಲ, ಇನ್ನೊಂದೆರಡು ಸಮುದ್ರಗಳೂ ಅಂಬುಧಿಗಳೂ ಇವೆ. ಆದರೆ ನೀವು ಅಲ್ಲಿಗೆ ಹೋದರೆ ಮಳೆಗಾಲದಲ್ಲಿಯೇ ಪಾಪಿ ಹೋದಲ್ಲಿ ಮೊಣಕಾಲು ನೀರು ಎಂದು ಹಿಂತಿರುಗುವಿರಿ.

ನಿಮಗೇನು ರಾಜಾಜಿ ನಗರಕ್ಕೆ ಹೋದವರಿಗೆ ಟಾಟಾ ವಿಜ್ಞಾನ ಮಂದಿರ ಹೆಚ್ಚು ದೂರವಾಗು ವುದಿಲ್ಲ. ನೋಬೆಲ್ ಬಹುಮಾನಿತ ವಿಜ್ಞಾನಿ ಸರ್ ಸಿ. ವಿ. ರಾಮನ್ ಕೇಳಿಲ್ಲವೇ? ಅವರೂ ಮಲ್ಲೇಶ್ವರದಲ್ಲಿಯೇ ವಾಸಮಾಡುತ್ತಾರೆ.

ಆದರೆ ನಗರದ ವೈಭವ ನೋಡಬೇಕಾದರೆ ಸ್ವಲ್ಪ ದಂಡಿನ ಪ್ರದೇಶಕ್ಕೆ ಬರಬೇಕು. ಬ್ರಿಟಿಶರ ಕಾಲದಲ್ಲಿ ಇಲ್ಲಿ ರೆಸಿಡೆನ್ಸಿ ಕಚೇರಿ ಇತ್ತು. ಹಿಂದೆ ಮದರಾಸಿಗೆ ಸೇರಿದ್ದ ಈ ಪ್ರದೇಶ ಬೆಂಗಳೂರಿನ ಅಮರಾವತಿಯೇ ಸರಿ. ಅಠಾರಾ ಕಚೇರಿ ನೋಡಿ ದಾಗಲೇ ನಿಮಗೆ ಅದು ತಿಳಿದುಬಿಡುತ್ತದೆ. ಎದುರುಗಡೆ ಶ್ರೀ ಕೆಂಗಲ್ ಹನುಮಂತಯ್ಯನವರ ರಾಜಕೀಯ ಜೀವನಕ್ಕೆ ಗ್ರಹಣ ತಂದ ಭವ್ಯ ವಿಧಾನ ಸೌಧ ಇನ್ನೂ ಪೂರ್ಣವಾಗಿಲ್ಲ. ಇದಿನ್ನೂ ಆರಂಭದೆಸೆಯಲ್ಲಿದ್ದಾಗಲೇ ಹನುಮಂತಯ್ಯನ ವರ ಮೇಲೆ ಇಲ್ಲಿಯೇ ಒಬ್ಬ ಕೈದಿ ಏರಿಬಂದನು.

ಇಲ್ಲಿ ಮಹಾತ್ಮಾ ಗಾಂಧಿ ರಸ್ತೆಯಲ್ಲಿ ನಡೆ-ದಿರೋ ಮುಂದಕ್ಕೆ ಮದರಾಸು ತಲಪುತ್ತೀರಿ. ಸೈನಿಕ ಶಿಬಿರ ಬೇಕಿದ್ದರೆ ನೋಡಿಬನ್ನಿ- ಸ್ವಲ್ಪ ಮುಂದುಗಡೆ ಇದೆ. ಮತ್ತೆ ಕಬ್ಬನ್‌ಪಾರ್ಕ್ ಸುತ್ತಾಡೋಣ. ಬಣ್ಣಬಣ್ಣದ ನೀರ ಕಾರಂಜಿ ಪ್ರತಿ ಭಾನುವಾರ ಇಲ್ಲಿ ಉದಯಿಸುತ್ತದೆ. ಏನಾದರೂ ಸಂತೋಷ ಕೂಟ ಇರುತ್ತದೆ. ಇಂಥ ಹಸುರು ನೆಲ ತಂಪು ಗಾಳಿಯಾದರೂ ಎಲ್ಲಿ ಸಿಕ್ಕೀತು?

ಹಾಗೆಂದು ಇಲ್ಲಿ, ರಾತ್ರಿ ವಿಶ್ರಮಿಸುವ ಹಾಗಿಲ್ಲ. ಪಾಕೆಟ್‌ಚೌರ್ಯಕ್ಕಾಗಿ ಪ್ರಾಣಘಾತಕ್ಕೆ ಹೇಸದವರೂ ಇಲ್ಲಿದ್ದಾರೆ. ದಂಡಿನ ಪ್ರದೇಶದಲ್ಲಿ ಹೊತ್ತು ಮುಳುಗುವುದರೊಳಗೆಯೇ ತಮ್ಮ ಸಂಗಾತಿಗಳಾದ ನಾಯಿಗಳೊಡನೆ ತಿರುಗಾಡಿ ಪೇಟೆಯ ವ್ಯವಹಾರ ಮಾಡಿಬರುವ ಬಿಳಿಯ ಅಪ್ಸರೆಯರನ್ನು ದೂರದಿಂದ ನೋಡಿ ತೃಪ್ತರಾಗಿ. ರಾತ್ರಿಯಾಯಿತೆಂದರೆ ಚಿಕಾಗೋ ಮುಂತಾದ ಅಮೇರಿಕೆಯ ನಗರಗಳಲ್ಲಿಯೂ ನಡೆಯದಂಥ ಭೀಕರ ಕೊಲೆ ಸುಲಿಗೆಗಳು ಇಲ್ಲಿ ನಡೆಯುವ ದುಂಟು. ಈ ಕೊಲೆಗಾರರ ಕೌಶಲ ಎಷ್ಟು ಬೆಳೆದಿದೆಯೆನ್ನುತ್ತೀರಾ? ಸ್ಕಾಟ್ಲೆಂಡ್ ಯಾರ್ಡಿನವರು ಕೂಡ ಇಲ್ಲಿ ನಡೆದ ಡ್ರೇಟನ್ ಕೊಲೆಯನ್ನು ಪತ್ತೆ ಮಾಡಲಾರದೆ ಹೋದರು.

ಸಿಟಿಗೆ ಬರೋಣ, ಕಸ್ತೂರಬಾ ರಸ್ತೆಯಲ್ಲಿ

ನಡೆದು—ಕೆಂಪೇಗೌಡ ರಸ್ತೆಗೆ ಸೇರಿ. ಕೆಂಪೇಗೌಡ ಟಾಕೀಸಿನ ಬಳಿ ಬರುತ್ತಿದ್ದೇವಲ್ಲ. ಇಲ್ಲೇ ಎಡಕ್ಕೆ ತಿರುಗಿ ಅವೆನ್ಯೂ ರಸ್ತೆಗೆ ಸೇರೋಣ ಅಥವಾ ಬಲಕ್ಕೆ ಇಳಿದು ಗಾಂಧೀ ನಗರ ನೋಡೋಣವೆ? ಪಕ್ಕದ ಕಟ್ಟಡವೇ? ಅದು ಲಾ ಕಾಲೇಜು, ಅದರ ಎದುರಿಗೆ ಸೆಂಟ್ರಲ್ ಕಾಲೇಜು ಇಲ್ಲಿಂದ ಹೆಚ್ಚು ದೂರವಾಗದ ಹೊಸೂರಿನಲ್ಲಿ ಹುಟ್ಟಿದ ಚಕ್ರವರ್ತಿ ರಾಜಗೋಪಾಲ ಆಚಾರ್ಯರು ಓದಿದ್ದು ಇಲ್ಲಿಯೆ.

ಗಾಂಧೀ ನಗರವೇ? ಇದು ಹೆಸರಿಗಷ್ಟೇ ಗಾಂಧೀ ನಗರ—ಗಾಂಧೀಜಿಯ ನಾಡಿನ ಗುಜರಾತಿಗಳು ಇಲ್ಲಿ ಹೆಚ್ಚಾಗಿದ್ದಾರೆ ಅಷ್ಟೆ. ಇಷ್ಟು ಸುಂದರವಾದ ಈ ಪ್ರದೇಶದಲ್ಲಿ ಮೊನ್ನೆ ಮೊನ್ನೆ ಒಂದು ರಾತ್ರಿ ಮುದುಕರು—ಬಿಳ್ಳೆಗಳು ಸಹಿತ ಒಂದು ಮನೆಯ ಆರು ಜನರ ಕೊಲೆ ಆಯಿತೆಂದರೆ ನಿಮಗೆ ರೋಮಾಂಚವಾಗದೆ? ಪಕ್ಕಕ್ಕೆ ಕುದುರೆ ಜೂಜಿನ ಮೈದಾನ ಏರ್ಪಡಿಸಿಕೊಂಡಿದ್ದಾರೆ.

ಸಾಕೆಂದರೆ ದಕ್ಷಿಣಕ್ಕೆ ನಡೆದುಬಿಡೋಣ. ಬಸವನಗುಡಿಯ ಪಕ್ಕದ ಬ್ಯೂಗಲ್ ರಾಕಿನ ಮೇಲೆ ಕುಳಿತು ವಿಶ್ರಮಿಸೋಣ. ಬಸವನಗುಡಿ, ಶಂಕರಮಠ, ಚಾಮರಾಜಪೇಟೆ, ನಗರದ ಹಸಿರಿನಲ್ಲಿ ನಮ್ಮ ಕಣ್ಣು ಅಡ್ಡಾಡಿ ಬರುತ್ತದೆ. ರಸ್ತೆಯ ಮನೆಗಳ ಸುತ್ತಮುತ್ತ ಇರುವ ಮರಗಳು ತಂಪೂ ಕೊಡುತ್ತವೆ.

ನಿಮಗೆ ತರಕಾರಿ ಬೇಕೇನೋ ಸಿಟಿ ಮಾರ್ಕೆಟ್ಟಿಗೆ ನಡೆದರಾಯಿತು. ಆಗಲೆ "ಅವರೇ ಕಾಯಿ, ನಗರ ಬೆಂಗಳೂರೆಂ"ಬ ಹೆಸರಿನ ಅರ್ಥ ತಿಳಿಯುತ್ತದೆ! ಸಿಟಿ ಬಸ್ಸು ನಿಲ್ದಾಣವೂ ಅಲ್ಲಿಯೆ. ಮಾರ್ಕೆಟ್ಟಿನ ಹೊರಗಡೆಯೇ ಕೆಸರು ರಸ್ತೆಯ ಪಕ್ಕದಲ್ಲಿಯೇ ಇಡ್ಲಿ ತಯಾರುಮಾಡಿ ಮಾರುವದರಿಂದ ತೊಡಗಿ ಚಿಕ್ಕ-ಪುಟ್ಟ ಸಾಮಾನುಗಳನ್ನು ಹೊತ್ತು ಮಾರುವವರು ಕೂಡ ನಮ್ಮನ್ನು ಸುತ್ತುವರಿಯುತ್ತಾರೆ. ವಾಣೀವಿಲಾಸ ಹೆರಿಗೆ ಆಸ್ಪತ್ರೆ, ವಿಕ್ಟೋರಿಯಾ ಆಸ್ಪತ್ರೆ ಇವೇ ದೊಡ್ಡ ಕಟ್ಟಡಗಳು. ಅದುವೆ? ಅದು ಬೆಂಗಳೂರಿನ ಕೋಟೆ. ಒಳಗೆ ಆಂಜನೇಯನ ಗುಡಿ. ಈ ಭಗ್ನಾವಶೇಷವೇ ಈ ನಗರದ ಇತಿಹಾಸವೂ ಹೌದು.

ಕ್ರಿ. ಶ. ೪೦೦ ಕಾಲದ ನಂದವಂಶದ ವಿಜಯ



ವಿಧಾನ ಸೌಧ

ಪಾಲನ ಆಳಿಕೆಗೆ ಬೆಂಗಳೂರು ಸೇರಿತ್ತು. ಆನಂತರ ರಾಷ್ಟ್ರಕೂಟರು, ಗಂಗರು, ಚೋಳರು, ಯಾದವರು, ಹೊಯ್ಸಳರು, ಹಲವು ವಂಶಗಳು ಆಳಿದವು. ಗಂಗರ ಶ್ರೀಪುರುಷನ ರಾಜಧಾನಿ ಇಲ್ಲಿಂದ ೧೬ ಮೈಲು ದೂರದ ನೆಲಮಂಗಲ. ಆದರೆ ಇಷ್ಟು ಭವ್ಯವಾದ ಬೆಂಗಳೂರು ನಗರ ಕಟ್ಟಿಸಿದವನು ಕಾಂಜೀವರದಿಂದ ಇಲ್ಲಿಗೆ ಬಂದ ರಣ ಬೈರೇಗೌಡನ ವಂಶಕ್ಕೆ ಸೇರಿದ ಕೆಂಪೇಗೌಡ. (ಇವನ ಹೆಸರಲ್ಲಿ ಇಂದು ಒಂದು ಹೆದ್ದಾರಿ, ಒಂದು ಸರ್ಕಲ್ ಮಾತ್ರ ಉಳಿದಿವೆ). ಯಲಹಂಕದ ಒಡೆಯನಾದ ಈತ ಎತ್ತರವಾದ ಈ ಪ್ರದೇಶದಲ್ಲಿ ವಿಜಯನಗರದ ಅಚ್ಯುತರಾಯನ ಅನುಮತಿ ಪಡೆದು ಕೋಟೆ ಕೊತ್ತಲಗಳನ್ನು ಕಟ್ಟಿಸಿ ೧೫೩೭ ರಲ್ಲಿ ನಗರ ನಿರ್ಮಾಣ ಮಾಡಿದನಾದರೂ ಇಲ್ಲಿಗೆ ಬೆಂಗಳೂರು ಹೆಸರು ಹದಿಮೂರನೇ ಶತಮಾನದಲ್ಲಿ ಅಂಟಿಕೊಂಡಿತಂತೆ. ಹೊಯ್ಸಳ ವೀರ ಬಲ್ಲಾಳ ಒಮ್ಮೆ ಬೇಟೆಯಾಡುತ್ತ ಈ ಕಡೆಗೆ ಬಂದಾಗ ಹೆಬ್ಬಾಳಿನ ಸಮೀಪದ ಕೊಡಿಗೇನ ಹಳ್ಳಿ (ವೀಳ್ಯದೆಲೆಗೆ ಕೊಡಿಗೇನಹಳ್ಳಿ ಪ್ರಸಿದ್ಧ) ಯಲ್ಲಿ ಹಸಿವನ್ನು ತಾಳಲಾರದೆ ಹೋದ. ಅಲ್ಲಿ ವಾಸಿಸುತ್ತಿದ್ದ ಮುದುಕಿಯೊಬ್ಬಳು ಕನಿಕರ ತಾಳಿ ಆತನಿಗೆ ಬೆಂದಕಾಳು ಉಣಲಿತ್ತುದೇ ಊರಿಗೆ ಬೆಂದಕಾಳೂರೆಂಬ ಹೆಸರನ್ನು ತಂದಿತು. ಬೆಂದಕಾಳೂರು ಬೆಂಗಾಳೂರಾಗಿ ಬೆಂಗಳೂರಾಯಿತು. ನಂಬದಿದ್ದರೆ ಬಿಡಿ. ಇದು ಜನರಾಡುವ ಕಥೆ

ಆದರೆ ಇಂದು ನಾವು ನೋಡುವ ಬೆಂಗಳೂರು ಕೆಂಪೇಗೌಡನ ಬೆಂಗಳೂರಿಗಿಂತ ದೊಡ್ಡದು. ಕೆಂಪೇಗೌಡ, ಕಾಣದೇ ಇದ್ದ ಕನಸುಗಳೇ ಇಲ್ಲಿ ನನಸಾಗಿವೆ. ಟೆಲಿಫೋನು ಕಾರ್ಖಾನೆ, ವಿಮಾನ ಕಾರ್ಖಾನೆ, ಯಂತ್ರೋಪಕರಣಗಳ ಕಾರ್ಖಾನೆ, ಸೇನಾಶಿಬಿರ ಎಂದು ಹಲವಾರು ಅಭಿವೃದ್ಧಿಗಳಾಗಿ ನಗರ ಬೆಳೆಯುತ್ತಲೇ ಇದೆ. ದಿನದಿನಕ್ಕೆ ನಗರದ ಜನಸಂಖ್ಯೆ ಹೆಚ್ಚುತ್ತಿದೆ.

ಮೈಸೂರು ವಿಸ್ತಾರವಾದ ಮೇಲೆ ರಾಜಾಜಿ

## ರಾಜಧಾನಿಯ ಹಕ್ಕಿ ನೋಟ

ಆರೋಗ್ಯಕರವಾದ ಈ ನಗರವು ಸಮುದ್ರ ಮಟ್ಟದಿಂದ ೩,೦೦೦ ಅಡಿ ಎತ್ತರದಲ್ಲಿದೆ.

೧೫೩೭ ರಲ್ಲಿ ನಗರದ ಸ್ಥಾಪನೆಯಾಯಿತು.

೧೭೯೧ ರಲ್ಲಿ ಬ್ರಿಟಿಶರ ಕೈಗೆ ನಗರದ ಆಡಳಿತ ಸೇರಿತು.

೧೯೫೧ ರ ಜನಗಣನೆಯಂತೆ ನಗರದ ಜನಸಂಖ್ಯೆ ೭,೭೮,೯೭೭. (೧೯೩೧ ರಲ್ಲಿ ೩,೦೬,೪೭೦).

| | |
|---|---|
| ಗಂಡಸರು | ೪,೧೩,೬೮೭ |
| ಹೆಂಗಸರು | ೩,೬೫,೨೯೦ |

ಭಾಷಾ ದೃಷ್ಟಿಯಿಂದ

| | |
|---|---|
| ತಮಿಳರು | ೨,೪೬,೮೪೧ |
| ಕನ್ನಡಿಗರು | ೧,೮೪,೯೭೭ |
| ತೆಲುಗರು | ೧,೩೮,೬೧೧ |

ಅಲ್ಲದೆ ಹಿಂದೀ ಹಿಂದೂಸ್ತಾನಿ ಮರಾಠಿ ಮಲೆಯಾಳ ಕೊಂಕಣಿ ಮುಂತಾದ ಭಾಷೆಗಳನ್ನಾಡುವವರ ಸಂಖ್ಯೆಯು ನಗರದಲ್ಲಿ ಸಾಕಾದಷ್ಟಿದೆ.

ನಗರದಲ್ಲಿ ೧೯೫೧ ರಲ್ಲಿ ೪೩.೩% ಅಕ್ಷರಸ್ಥರಿದ್ದರು. ಈಗ ಮೂವರು ಹೆಂಗುಸರಲ್ಲಿ ಒಬ್ಬಾಕೆಗೆ ಓದಲು ಬರುವುದು.

ನಗರದಲ್ಲಿ ಪುರುಷರಿಗಿಂತ ಸ್ತ್ರೀಯರ ಸಂಖ್ಯೆ ಕಡಿಮೆ ಇದೆ. ಸಾವಿರ ಪುರುಷರಿಗೆ ೮೮೫ ಸ್ತ್ರೀಯರು ಇಲ್ಲಿರುವರು. ನಗರದ ವಿಸ್ತಾರ ೨೬ ಚದರ ಮೈಲು.

ನಗರದ ಸ್ಥಳವೂ ಸಾಲದು; ಜಯನಗರದ ವಿಸ್ತರಣೆಯೂ ಸಾಲದು. ವಿಲ್ಸನ್ ಗಾರ್ಡನ್ನಿನ

ಸ್ಮಶಾನವನ್ನು ಶಾಂತಿ ನಗರವೆಂದು (ಸ್ಮಶಾನದ ಮೇಲೆದ್ದ ಬಡಾವಣೆಗೆ ಯೋಗ್ಯ ಹೆಸರು!) ವಿಸ್ತರಿಸಿದರೂ ಮತ್ತೂ ಮನೆಗಳು ಸಾಲವು. ಕನ್ನಡದ ರಾಜಧಾನಿ ಎಂದರೆ ಸುಮ್ಮನಾಗುತ್ತಯೇ?

ನಡೆಯೋಣ ಏಳಿ, ಸಿಲ್ವರ ಜುಬಿಲಿ ಪಾರ್ಕ್ ರಸ್ತೆಯಲ್ಲಿ ಪುರಭವನದ ತನಕ. ಮೇಲುಗಡೆ ಕಾರ್ಪೊರೇಶನ್ ಭವನ. ಬಲಕ್ಕೆ ಕೆಳಗಡೆ ಹೋಗೋಣ ನಾವು. "ಕೆಂಪು—ತೋಟಕೆ ಬನ್ನಿ ವಿಶ್ರಾಂತಿಗೆ'' ಎಂದು ವೀ.ಸೀ. ಹಾಡು ಅಲ್ಲಿ ಕರೆಯುತ್ತಿದೆ. ಲಾಲಬಾಗಿನಲ್ಲಿ ಅಷ್ಟು ವಿಶ್ರಾಂತಿ ತೆಗೆದುಕೊಳ್ಳೋಣ.

ಹೈದರ ಟಿಪ್ಪುಗಳ ಕಾಲದ ಆ ಎದುರಿನ ಮರಗಳು ನಮ್ಮನ್ನು ಕೈಮಾಡಿ ಕರೆಯುತ್ತವೆ ನಾಲ್ಕನೇ ನಂಬರಿನ ಬಸ್ಸು ರೂಟಿನಲ್ಲಿ ಹೋಗಿಬಿಡೋಣ—ಎಂಥ ಪ್ರಶಾಂತ ವಾತಾವರಣ ಲಾಲಬಾಗ್! ನಿಜವಾಗಿಯೂ ಇದು ಕೆಂಪು—ರಕ್ತ ತೋಟ. ಇಲ್ಲಿ ವಿಶ್ರಾಂತಿಯೂ ದೊರೆಯುತ್ತದೆ. ಮನಸ್ಸು ಪರವಶವೂ ಆಗುತ್ತದೆ, ಹಗಲು ಕನಸುಗಳಿಂದ.

ಒಂದು ವರ್ಷ ಹಿಂದೆ ಕೆಂಪು ರಶಿಯದ ಕೆಂಪು ನಾಯಕರಾದ ಕ್ರುಶ್ಚೇವ, ಬುಲ್ಗಾನಿನ್ನರು ಇಲ್ಲಿಗೆ ಬಂದಾಗ ಬಣ್ಣಬಣ್ಣದ ಬಲ್ಬುಗಳಿಂದ ಸಿಂಗಾರವಾಗಿತ್ತು ಕೆಂಪು ಪಾರ್ಕು. ಒಂದು ದಿನ ಸಂಜೆ ದೀಪ ಆರಿದಾಗ ಇಲ್ಲಿ ನೆರೆದಿದ್ದ ಹೆಂಗಸರು ಮಕ್ಕಳ ಮೇಲೆ ಪುಂಡರು ದಾಳಿ ಮಾಡಿ ಪಶುಗಳಂತೆ ವರ್ತಿಸಿದರು!

ಈಗ ಈ ನಗರದ ರಹಸ್ಯ ನಿಮಗೆ ಗೊತ್ತಾಗಿರಬೇಕು. ಇಲ್ಲಿ ಸಂಪತ್ತನ್ನು ಪ್ರದರ್ಶಿಸುವ ಉತ್ಕಟೇಚ್ಛೆಯಿದೆ; ಅದನ್ನು ಕಸಿಯಲು ಹಸಿದ ಜೀವಗಳು ಹೊಂಚು ಹಾಕುತ್ತಲೇ ಇವೆ.

ಈ ನಗರ ಇಷ್ಟು ವಿಸ್ತಾರವಾಗಲು ಕಾರಣರಾದ ದಿವಾನ ಮಿರ್ಜಾ ಇಸ್ಮಾಯಿಲರ ಮೇಲೆ ವಿರೋಧಿಗಳ ಆರೋಪವಾದರೂ ಅದೇ ಇತ್ತು: ಮಾದರಿ ಮೈಸೂರಿನ ಆಡಂಬರ ಪ್ರದರ್ಶನಕ್ಕಾಗಿ ಬೆಂಗಳೂರಲ್ಲಿ ಹಣ ಚೆಲ್ಲುತ್ತಾರೆ, ಹಳ್ಳಿಗಳನ್ನು ಅಲಕ್ಷಿಸುತ್ತಾರೆಂದು. ಆದರೆ ಕನ್ನಡದ ಮಟ್ಟಿಗೆ ಮಿರ್ಜಾರ ಕೆಲಸ ಕೆಟ್ಟದಾಗಲಿಲ್ಲ. ಅಗತ್ಯವಾದ ರಾಜಧಾನಿಯೊಂದು ನಿರ್ಮಾಣವಾದಂತಾಯಿತು ಅದರಿಂದ. ಬೆಂಗಳೂರು ಬೆಳೆಯಲು ಧರ್ಮಪ್ರಕಾಶರೂ ಪ್ರವರ್ತಕರೂ ಕೀರ್ತಿಯ ಆಸೆಯಿಂದ ಕಟ್ಟಿಸಿದ ಭವನಗಳು ಸಹಾಯವಾಗಿವೆ ಎಂಬುದನ್ನೂ ಮರೆಯಲಾಗುವುದಿಲ್ಲ.

ಹೀಗೆಂದು ನಗರದ ಸಂಸ್ಕೃತಿಗೆ ಕುಂದಿಲ್ಲ. ಕನ್ನಡದ ಅಭಿಮಾನಿಗಳು ಕಡಮೆಯಾದರೂ ಕನ್ನಡ ಪುಸ್ತಕ ಪ್ರಕಟವಾಗುವುದು ಇಲ್ಲಿಂದಲೇ ಹೆಚ್ಚು. ಕರ್ನಾಟಕ ಸಂಗೀತದ ಗುಂಜಾರವವಂತೂ ಎಂದೂ ನಿಮ್ಮ ಕಿವಿ ತುಂಬಿರುವುದು. ರಾಮನವಮಿಯೋ ತ್ಯಾಗರಾಜ ಆರಾಧನೆಯೋ ಮೊದಲಾಯಿತೆಂದರೆ ನೀವು ಹಗಲಿರುಳು ಸಂಗೀತ ಕಚೇರಿಯ ಜೋಗುಳದಲ್ಲಿಯೇ ಮೈಮರೆಯುತ್ತೀರಿ.

ಏಳಿ ಇನ್ನು ಹೊತ್ತಾಯಿತು. ಹೊತ್ತಿಗೆ ಮುಂಚೆ ಮನೆಗೆ ತಲಪುವುದು ಎಲ್ಲದಕ್ಕೂ ಮುಖ್ಯ. ಒಟ್ಟಿನಲ್ಲಿ ಈ ನಗರ ಸಾಗರದಲ್ಲಿ ನೀವು ಈಸಬೇಕಾದರೆ ಮೊದಲು ರಟ್ಟೆಯ ಬಲ ಬೆಳೆಸಿಕೊಳ್ಳಿ.



ಸಮುದ್ರಗರ್ಭದಲ್ಲಿ ಆಶ್ಚರ್ಯಕರವಾದ ಸಂಪತ್ತು ಹುದುಗಿದೆ

# ವರುಣ ದೇವನ ಕುಬೇರನಿಧಿ

ಸಾಗರಗಳು ವಿಶ್ವದ ಮಹಾ ಖನಿಜಭಂಡಾರಗಳಾಗಿವೆ ಸಮುದ್ರದ ಪ್ರತಿ ಘನಮೈಲಿಗೂ ಹದಿನಾರು ಕೋಟಿ ಮೂವತ್ತು ಲಕ್ಷ ಟನ್ ಲವಣವು ಕರಗಿರುತ್ತದೆ. ಇಷ್ಟೇ ಅಲ್ಲದೆ, 'ಮೆಗ್ನಿ ಷಿಯಂ', 'ಅಯೋಡೀನ್', 'ಬ್ರೋಮೀನ್' ಮತ್ತು ಬಂಗಾ ರವೇ ಮೊದಲಾದ ಅನೇಕ ಅಮೂಲ್ಯ ಖನಿಜಗಳು ಇರುತ್ತವೆ.

ಸುಮಾರು ಕ್ರಿ. ಪೂ. ೩೩೦ ರಲ್ಲಿ ಪ್ರಾಚೀನ ಚೀನದ ಉಲ್ಲೇ ಗಳಲ್ಲಿ ಸಮುದ್ರದ ನೀರಿನಿಂದ ಉಪ್ಪನ್ನು ತಯಾರಿಸುವ ವರ್ಣ ದೊರೆಯುತ್ತದೆ. ಪ್ರಾಚೀನ ಭಾರತ, ಗ್ರೀಸ್, ರೋಮನ್ ಹಾಗ ಇಜಿಪ್ತ ದೇಶದ ಜನರಿಗೆ ಸಾಗರದ ನೀರನ್ನು ಆವಿಮಾಡಿ ಉಪ್ಪನ ಪಡೆಯುವ ವಿಧಾನ ಪರಿಚಿತವಾಗಿತ್ತು. ಕ್ರಿ. ಶ. ೧೭೨೦ ರಲ್ಲಿ ಸ್ಕಾಟ್ಲೆಂ ನಲ್ಲಿ ಸಮುದ್ರದ ಜೊಂಡಿನ ಭಸ್ಮದಿಂದ 'ಸೋಡಾ' ಮತ 'ಪೊಟಾಷ್' ರಾಸಾಯನಿಕಗಳನ್ನು ತಯಾರಿಸಲಾಗುತ್ತಿತ್ತೆಂ ಟೆಕ್ಸಾಸ್‌ನಲ್ಲಿರುವ 'ಡೋವ್ ಕೆಮಿಕಲ್ ಕಂಪನಿ'ಯ ಶ್ರೀ ಸಿ. ಎ ಶಿಗಲಿಯವರ ಹೇಳಿಕೆಯಿಂದ ವ್ಯಕ್ತವಾಗುತ್ತದೆ.

ಮುಂಬಯಿಯ ಹಿಂದೀ 'ನವನೀತ'ದಿಂದ ; ಅನುವಾದ : 'ಚಂದು'

ಹಲವು ಶತಮಾನಗಳವರೆಗೆ ಸೂರ್ಯನ ಶಾಖದಿಂದಲೇ ನೀರನ್ನು ಆವಿ ಮಾಡಿ ಸಮುದ್ರದ ಖನಿಜಗಳನ್ನು ಪಡೆಯಲಾಗುತ್ತಿತ್ತು. ಆದರೆ, ವಿಜ್ಞಾನ ಪ್ರಗತಿಪಥದಲ್ಲಿ ಹೆಜ್ಜೆಯಿಟ್ಟಾಗಿನಿಂದ, ಈ ಖನಿಜ ಉತ್ಪತ್ತಿಗೆ ಹೆಚ್ಚು ಸರಳವಾದ ವಿಧಾನಗಳು ಯೋಜಿಸಲ್ಪಟ್ಟವು.

ಭೂಮಿಯಲ್ಲಿರುವಂತೆಯೇ ಸಾಗರದ ಗರ್ಭದಲ್ಲಿಯೂ ದಟ್ಟವಾದ ಕಾಡುಗಳು, ಮರುಭೂಮಿಗಳು ಮತ್ತು ಪರ್ವತಗಳು ಇವೆಯೆಂದು ಇತ್ತೀಚಿನ ಅನ್ವೇಷಣೆಗಳಿಂದ ತಿಳಿದುಬಂದಿದೆ. ಕ್ಯಾಲಿಫೋರ್ನಿಯ ಕೊಲ್ಲಿಯ ಸಮೀಪದ ಪೆಸಿಫಿಕ್ ಸಾಗರದಲ್ಲಿ 'ಕೆಲ್ಪ್' ಎಂಬ ವೃಕ್ಷದ ಭಯಾನಕ ವನವಿದೆ. ಈ 'ಕೆಲ್ಪ್' ವೃಕ್ಷದ ಕೊಂಬೆಗಳು ೪೦೦ ಅಡಿ ಉದ್ದ ಇವೆ— ಎಂದರೆ ಕುತುಬ್ ಮಿನಾರಿನ ಎರಡರಷ್ಟು ಎತ್ತರ. ಎತ್ತರಕ್ಕೆ ಪ್ರಸಿದ್ಧಿಯಾದ "ಸಕ್ಯೋಸ." ವೃಕ್ಷಗಳೂ ಇಷ್ಟು ಎತ್ತರವಿರುವುದಿಲ್ಲ! ಈ ವೃಕ್ಷಗಳ ಮತ್ತೊಂದು ವಿಚಿತ್ರವನ್ನು ಕೇಳಿ: 'ಕೆಲ್ಪ್' ಮರದ ಕೊಂಬೆಗಳು ಅನಿಲದಿಂದ ತುಂಬಿರುತ್ತವೆ. ಇದರಿಂದಾಗಿ ಅವು ನೀರಿನಲ್ಲಿ ತೇಲಾಡುವುದಲ್ಲದೆ ಸಮುದ್ರದ ಅಲೆಗಳ ಭಯಂಕರ ಬಡಿತವನ್ನು ಸಹಿಸಿಕೊಳ್ಳುತ್ತವೆ. ಈ ಅಲೆಗಳ ಬಡಿತದ ಶಕ್ತಿ, ಪ್ರತಿ ಚದರ ಅಂಗುಲಕ್ಕೂ ೧೬೫ ಮಣಗಳಷ್ಟು! ಒಂದು ದೃಷ್ಟಿಯಲ್ಲಿ, ಈ ವೃಕ್ಷಗಳು ಅತ್ಯಂತ ಉಪಕಾರಿಗಳೆಂದು ಭಾವಿಸಲಾಗಿದೆ. ಈ 'ಕೆಲ್ಪ್' ಮರದ ಶಾಖೆಯಲ್ಲಿ 'ಅಯೋಡಿನ್' ಎಂಬ ವೈದ್ಯಕೀಯ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಪ್ರಮುಖವಾದ ಖನಿಜ ದೊರಕುತ್ತದೆ.

ವಿಜ್ಞಾನಿಗಳ ಅಭಿಪ್ರಾಯದಲ್ಲಿ ಸಮುದ್ರದ ತಳ ಕಲ್ಲಿದ್ದಲಿನ ಅಕ್ಷಯ ಭಂಡಾರ. ಕಾಲಾಂತರದಲ್ಲಿ ಸಮುದ್ರದ ಕಾಡುಗಳು ಕಲ್ಲಿದ್ದಲಾಗಿ ಮಾರ್ಪಡುತ್ತವೆ. ಈ ಹೇಳಿಕೆ ಭೂಮಿಗೂ ಅನ್ವಯಿಸುತ್ತದೆ. ಇಂದು ಎಲ್ಲೆಲ್ಲಿ ಕಲ್ಲಿದ್ದಲಿನ ಗಣಿಗಳಿವೆಯೋ ಅಲ್ಲಿ ಒಂದಾನೊಂದು ಕಾಲದಲ್ಲಿ ದಟ್ಟವಾದ ಕಾಡುಗಳು ಇದ್ದಿರಬೇಕು.

ದ್ವಿತೀಯ ಮಹಾಯುದ್ಧದ ಸಮಯದಲ್ಲಿ, ವಿಜ್ಞಾನಿಗಳು ಹಾಗೂ ಇಂಜನಿಯರುಗಳು ಉತ್ಕೃಷ್ಟವರ್ಗದ ಪೆಟ್ರೋಲಿಗೆ '[illegible]' ಲವಣ ಅವಶ್ಯಕವೆಂದು ಅಭಿಪ್ರಾಯಪಟ್ಟರು. ಬ್ರೋಮೀನನ್ನು ಸಮುದ್ರದಿಂದಲೇ [illegible] ಬಹುದು. ವಿಶ್ವದಲ್ಲಿರುವ ಬ್ರೋಮೀನ್ ಖನಿಜದಲ್ಲಿ ಸೇಕಡಾ ೯೯ ಭಾಗ ಸಮುದ್ರದಿಂದ ದೊರಕುತ್ತದೆ. ಇತ್ತೀಚಿನವರೆಗೆ ಈ ಲವಣವನ್ನು ಸಮುದ್ರದಿಂದ ಪಡೆಯುವ ರೀತಿ ಗೊತ್ತಿರಲಿಲ್ಲ. ಆರಂಭದಲ್ಲಿ, 'ಬ್ರೋಮೀನ್' ಭೂಮಿಯಲ್ಲಿ ಅಂತರ್ಗತವಾದ ಉಪ್ಪುನೀರಿನ ಕೆರೆಗಳಿಂದ ಅಥವಾ ನೀರಿನ ಝರಿಗಳಿಂದ ದೊರಕುತ್ತಿತ್ತು. ಆದರೆ ಇಂದು ಅದು ಸಂಪೂರ್ಣ ಕುಬೇರ ಕೋಶದ ಒಂದು ಅಂಶ ಮಾತ್ರ!

ಈ ಉದ್ಯಮದಲ್ಲಿ ೧೯೩೩ ನೆಯ ಇಸವಿ ಒಂದು ಮಹತ್ವಪೂರ್ಣ ವರ್ಷ. ಆ ಸಂವತ್ಸರದಲ್ಲಿ ಸಾಗರದ ನೀರಿನಿಂದ ನೇರವಾಗಿ ಬ್ರೋಮೀನನ್ನು ತಯಾರಿಸಲು ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಇದು ಉತ್ತರ ಕೆರೋಲಿನಾದ ಸಮುದ್ರದ ದಂಡೆಯ ಮೇಲಿದೆ. ಇದಕ್ಕೆ ಪೂರ್ವದಲ್ಲಿ, ಸಣ್ಣ ಪ್ರಮಾಣದಲ್ಲಿ ನೀರನ್ನು ಆವಿಮಾಡಿ ಉಪ್ಪನ್ನು ಪಡೆಯುತ್ತಿದ್ದರು. ಆದರೆ ಈಗಿನ ಪದ್ಧತಿ ಬೇರೆಯಾಗಿದೆ. ಈಗ ಸಾಕಷ್ಟು ಪ್ರಮಾಣದಲ್ಲಿ ನೀರಿನಿಂದ 'ಬ್ರೋಮೀನ್' ಅನಿಲವನ್ನು ತಯಾರಿಸಿ ಅದರಿಂದ ಬ್ರೋಮೀನನ್ನು ಹರಳುಗಳಾಗಿ ಪರಿವರ್ತಿಸುತ್ತಾರೆ. [illegible] ಯುದ್ಧದಲ್ಲಿ ಪೆಟ್ರೋಲಿನ ಅವಶ್ಯಕತೆ [illegible] [illegible] ಅನೇಕ ಕಾರ್ಖಾನೆಗಳು [illegible] ದಲ್ಲಿ ಆಸಕ್ತಿಗೊಂಡವು. [illegible] ರಲ್ಲಿಯೇ ಬ್ರೋಮೀನಿನ ಉತ್ಪತ್ತಿಯಲ್ಲಿ [illegible] ಕೋಟಿ ಟನ್‌ಗಳ ಆಶ್ಚರ್ಯಕಾರಕ ವೃದ್ಧಿ ಫಲಿಸಿತು.

೧೯೪೧ ರಲ್ಲಿ ಸಮುದ್ರದಿಂದ [illegible] ಮಾಡುವುದರಲ್ಲಿ ಮತ್ತೊಂದು [illegible] ಕಾರ್ಯ ಸಫಲವಾಯಿತು. [illegible]— [illegible]

ಸುವುದು. ನೀರಿನಿಂದ ‘ಮೆಗ್ನೀಶಿಯಂ ಹೈಡ್ರಾಕ್ಸೈಡ್’ ತಯಾರಿಸುವ ವಿಧಾನಗಳು ಉತ್ತಮಗೊಂಡುದರಿಂದ ‘ಮೆಗ್ನೀಶಿಯಂ’ ಉತ್ಪತ್ತಿ ಆರಂಭವಾಯಿತು; ಈ ಉತ್ಪತ್ತಿ ಉಪಯುಕ್ತವಾಗಿದೆ; ಅತ್ಯಂತ ಹಗುರುತನ ಇದರ ವೈಶಿಷ್ಟ್ಯ. ಇಂದು ಔದ್ಯೋಗಿಕ ಪ್ರಪಂಚದಲ್ಲಿ ‘ಮೆಗ್ನೀಶಿಯಂ’ ಅನೇಕ ಕಾರ್ಯಗಳಿಗೆ ಉಪಯೋಗಿಸಲ್ಪಡುತ್ತಿದೆ. ‘ಸ್ಟೇನ್‌ಲೆಸ್ ಸ್ಟೀಲ್’ (ತುಕ್ಕು ಹಿಡಿಯದ ಉಕ್ಕು) ನಂತೆಯೇ ಇದಕ್ಕೂ ತುಕ್ಕು ಹಿಡಿಯುವುದಿಲ್ಲ.

ಇಂದು ಅಮೇರಿಕದಲ್ಲಿ ಸುಮಾರು ಸೇಕಡಾ ೧೦ ರಷ್ಟು ಮೆಗ್ನೀಶಿಯಮ್ ಮತ್ತು ಸೇಕಡಾ ೮೦ ರಷ್ಟು ಬ್ರೋಮೀನನ್ನು ನೀರಿನಿಂದಲೇ ತೆಗೆಯಲಾಗುತ್ತಿದೆ. ಇನ್ನು ಮುಂದೆ ಸಮುದ್ರದಿಂದ ಇತರ ಲೋಹಗಳನ್ನೂ ತೆಗೆಯಬಹುದೆಂದು ಇದು ಸೂಚಿಸುವುದೆಂದು ವಿಜ್ಞಾನಿಗಳು ತಿಳಿದಿದ್ದಾರೆ. ಪ್ರಯೋಗಸಿದ್ಧಿಯ ಮತ್ತೊಂದು ವಿಷಯವನ್ನು ಕೇಳಿ; ರಕ್ತದ ಮತ್ತು ಸಮುದ್ರ ನೀರಿನ ತುಲನಾತ್ಮಕ ಪ್ರಯೋಗಗಳಿಂದ, ರಕ್ತದಲ್ಲಿರುವ ಅನೇಕ ರಾಸಾಯನಿಕಗಳು ಸಮುದ್ರದ ನೀರಿನಲ್ಲಿಯೂ ಇವೆಯೆಂದು ವಿಜ್ಞಾನಿಗಳು ಸಾಧಿಸಿದ್ದಾರೆ. ಈಗ ಸಮುದ್ರದ ನೀರಿನಿಂದ ಕೃತಕ ರಕ್ತವನ್ನು ತಯಾರಿಸುವುದರ ಸಾಧ್ಯಾಸಾಧ್ಯತೆಯನ್ನು ಪರಿಶೋಧಿಸಲಾಗುತ್ತಿದೆ. ಮನುಷ್ಯನ ನಾಡಿಗಳಲ್ಲಿ ಸಪ್ತಸಮುದ್ರದ ನೀರು ಪ್ರವಹಿಸುತ್ತವೆಂದು ಅಥರ್ವಣ ವೇದ ಹೇಳುತ್ತದಲ್ಲ.

ಸಮುದ್ರದಲ್ಲಿ, ಸೂರ್ಯನ ಬೆಳಕಿನ ಕೆಂಪು ಕಿರಣಗಳು ೨೦೦ ಅಡಿಗಳ ವರೆಗೆ, ಹಸುರು ಕಿರಣಗಳು ೧,೦೦೦ ಅಡಿಗಳ ವರೆಗೆ, ಮತ್ತು ನೀಲಿಯ ಕಿರಣಗಳು ೨,೦೦೦ ಅಡಿಗಳ ವರೆಗೆ ಪ್ರವೇಶಿಸಬಲ್ಲವೆಂದು ಫ್ರಾನ್ಸಿನ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ ಇದಕ್ಕೆ ಅನುಸಾರವಾಗಿ ‘ಅತಿ ನೇರಳೆ ಕಿರಣ’ ಗಳನ್ನು (Ultra Violet Rays) ಸಮುದ್ರದಿಂದಲೇ ಸಂಗ್ರಹಿಸಿಕೊಳ್ಳುವ ಪ್ರಯೋಗಗಳು ಸಫಲಗೊಂಡಲ್ಲಿ, ಸೂರ್ಯನ ಇತರ ಬಣ್ಣದ ಕಿರಣಗಳನ್ನು ಸಮುದ್ರದಿಂದಲೇ ಪಡೆಯಬಹುದು!

ಒಮ್ಮೆ ಜಪಾನಿ ವರ್ತಕನೊಬ್ಬನು, ಮುತ್ತುಗಳಿಗಾಗಿ ಸಮುದ್ರದ ಹಲವು ಕ್ಷೇತ್ರಗಳನ್ನು ಪರೀಕ್ಷಿಸಿದನು. ಈ ವೀಕ್ಷಣೆಯ ಪ್ರಕಾರ ಪ್ರತಿ ಚದರ ಮೈಲಿಗೂ ೧೦೦ ಕೋಟಿ ರೂಪಾಯಿ ಬೆಲೆಯ ಮುತ್ತುಗಳು ದೊರಕುತ್ತವೆಂದು ತಿಳಿದು ಬಂದಿದೆ. ಈ ಮುತ್ತುಗಳಲ್ಲದೆ, ಮಹಾಸಾಗರಗಳಲ್ಲಿ ಹವಳವೂ ದೊರೆಯುತ್ತದೆ ಸಾಗರದ ಚದರ ಮೈಲಿಯೊಂದರಲ್ಲಿ ೧೦೦ ಕೋಟಿ ರೂಪಾಯಿಗಳ ಅಗಾಧ ಭಂಡಾರವಿರುವುದಾದರೆ, ಇನ್ನು ನೆಲದ ಮೂರರಷ್ಟಿರುವ ಅಖಂಡ ಸಾಗರದ ಭಂಡಾರ ಎಷ್ಟಿರಬಹುದು!

ಸಮುದ್ರವನ್ನು ‘ರತ್ನಾಕರ’ ಎಂದು ಕರೆದವರು ಏನೂ ತಪ್ಪು ಮಾಡಿಲ್ಲ.

## ತುಂಬ ಕಷ್ಟ!

**ಈ ಜಗತ್ತಿನಲ್ಲಿ ದುರ್ದೈವದ ಸಂಗತಿಯೆಂದರೆ, ಒಳ್ಳೇ ಅಭ್ಯಾಸವನ್ನು ಬಿಟ್ಟಷ್ಟು ಸುಲಭವಾಗಿ ಕೆಟ್ಟದ್ದನ್ನು ತೊರೆಯಲು ಸಾಧ್ಯವಾಗುವುದಿಲ್ಲ.**

—ಸೋಮರಸೆಟ್ ಮೋಮ್

## ಹಿಂದುಳಿದವರು!

**ಹಿಂದುಳಿದ ದೇಶಗಳಿಗೆ ಮುಂದುವರಿದ ದೇಶದ ಮನುಷ್ಯ ಹೋದರೆ ಅವನಿಗೆ ಮೊದಲು ಒಂದು ವಿಷಯ ಎದ್ದು ಕಾಣಿಸುತ್ತದೆ: ಅಲ್ಲಿ ಮಕ್ಕಳು ಇನ್ನೂ ಹೆತ್ತವರ ಮಾತು ಕೇಳುತ್ತಿದ್ದಾರೆ.**

—ಕ್ಲಾಡ್ ಕಾಲೆನ್

# ಮೂಗಿನ ಪ್ರತಾಪ

ಕಂಪೌಂಡಿನ ಬಾಗಿಲನ್ನು ಮುಟ್ಟಿದಾಗ ಅವನು ತಿರುಗಿ ನಿಂತು ನಿರ್ಜನವಾಗಿದ್ದ ಆ ವಿಶ್ವವಿದ್ಯಾಲಯದ ಬಯಲನ್ನು ನೋಡಿದನು. ಮುಂಜಾವಿನ ಸೂರ್ಯನ ಕಿರಣಗಳು ನೆಲದ ಮೇಲೆಲ್ಲ ಪಸರಿಸಿ ಅದಕ್ಕೊಂದು ಮೆರುಗನ್ನು ಕೊಟ್ಟಿದ್ದವು.

ಆರಡಿ ಮೂರು ಅಂಗುಲ, ನೂರೆಪ್ಪತ್ತೆರಡು ರತ್ತಲು ತೂಕದ ದೇಹ ಆತನದಾದರೂ ಆ ಎತ್ತರದ, ತೆಳ್ಳನ್ನದೇಹ ಹೇಗೆ ಹೇಗೋ ಜೋಡಿಸಿದಂತಿತ್ತು. ಬಹುಶಃ ಆತನನ್ನು ನಿರ್ಮಿಸುವಾಗ ಬ್ರಹ್ಮ ಯಾವುದೋ ಅವಸರದಲ್ಲಿದ್ದಿರಬೇಕು. ಆತ ತನ್ನ ಮೈಗೆ ಬಿಗಿಯಾಗುತ್ತಿದ್ದ ಕರೇ ಬಣ್ಣದ ಚೊಣ್ಣ-ಕೋಟುಗಳನ್ನು ತೊಟ್ಟಿದ್ದನು. ಮೊಣಕೈ, ಮೊಣಕಾಲುಗಳ ಬಳಿ ಅವಕ್ಕೆ ಹಚ್ಚಿದ ತೇಪೆಗಳು ಎದ್ದು ಕಾಣುತ್ತಿದ್ದವು.

ಮತ್ತೆ ಚೊಣ್ಣ-ಕೋಟುಗಳ ತೇಪೆಗಳು ಎದ್ದು ಕಾಣುವಂತೆ ಮಾಡಿದ್ದ ಸೂರ್ಯ ಕಿರಣಗಳು ಆತನ ಮುಖದ ಮುಖ್ಯ ಅವಯವವೆಂಬಂತೆ ಕಾಣಿಸುತ್ತಿದ್ದ ಮೂಗನ್ನೂ ಎದ್ದು ಕಾಣುವಂತೆ ಮಾಡಿದ್ದವು. ಆ ಮೂಗು ಸಾಮಾನ್ಯ ಮೂಗಾಗಿರಲಿಲ್ಲ. ಕೊಕ್ಕರೆಯ ಚುಂಚಿನಂತೆ ಉದ್ದವಾಗಿದ್ದ ಆ ಮೂಗು ಮುಂದೆ ಗಿಳಿಯ ಮೂಗಿನಂತೆ ಬಾಗಿ ಚೂಪಾಗಿದ್ದಿತು. ಆತನ ಆಜಾನುಬಾಹು ಶರೀರವನ್ನು ಕೂಡ ಹಿನ್ನೆಲೆಗೆ ನೂಕಿ ಗಮನಕ್ಕೆ ಬಾರದಂತೆ ಮಾಡುವ ಮೂಗಾಗಿತ್ತು ಅದು.

ಆತ ವಿಶ್ವವಿದ್ಯಾಲಯ ಬಯಲನ್ನು ನೋಡುವದನ್ನು ಮುಗಿಸಿ, ಬಾಗಿಲನ್ನು ದಾಟಿ, ಬಾತುಕೋಳಿಗಳು ಹೆಜ್ಜೆಯಿಕ್ಕುವಂತೆ ಹೆಜ್ಜೆಯಿಕ್ಕುತ್ತ ಮುಂದೆ ನಡೆದನು. ಅವನು ಹಿಡಿದ ರಸ್ತೆ ಊರ ಹೊರಗಿನ ಅಡವಿ ರಸ್ತೆಯಾಗಿದ್ದಿತು. ಬಾತುಕೋಳಿಯ ನಡಿಗೆ ಅವನ ಸಹಜ ನಡಿಗೆಯಾಗಿತ್ತು. ಇಂದಂತೂ ಆತ ಗಾಳಿಯಲ್ಲಿ ನಡೆಯುವಂತಿದ್ದನು.

ಅದಕ್ಕೂ ಕಾರಣವಿತ್ತು. ಅವನ ಹೆಸರು ಆರಿಲಸ್ ಬ್ರೌನ್. ಆ ಹೆಸರಿನ ಮುಂದೆ "ಪಿಎಚ್. ಡಿ." ಎಂಬ ಆ ಮಾಂತ್ರಿಕ ಅಕ್ಷರಗಳನ್ನು ಸೇರಿಸಲು ಅಧಿಕಾರ ಸಿಕ್ಕು ಇನ್ನೂ ಬಹಳ ದಿನ ಕಳೆದಿರಲಿಲ್ಲ. ಆ ಅಕ್ಷರಗಳ ಮಾಯೆಯ ಮುಸುಕು ಇನ್ನೂ ಅವನ ಮನಸ್ಸನ್ನು ಬಿಟ್ಟಿರಲಿಲ್ಲ. ಅವುಗಳ ನೆನಪು ಬಂದೊಡನೆ ಅವನ ಮೈಯಲ್ಲಿ ವಿದ್ಯುತ್ ಸಂಚಾರವಾಗುತ್ತಿತ್ತು. ಪಿಎಚ್.ಡಿ! ಆರಿಲಸ್ ಬ್ರೌನ್, ಪಿಎಚ್.ಡಿ! ಅವನಿಗೆ ೨೬ ವರ್ಷಗಳು ತುಂಬಿ ಇನ್ನೂ ಒಂದು ವಾರ ಕಳೆದಿರಲಿಲ್ಲ. ಆಗಲೇ ಉಪಕುಲಗುರುಗಳು ಅವನನ್ನು ಕರೆಯಿಸಿ ಅಬಿಂಗಫೋರ್ಡ ವಿಶ್ವವಿದ್ಯಾಲಯದಲ್ಲಿ ಅವನನ್ನು ಲೆಕ್ಚರರನ್ನಾಗಿ ನೇಮಿಸಿದ ವಿಷಯವನ್ನು ತಿಳಿಸಿದ್ದರು. ಆರಿಲಸ್ ಬ್ರೌನ್, ಪಿಎಚ್.ಡಿ. ಲೆಕ್ಚರರ್, ಅಬಿಂಗಫೋರ್ಡ ವಿಶ್ವವಿದ್ಯಾಲಯ......!!

ಆರಿಲಸನಿಗೆ ನಡೆಯಬೇಕೆನಿಸಿತು. ಯಾವುದೊಂದು ಭಾವನೆಯ ಆವೇಗವುಂಟಾದಾಗ ನಡೆಯುವದು ಅವನಿಗೆ ಪ್ರಿಯ ಕಾರ್ಯವಾಗಿತ್ತು. ಅಂಥ ಸಮಯದಲ್ಲಿ ಅವನು ನಿತ್ಯಕ್ಕಿಂತ ವೇಗವಾಗಿ, ನಿತ್ಯಕ್ಕಿಂತ ದೂರ, ಬಹು ದೂರ ನಡೆದು ಹೋಗುತ್ತಿದ್ದನು. ಅಂತೇ ಅವನು ತಿರುಗಿ ಮತ್ತೆ ಅಬಿಂಗಫೋರ್ಡಕ್ಕೆ ಹೋಗುವ ಬದಲು ಆ

'ಫಿಲಿಫ್ ಮ್ಯಾಕ್ಡೊನಾಲ್ಡ'ರ ಕಥೆ

ಅಡವಿಯ ರಸ್ತೆಯಲ್ಲಿ ಮುಂದೆ ಮುಂದೆ ನಡೆದನು.

ಒಂದು ಮೈಲು, ಎರಡು ಮೈಲು ಕಳೆಯಿತು. ರಸ್ತೆ ಕಿರಿದಾಗುತ್ತ ಹೋಯಿತು; ಗಿಡಗಳು ದಟ್ಟವಾಗ ತೊಡಗಿದವು. ಆದರೆ ಆರಿಲಸನಿಗೆ ಅದರ ಪರಿವೆಯಿರಲಿಲ್ಲ. ಆತ ಸಂತೋಷಚಿತ್ತದಿಂದ ನಡೆಯುತ್ತಲೇ ಇದ್ದನು. ಆತನಿಗೆ ಅಪರಿಚಿತವಾದ ಹಕ್ಕಿಯೊಂದು ಅವನಿಗೆ ಅಡ್ಡವಾಗಿ ಹಾರಿ ಒಂದು ಗಿಡದ ಮೇಲೆ ಕುಳಿತಾಗಲೇ ಅವನ ಕಾಲುಗಳು ನಿಂತವು.

ಬಿಡುವಿನ ಸಮಯದಲ್ಲಿ ಆರಿಲಸ್ ನಿಸರ್ಗಪ್ರಿಯ; ಪ್ರಾಣಿ ಶಾಸ್ತ್ರದಲ್ಲಿ, ಸಸ್ಯಶಾಸ್ತ್ರದಲ್ಲಿ ಆಸ್ಥೆಯುಳ್ಳವ. ಈ ಹಕ್ಕಿ—ಈ ಹಕ್ಕಿ ಯಾವುದು? ಅದರ ಗೂಡೇನಾದರೂ ಈ ಗಿಡದಲ್ಲಿದೆಯೆ ?

ಪ್ರಶ್ನೆ ಮನಸ್ಸಿನಲ್ಲಿ ಮೂಡಿದ್ದೇ ತಡ, ಧರಿಸಿದ್ದ ಕರೀ ಸೂಟನ್ನು ಮರೆತು ಆರಿಲಸ್ ಸರಸರ ಗಿಡವನ್ನೇರತೊಡಗಿದ.

ಆದರೆ ಆ ಹಕ್ಕಿ ಏನೇನೂ ಗಾಬರಿಯನ್ನು ತೋರದೆ ಹಾರಿ ಹೋದದ್ದನ್ನು ಕಂಡು ಆರಿಲಸನಿಗೆ ಆ ಗಿಡದಲ್ಲಿ ಅದರ ಗೂಡಿಲ್ಲ ಎಂದು ಸ್ಪಷ್ಟವಾಯಿತು.

ಅಷ್ಟರಲ್ಲಿ ಆರಿಲಸ್ ಅರ್ಧ ಗಿಡವನ್ನೇರಿಬಿಟ್ಟಿದ್ದ. ಹಕ್ಕಿ ಹಾರಿ ಹೋದದ್ದನ್ನು ಕಂಡು ಆತ ಟೊಂಗೆಯ ಮೇಲೆ ಕಾಲನ್ನು ಬಲವಾಗಿ ಊರಿ ಬೆನ್ನನ್ನು ಬೊಡ್ಡೆಗೆ ಆನಿಸಿಕೊಂಡು ನಿಂತು ಕೆಳಗೆ ಹಬ್ಬಿದ ನೆಲವನ್ನು ನೋಡುವದರಲ್ಲಿ ಮಗ್ನನಾದ.

ತಾನು ಬಂದಿದ್ದ ಕೊರಕಲು ಹಾದಿಯಿಂದ ತುಸು ದೂರದಲ್ಲಿ ಗಿಡಗಳ ನಡುವೆ ಒಂದು ಒಳ್ಳೆಯ ಹಾದಿ ಇರುವದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಆಂ! ಎಂದು ಆತ ಅಂದುಕೊಳ್ಳುವಷ್ಟರಲ್ಲಿ ಇನ್ನೂ ಆಶ್ಚರ್ಯಕರವಾದ



ಸಂಗತಿಯೊಂದು ಅವನಿಗೆ ಕಂಡುಬಂದಿತು. ಆ ಹಾದಿಯ ಮಗ್ಗಲಿಗೆ ಬೆಳೆದ ಹುಲ್ಲಿನ ಮೇಲೆ ತರುಣಿಯೊಬ್ಬಳು ಮಲಗಿರುವದನ್ನು ಅವನು ಕಂಡ. ಅವಳು ಧರಿಸಿದ್ದ ಬಣ್ಣದ ಉಡುಪು ಆ ಹಸುರು ಹುಲ್ಲಿನ ಮೇಲೆ ಬಹು ಸುಂದರವಾಗಿ ಎದ್ದು ಕಾಣುತ್ತಿತ್ತು. ಅವಳು ಮಗ್ಗಲಾಗಿ ಕೈಯನ್ನು ತಲೆಗಿಂಬಾಗಿ ಮಾಡಿಕೊಂಡಿದ್ದಳು. ಅವಳಿಗೆ ನಿದ್ದೆ ಬಂದಿತ್ತು.

ಅಹಾ! ಅವಳ ಮುಖ ಕಾಣಿಸುತ್ತಿದ್ದರೆ! ಆ ಮಾಟಾದ ದೇಹಕ್ಕೆ ತಕ್ಕ ಸುಂದರ ಮುಖವಾಗಿರಬೇಕು ಅದು.

ಮರದ ಮೇಲೆ ನಿಂತಿದ್ದಂತೆಯೆ ಅವನು ಕನಸು ಕಾಣತೊಡಗಿದನು. ತಾನೊಬ್ಬ ಸರದಾರನೆಂದೂ ಆ ಸುಂದರಿಯನ್ನು ಪೀಡಿಸುತ್ತಿದ್ದ ದುರಾತ್ಮನನ್ನು ಏಕಾಂಗಿಯಾಗಿ ಎದುರಿಸಿ ಹಣ್ಣು ಮಾಡಿದೆನೆಂದೂ ಗಾಯಗೊಂಡು ಬಳಲಿದ ತನ್ನನ್ನು ಅವಳು ಉಪಚರಿಸಿದಳೆಂದೂ ಅವನು ಕನಸು ಕಂಡನು.

ಕನಸಿನಲ್ಲಿ ಆ ತರುಣಿ ತನ್ನ ಮುಖವಾಡವನ್ನು ಮೇಲಕ್ಕೆತ್ತಿ ತನ್ನ ಚೆಂದುಟಿಗಳನ್ನು ತನ್ನ ತುಟಿಗಳಿಗೆ ತಾಗಿಸುತ್ತಿರುವ ದೃಶ್ಯವನ್ನು ಆರಿಲಸ್ ಕಾಣುತ್ತಿದ್ದಾಗ ಇಂಜಿನ್ ಸಪ್ಪಳವು ಅವನ ಕಿವಿಗಪ್ಪಳಿಸಿ ಕನಸನ್ನು ಪುಡಿಪುಡಿ ಮಾಡಿ ಬಿಟ್ಟಿತು.

ಆರಿಲಸ್ ಅತ್ತಿತ್ತ ನೋಡಿದ. ಆ ಹಾದಿಯಲ್ಲಿ ಮೋಟರ ಕಾರೊಂದು ಬರುತ್ತಿದ್ದಿತು. ಹಳೆಯ ಕಾರು ಅದು; ಬಲು ನಿದಾನವಾಗಿ ಬರುತ್ತಿತ್ತು. ಅದರ ಮುಂದೆ ಲಠ್ಠ, ರಾಕ್ಷಸಾಕಾರದ ಮನುಷ್ಯನೊಬ್ಬ ಓಡುತ್ತಿದ್ದ. ಕಣ್ಣು ಮುಚ್ಚುವಂತೆ ಆತ ಟೊಪ್ಪಿಗೆಯನ್ನು ಧರಿಸಿದ್ದ. ಅವನಲ್ಲಿ ಕ್ರೌರ್ಯಭಾವ ಒಡೆದು ಕಾಣಿಸುತ್ತಿತ್ತು. ಆ ಅಡವಿ, ಆ ಸುಂದರವಾದ ನಿಸರ್ಗ ದೃಶ್ಯ, ಮಲಗಿದ್ದ ಆ ಸುಂದರಿ ಎಲ್ಲವಕ್ಕೂ ಅಸಂಗತವಾಗುವಂಥ ಲಕ್ಷಣವಿದ್ದ ಮನುಷ್ಯನಾಗಿದ್ದನಾತ.

ಮೋಟರ ಕಾರಿನ ಸಪ್ಪಳ ಬಂದರೂ ಆ ತರುಣಿ ಮಾತ್ರ ನಿದ್ರಿಸುತ್ತಲೇ ಇದ್ದಳು. ಅವಳನ್ನು ಕಂಡು ಓಡುತ್ತಿದ್ದ ಆ ಲಠ್ಠ ಮನುಷ್ಯ ನಿಂತು ಕಾರಿನ ಕಡೆ ತಿರುಗಿ ಕೈಯೆತ್ತಿ ಸಂಜ್ಞೆ ಮಾಡಿದ. ಕಾರು ನಿಂತಿತು. ಲಠ್ಠ ಮನುಷ್ಯ ಡ್ರಾಯವರನಿಗೆ ಏನೋ ಹೇಳಿದ. ಬಿಳಿ ಕೂದಲಿನ ಆ ವೃದ್ಧ ಡ್ರಾಯವರ ಹಿಂದಿನ ಸೀಟಿನಿಂದ ಒಂದು ಕಂಬಳಿಯನ್ನೆತ್ತಿ ಅವನ ಕೈಗಿತ್ತ. ಅವರ ಚಲನವಲನ ಕಳ್ಳರ ಚಲನವಲನದಂತೆಯೇ ಆರಿಲಸ್‌ಗೆ ತೋರಿತು.



ಗಿಡದ ಮೇಲೆ ನಿಂತು ನೋಡುತ್ತಿದ್ದ ಆರಿಲಸನು ಬಾಗಿದ. ಸ್ಥಿತಿ ಗಂಡಾಂತರದ್ದಾಗಿತ್ತು. ಆ ಲಠ್ಠ ಮನುಷ್ಯ ಕಂಬಳಿಯನ್ನು ಮಲಗಿದ್ದ ತರು-ಣಿಯ ಮೇಲೆ ಹಾಕಿ ಅವಳನ್ನು ತನ್ನ ಬಲವಾದ ತೋಳುಗಳಲ್ಲಿ ಎತ್ತಿಕೊಂಡಾಗ ಆರಿಲಸ್ ದುಡುಂ ಎಂದು ಮರದಿಂದ ಕೆಳಗೆ ಜಿಗಿದು ಆತನ ಎದುರಿಗೆ ನಿಂತನು.

ಆರಿಲಸ್ ಆ ಮನುಷ್ಯನ ಭುಜವನ್ನು ಒಂದು

ಕೈಯಿಂದ ಹಿಡಿದು, ಕಂಬಳಿಯ ಮುಸುಕಿನೊಳಗೆ ಒದ್ದಾಡುತ್ತಿದ್ದ ತರುಣಿಯನ್ನು ಇನ್ನೊಂದು ಕೈಯಿಂದ ಹಿಡಿದು ಜಗ್ಗಿದನು. ಆ ರಭಸಕ್ಕೆ ಆ ಲಠ್ಠ ಮನುಷ್ಯ ಜೋಲಿಹೋಗಿ ತನ್ನ ಹಿಂದಿದ್ದ ಕಾರಿಗೆ ಹೋಗಿ ಅಪ್ಪಳಿಸಿದನು. ಕಂಬಳಿಯನ್ನು ಎಳೆದ ರಭಸದಲ್ಲಿ ಆ ತರುಣಿ ಕೆಳಕ್ಕೆ ಧೊಪ್ಪೆಂದು ಬಿದ್ದಳು. ಕಾರಿನಲ್ಲಿದ್ದ ಮನುಷ್ಯ ಕೆಳಗಿಳಿದು ಬಂದನು.

ಆಗ ಆರಿಲಸನಿಗೆ ತಾನು ಮೂರ್ಖನಂತೆ ವರ್ತಿಸಿದೆ ಎಂಬುದು ಲಕ್ಷ್ಯಕ್ಕೆ ಬಂತು ಏಕೆಂದರೆ ಆ ತರುಣಿ ಗಹಗಹಿಸಿ ನಗತೊಡಗಿದ್ದಳು. ಅವಳು ಮತ್ತು ಆ ನರೆಗೂದಲಿನ ಡ್ರಾಯವರ ಏನೋ ಹೇಳತೊಡಗಿದರು. ಅವರಿಬ್ಬರ ಗದ್ದಲದಲ್ಲಿ ಅವರ ಮಾತೊಂದೂ ಅವನಿಗೆ ಅರ್ಥವಾಗಲಿಲ್ಲ. ಆದರೆ "ಒಳ್ಳೇ ತಮಾಷೆ" ಎಂಬ ಶಬ್ದವೊಂದು ಮಾತ್ರ ಅವನಿಗೆ ತಿಳಿಯಿತು. ಸತ್ಯ ಸಂಗತಿಯನ್ನು ತಿಳಿಸಲು ಅದೊಂದೇ ಶಬ್ದ ಸಾಕಾಗಿತ್ತು.

ಅಷ್ಟರಲ್ಲಿ ಕಾರಿಗೆ ಹೋಗಿ ಅಪ್ಪಳಿಸಿದ್ದ ಆ ಲಠ್ಠ ಚೇತರಿಸಿಕೊಂಡು ಮುಂದೆ ಬಂದ. ಅವನು ಹಲ್ಲು ಕಚ್ಚಿದ್ದ ರೀತಿಯೇ ಅವನಿಗೆ ಅಸಾಧ್ಯ ಕೋಪ ಬಂದಿತ್ತೆಂಬುದನ್ನು ತಿಳಿಸಿತು.

ಆ ತರುಣಿ "ಹಂ! ಬರ್ಟ್, ನಿಲ್ಲು. ಅವಿವೇಕತನ ಮಾಡಬೇಡ" ಎಂದು ಕೂಗಿಕೊಂಡಳು.

ಆದರೆ ಬರ್ಟ ಅವಳ ಮಾತನ್ನು ನಡುವೆಯೆ ನಿಲ್ಲಿಸಿ ಆರಿಲಸನಿಗೆ, "ಯಾಕೆ, ಎರಡನೆಯವರ ವ್ಯವಹಾರದಲ್ಲಿ ಕೈ ಹಾಕಬಾರದು ಎಂದು ತಿಳಿಯುವದಿಲ್ಲವೇ ?" ಎಂದನು.

ಅವನು ಈ ಮಾತು ಆಡುತ್ತಿದ್ದಂತೆಯೆ ಅವನ ಬಲಗೈ ಮುಂದೆ ಬಂತು. ಅವನ ಬೆರಳುಗಳು ಆರಿಲಸನ ಮೂಗನ್ನು ಹಿಡಿದು ಬಲವಾಗಿ ಹಿಂಡಿದವು.

ಆರಿಲಸನ ಮುಖ ಕೆಂಪಗಾಯಿತು. ಮೈ ನಿಮಿರಿತು. ಕಣ್ಣುಗಳು ಕೆಂಡ ಕಾರಿದವು; ಮುಷ್ಟಿಗಟ್ಟಿದ ಅವನ ಬಲಗೈ ತನ್ನಷ್ಟಕ್ಕೆ ಬೀಸಿ ಬರ್ಟನ ದವಡೆಗೆ ರಪ್ಪೆಂದು ಅಪ್ಪಳಿಸಿತು.

ಬರ್ಟ ತೂರಾಡಿದ. ಅವನ ಮೊಣಕಾಲುಗಳು ಕುಸಿದವು. ಬಿರುಗಾಳಿಗೆ ಸಿಕ್ಕಿದ ಹೆಮ್ಮರದಂತೆ ಅವನು ಕುಪ್ಪರಿಸಿ ಬಿದ್ದ.

ಬಿದ್ದ ಬರ್ಟ ಅಲುಗಾಡಲಿಲ್ಲ. ಆರಿಲಸನ ಉರಿಯುವ ಕ್ರೋಧ ಆರಿತು. ಕೆಳಗೆ ನಿಶ್ಚೇಷ್ಟಿತನಾಗಿ ಬಿದ್ದ ಬರ್ಟನನ್ನು ಕಂಡು ಅವನು ಕುಗ್ಗಿದ ಸ್ವರದಲ್ಲಿ " ಅಯ್ಯೋ ! ದೇವರೆ !! " ಎಂದ.

ಆ ತರುಣಿ ಮತ್ತು ವೃದ್ಧ ಡ್ರಾಯವರ ಬರ್ಟನ ಬಳಿ ಮೊಣಕಾಲೂರಿ ಕುಳಿತರು. ತರುಣಿ ಬರ್ಟನ ತಲೆಯನ್ನೆತ್ತಿ ಹಿಡಿದಳು. ಡ್ರಾಯವರ ಅವನ ಕುತ್ತಿಗೆಯ ಹಿಂಭಾಗವನ್ನು ತಿಕ್ಕಿದ. ಅವರಿಬ್ಬರೂ ಒಂದಕ್ಷರವನ್ನೂ ಉಚ್ಚರಿಸಲಿಲ್ಲ. ಆದರೆ ಅವರು ಭಯಮಿಶ್ರಿತ ಆಶ್ಚರ್ಯದಿಂದ ಆರಿಲಸನನ್ನು ನೋಡುತ್ತಿದ್ದರು.

ಬರ್ಟ ಕಣ್ಣು ತೆರೆದ. ಒಂದರೆಕ್ಷಣ ಶೂನ್ಯವನ್ನು ದಿಟ್ಟಿಸಿದ ಬಳಿಕ ಅವನ ಮಿದುಳು ತಿಳಿಯಾಯಿತು. ಅವನು ಏನೋ ಹೇಳತೊಡಗಿದ. ಆದರೆ ಅವನ ಮುಖ ನೋವಿನಿಂದ ಮುದುರಿತು. ಅವನ ಕೈ ಬಾಯತೊಡಗಿದ್ದ ದವಡೆಯನ್ನು ಸವರಿಕೊಂಡಿತು.

ವೃದ್ಧ ಡ್ರಾಯವರ ಬರ್ಟನ ದವಡೆಯನ್ನು ಮುಟ್ಟಿ ನೋಡುತ್ತ " ದವಡೆಯ ಸಂದು ತಪ್ಪಿದಂತಿದೆ " ಎಂದ.

ಬರ್ಟ ಪ್ರಯಾಸದಿಂದ ಎದ್ದು ನಿಂತ. " ಅವನನ್ನು ಡಾಕ್ಟರರ ಹತ್ತರ ಒಯ್ಯೋಣ " ತರುಣಿ ಹೇಳಿದಳು.

" ಓ ! ನನ್ನನ್ನು ಕ್ಷಮಿಸಿರಿ. ಅಷ್ಟು ಬಿರುಸಾಗಿ ಹೊಡೆಯುತ್ತೇನೆಂಬ ಕಲ್ಪನೆ ನನಗಿರಲಿಲ್ಲ" ಆರಿಲಸ್ ತಡವರಿಸುತ್ತ ಹೇಳಿದ.

ಅವನನ್ನು ನುಂಗುವಂತೆ ನೋಡಿದ ತರುಣಿ ಏನೂ ಮಾತಾಡಲಿಲ್ಲ. ವೃದ್ಧ ಕಾರಿನ ಬಾಗಿಲು ತೆರೆದ. ತರುಣಿ ಬರ್ಟನ ಕೈಹಿಡಿದು ಕರೆದೊಯ್ದು ಕಾರಿನಲ್ಲಿ ಕೂಡ್ರಿಸಿದಳು. ತಾನೂ ಅವನ ಪಕ್ಕದಲ್ಲಿ ಕುಳಿತಳು.

ವೃದ್ಧ ಮತ್ತೆ ಆರಿಲಸನ ಹತ್ತಿರಕೆ ಬಂದು

ಕಾದುವ ಹುಂಜದಂತೆ ಸೆಟೆದು ನಿಂತು, "ನಿನ್ನ ಹೆಸರು ಮತ್ತು ವಿಳಾಸ" ಎಂದನು.

"ನನ್ನ ಹೆಸರು-ವಿಳಾಸ-ಅಂ!" ಆರಿಲಸ್ ಗಡಬಡಿಸುತ್ತ ಕಿಸೆಯನ್ನು ಶೋಧಿಸಿ ಕಾಗದ ವನ್ನೂ ಪೆನ್ಸಿಲನ್ನೂ ಹೊರಗೆ ತೆಗೆದು ಬರೆಯ ತೊಡಗಿದ.

"ಇದರಿಂದ ತಪ್ಪಿಸಿಕೊಳ್ಳುತ್ತಿ ಎಂದು ತಿಳಿಯಬೇಡ. ಎರಡನೆಯವರ ಅನ್ನ ಕಸಿದು ಕೊಂಡರೆ ಶಿಕ್ಷೆಯನ್ನು ತಪ್ಪಿಸಿಕೊಳ್ಳಲಾದೀತೆ?" ಎನ್ನುತ್ತ ಮುದುಕ ಆರಿಲಸನ ಕೈಯಿಂದ ಕಾಗದ ವನ್ನು ಕಿತ್ತುಕೊಂಡು ನಡೆದನು.

ಕಾರು ಹೊರಟುಹೋಯಿತು. ಆರಿಲಸ್ "ಅಯ್ಯೋ! ದೇವರೆ!" ಎಂದ.

ಅಂದು ಇಡೀ ಹಗಲನ್ನು ಆರಿಲಸ್ ಅಬಿಂಗ ಫೋರ್ಡದಲ್ಲಿದ್ದ ತನ್ನ ಕೋಣೆಯಲ್ಲಿ ಕಳೆದ. ಮುಂದಿನ ವಿಚಾರವನ್ನು ಯೋಚಿಸಿ ಅವನು ಕಂಗಾಲಾಗಿದ್ದನು. ಮರುದಿನದ ಪತ್ರಿಕೆಗಳಲ್ಲಿ ಬರಬಹುದಾದ "ವಿಶ್ವವಿದ್ಯಾಲಯದ ಪ್ರೊಫೆಸರರು ಬೀದಿ ಜಗಳದಲ್ಲಿ—ಆಕ್ರಮಣಕ್ಕಾಗಿ ಪಿಎಚ್. ಡಿ. ಪದವೀಧರನ ಮೇಲೆ ಖಟ್ಲೆ!" ಎಂಬಿತ್ಯಾದಿ ತಲೆಬರಹಗಳು ಅವನ ಕಣ್ಣೆದು ರಿಗೆ ಕುಣಿಯತೊಡಗಿದ್ದವು.

ಸಂಜೆ ಅವನು ಉಪಕುಲಗುರುಗಳ ಮನೆಗೆ ಭೋಜನಕ್ಕೆ ಹೋಗಲೇ ಬೇಕಾಗಿತ್ತು. ಅಲ್ಲಿ ಕೂಡ ಸಾರ್ವಜನಿಕ ಜಗಳದಲ್ಲಿ ಕೈಹಾಕಿ ಕೆಲಸ ಕಳೆದುಕೊಂಡ ಓರ್ವ ಪ್ರೊಫೆಸರನ ಮಾತೇ ಬರ ಬೇಕೇ?

ಅಲ್ಲಿಂದ ಭಾರವಾದ ಹೃದಯವನ್ನು ಹೊತ್ತು ಕೊಂಡು ಆರಿಲಸ್ ತನ್ನ ಕೋಣೆಗೆ ಬಂದ. ಬಾಗಿಲಲ್ಲಿಯೆ ಮನೆಯ ಯಜಮಾನಿ ಅವನಿಗೆ "ನಿಮ್ಮ ಕೋಣೆಗೆ ಅತಿಥಿಗಳು ಬಂದಿದ್ದಾರೆ" ಎಂದಳು.

"ಅತಿಥಿಗಳು!"

"ಹೌದು. ನಿಮ್ಮ ಕೋಣೆಯಲ್ಲಿ ಕುಳಿತಿ ದ್ದಾರೆ. ನಿಮ್ಮ ಚಿಕ್ಕಪ್ಪ ಮತ್ತು ತಂಗಿ! ನಿಮ್ಮ ತಂಗಿ ಒಳ್ಳೇ ಚೆಲುವೆ."

ಹಿಂದಿನ ದಿನವಾಗಿದ್ದರೆ ತನಗೆ ತಂಗಿಯೂ ಇಲ್ಲ, ಚಿಕ್ಕಪ್ಪನೂ ಇಲ್ಲ ಎಂದು ಆರಿಲಸ್ ಹೇಳು ತ್ತಿದ್ದ. ಆದರೆ ಈಗ ಆತ ಉಗುಳು ನುಂಗಿ ಕೊಂಡು ಸರ್ರನೆ ಅಟ್ಟದ ಮೇಲಿದ್ದ ತನ್ನ ಕೋಣೆಗೆ ಓಡಿದ.

ಆ ತರುಣಿ ಅವನ ಕುರ್ಚಿಯ ಮೇಲೆ—ಕೋಣೆಯಲ್ಲಿದ್ದುದು ಒಂದೇ ಕುರ್ಚಿ—ಕುಳಿತಿ ದ್ದಳು. ವೃದ್ಧ ಪ್ರಾಯವರ ಮಂಚದ ಮೇಲೆ ಕುಳಿತಿದ್ದ. ಆರಿಲಸ ಒಳಗೆ ಬಂದಾಗ ಅವರ ಲ್ಲೊಬ್ಬರೂ ಸ್ಥಳ ಬಿಟ್ಟು ಕದಲಲಿಲ್ಲ. ಅವನನ್ನು ನೋಡುತ್ತ ಕುಳಿತೇ ಇದ್ದರು.

ಆರಿಲಸ ಮುಗುಳ್ನಗೆ ನಕ್ಕ. ಅದು ಹೆಣದ ಮುಖದ ಮೇಲಿನ ನಗೆಯಂತೆ ನಿರ್ಜೀವವಾ ಗಿತ್ತು. "ನಾನು-ನಾನು-ನನ್ನನ್ನು ನೋಡಲು ಬಂದಿರಾ?" ಆರಿಲಸ್ ಕೇಳಿದ.

ತರುಣಿ ಮಾತನಾಡಲಿಲ್ಲ. ಅವಳ ನೀಲಿ ಕಣ್ಣುಗಳು ಅವನ ಮುಖದ ಅಭ್ಯಾಸ ನಡೆಸಿ ದ್ದವು. ವೃದ್ಧ "ಹಂ!" ಎಂದ.

"ಏ-ನು?—ಯಾ-ಕೆ-ಬಂ—" ಆರಿಲಸನ ಬಾಯಿ ಮುಚ್ಚಿತು.

ಆರಿಲಸನಿಗೆ ಕುಳಿತುಕೊಳ್ಳಬೇಕಾಗಿತ್ತು. ಆದರೆ ಆಸನವಾವುದೂ ಇರಲಿಲ್ಲ. ಅವನು ಗೋಡೆಗೆ ಆತು ನಿಂತುಕೊಂಡನು.

"ಬರ್ಟನ ವಿಷಯ ಕೇಳುತ್ತೀಯೇನು? ಅವನ ಪ್ರಕೃತಿಯೇನೂ ಅಷ್ಟು ಚನ್ನಾಗಿಲ್ಲ." ಇಷ್ಟಂದು ವೃದ್ಧ ತರುಣಿಯತ್ತ ನೋಡಿದ.

"ಅವನ ದವಡೆಯ ಸಂದು ತಪ್ಪಿದೆ." ತರುಣಿ ಹೇಳಿದಳು.

ಆರಿಲಸನಿಗೆ ಯಾರೋ ಗಂಟಲು ಹಿಸುಕಿ ದಂತಾಗುತ್ತಿತ್ತು. ಆದರೂ ಅವನು "ನನಗೆ-ನಾನುಬಹಳ-ದುಃಖ-ಕ್ಷಮೆಕೇಳುತ್ತೇನೆ. ನನ್ನಿಂದ ಏನಾದರೂ ಸಹಾಯವಾಗಬಹುದೇ?" ಎಂದ.

"ಓಹೋ! ನೀನು ಹಣ ಕೊಡಬಹುದು." ಮುದುಕ ಹೇಳಿದ.

ಆರಿಲಸನ ಮುಖದಲ್ಲಿ ಆಶ್ಚರ್ಯ ಭಾವ ಮೂಡಿತು. ತರುಣಿ, "ಪಾಪಾ, ಆ ಕಾಗದ ತೋರಿಸಿರಿ" ಎಂದಳು.

ವೃದ್ಧ ಎದ್ದು ನಿಂತು ಆರಿಲಸನ ಕೈಗೊಂದು

ಪತ್ರಿಕೆಯನ್ನಿತ್ತ. ಅದು ಅಬಿಂಗಫೋರ್ಡಕ್ಕೆ ಸಮೀಪದಲ್ಲಿದ್ದ ಸ್ಟ್ಯಾಂಡಚೆಸ್ಟರ ನಗರದ ಪತ್ರಿಕೆಯಾಗಿತ್ತು. ಅದರಲ್ಲಿ "ಮುಷ್ಟಿಯುದ್ಧ ಮಲ್ಲನಿಗೆ ಅಪಘಾತ. ಆಸ್ಟ್ರೇಲಿಯದ ಉಕ್ಕಿನ ಮನುಷ್ಯ ಬರ್ಟ್ ವಿಜನ್ ಮುಂದಿನ ವಾರ ಬ್ರಿಸ್ಟೋಲದ ಜೋ ಮಸ್ತಮಿಯ ಜೊತೆ ಮುಷ್ಟಿಯುದ್ದ ಮಾಡತಕ್ಕವನಿದ್ದ. ಆದರೆ ಇಂದು ಒಂದು ಅಪಘಾತದಲ್ಲಿ ಸಿಕ್ಕಿದ್ದರಿಂದ ಇನ್ನು ಮೂರು ನಾಲ್ಕು ತಿಂಗಳ ವರೆಗೆ ಆತ ಆಸ್ಪತ್ರೆಯಲ್ಲೇ ಇರಬೇಕಾಗಿ ಬಂದಿದೆ," ಎಂದು ಬರೆದಿತ್ತು.

ವೃದ್ಧ ಕೇಳಿದ; "ನೀನು ನಮ್ಮ ಹಾನಿಯನ್ನು ತುಂಬಿ ಕೊಡುತ್ತಿಯೋ ಅಥವಾ ನಾವು ಕೋರ್ಟಿಗೆ ಹೋಗಬೇಕೋ?"

ಆರಿಲಸ್ ಆಘಾತದಿಂದ ಚೇತರಿಸಿಕೊಳ್ಳಲು ಪ್ರಯತ್ನಿಸುತ್ತ, "ಇದು ಹದ್ದು ಮೀರಿತು. ನನ್ನ ಮೇಲೆ ಆಕ್ರಮಣವಾಯಿತು. ನನ್ನ ಅಪಮಾನವಾಯಿತು" ಎಂದ.

"ಹಂ! ತಡಿ ತಡಿ. ನಿನ್ನ ಮೇಲೆ ಹಲ್ಲೆಯಾಗಲಿಲ್ಲ. ನೀನು ಒಮ್ಮಿಂದೊಮ್ಮೆ ಗಿಡದಿಂದ ಜಿಗಿದು ಬರ್ಟನ ದವಡೆಗೆ. . . . . ."

ವೃದ್ಧನ ಮಾತನ್ನು ತಡೆದು ಆ ತರುಣಿ, "ಸಾಕು. ಪಾಪಾ, ಮರೆತು ಬಿಡು ಅದನ್ನು" ಎಂದಳು.

ವೃದ್ಧನನ್ನು ಮತ್ತೆ ಮಾತಾಡಗೊಡದೆ ಅವಳು "ನಾನು ಈ ವಿಷಯದ ಇತ್ಯರ್ಥ ಮಾಡುತ್ತೇನೆ. ನೀನೀಗ ಹೊಟೆಲ್ಲಿಗೆ ಹೋಗಿಬಿಡು" ಎನ್ನುತ್ತ ಮುದುಕನ ಕೈ ಹಿಡಿದು ಬಾಗಿಲ ಹೊರಗೆ ಕಳಿಸಿ ಬಾಗಿಲನ್ನು ಹಾಕಿಕೊಂಡಳು. ಮುದುಕ ವಟಗುಟ್ಟುತ್ತ ಹೊರಟು ಹೋದ.

ಅವನು ಹೋದ ಬಳಿಕ ತರುಣಿ "ಪಾಪಾ ಯಾವಾಗಲೂ ಹಾಗೆಯೆ," ಎಂದು ಆರಿಲಸನತ್ತ ಮುಗುಳ್ನಗೆ ಬೀರಿದಳು. ಆರಿಲಸನಿಗೆ ಅವಳು ಸುರಸುಂದರಿಯಾಗಿ ಕಂಡಳು.

ತರುಣಿ ಮಂಚದ ಮೇಲೆ ಕುಳಿತೊಡನೆ ಆರಿಲಸ್ ತನ್ನ ಕುರ್ಚಿಯ ಮೇಲೆ ಕುಳಿತುಕೊಂಡನು.

"ನನ್ನ ಹೆಸರು ಟೋವಿಜನ್ ಬರ್ಟ ವಿಜನ್ ನನ್ನ ಅಣ್ಣ. ನಿಮ್ಮ ಹೆಸರೇನು?"

"ನನ್ನ ಹೆಸರು ಆರಿಲಸ್ ಬ್ರೌನ್, ಆದರೆ ನೀವೇನೂ ಆಸ್ಟ್ರೇಲಿಯದವರಂತೆ ಕಾಣುವದಿಲ್ಲ."

"ಹೌದು. ನಾನು ನನ್ನ ಸೋದರತ್ತೆಯ ಬಳಿ ಇರಲೆಂದು ಅನೇಕ ವರ್ಷಗಳ ಹಿಂದೆಯೇ ಈ ನಾಡಿಗೆ ಬಂದೆ. ನಾನು ಬಂದ ನಂತರ ಆಸ್ಟ್ರೇಲಿಯದಲ್ಲಿ ಬರ್ಟ ಮುಷ್ಟಿಯುದ್ದದ ತರಬೇತಿ ಪಡೆದು ಪ್ರವೀಣನಾದ. ಅಲ್ಲಿ ವರಮಾನ ಕಡಿಮೆಯಾಗಲು ಇಲ್ಲಿ ಇಂಗ್ಲಂಡಿನಲ್ಲಿ ಅದೃಷ್ಟಪರೀಕ್ಷೆಗಾಗಿ ಬಂದ. ಅವನ ಪತ್ರ ಬಂದೊಡನೆಯೇ ನಾನು ಪಾಪಾನ ಜೊತೆ ವ್ಯವಹಾರ. . . . . ."

"ಅಂದರೆ — ಪಾಪಾ!"

ಅವಳು ನಕ್ಕಳು. ಆ ನಗುವಿನ ತೆರೆ ಕೋಣೆಯಲ್ಲಿ ಹರಿದು ಆರಿಲಸನ ದೇಹವನ್ನು ಪ್ರವೇಶಿಸಿ ಅದರಲ್ಲಿ ರೋಮಾಂಚನವುಂಟುಮಾಡಿತು.

"ಆ ಮುದುಕ ನನ್ನ ತಂದೆಯಲ್ಲ. ಅವನ ಹೆಸರು ಪಾಪ್ ಎಂದು. ನಾನು ಚೇಷ್ಟೆಗೆ ಪಾಪಾ ಎಂದು ಕರೆಯುತ್ತೇನೆ. ಆತ ಮುಷ್ಟಿಯುದ್ದಗಳನ್ನೂ ಏರ್ಪಡಿಸುತ್ತಾನೆ."

"ಓ!" ಆರಿಲಸ್ ಉದ್ಗಾರ ತೆಗೆದ.

"ಹೂಂ! ಅವನೇ ಸ್ಟ್ಯಾಂಡಚೆಸ್ಟರ ಕಾರ್ಯಕ್ರಮವನ್ನು ಏರ್ಪಾಡು ಮಾಡಿದವ. ಬರ್ಟ ಈ ಮುಷ್ಟಿಯುದ್ಧ ಮಾಡಲಾರನಾದರೆ ಅವನು ಉಪವಾಸ ಬೀಳಬೇಕಾಗುವದು."

"ಅಯ್ಯೋ ದೇವರೇ!"

"ಆರಿ, ನಿಮ್ಮ ತಪ್ಪೇನೂ ಇಲ್ಲ ಇದರಲ್ಲಿ. ಕೋರ್ಟಿಗೆ ಹೋದರೆ ನಮಗೊಂದು ಕುರುಡು ಕಾಸೂ ಸಿಗುವದಿಲ್ಲವೆಂಬುದು ನನಗೆ ಗೊತ್ತಿದೆ." ತುಸು ತಡೆದು ಅವಳು, "ನಮಗೆ ಸ್ವಲ್ಪ-ಒಂದು ನೂರು ಪೌಂಡುಗಳನ್ನು ನೀವು ಸಾಲವೆಂದು ಕೊಡಲಾರಿರಾ?" ಎಂದಳು.

ಆರಿಲಸ ಖಿನ್ನಸ್ವರದಿಂದ "ನನ್ನ ಹತ್ತರವೂ ಚಿಕ್ಕಾಸಿಲ್ಲ," ಎಂದು ತನ್ನ ಕಥೆಯನ್ನೆಲ್ಲ ಹೇಳಿಬಿಟ್ಟ. "ಮತ್ತೆ ವಿಶ್ವವಿದ್ಯಾಲಯದ ವರ್ಗ ಪ್ರಾರಂಭವಾಗುವವರೆಗೂ ಸಂಬಳವೂ ನನ್ನ ಕೈಗೆ ಬರು

ವಂತಿಲ್ಲ. ಬಂದರೂ ಕೈಗೆ ಬರುವದು ತೀರ ಸ್ವಲ್ಪ ಮಾತ್ರ.''

ಅವನ ಖಿನ್ನ ಮುಖವನ್ನು ಕಂಡು ಆ ತರುಣಿಯ ಮನ ಕರಗಿರಬೇಕು. ಅವಳು ಎದ್ದು ಬಂತು ಅವನತ್ತ ಮುಗುಳ್ನಗೆ ಬೀರಿ '' ಚಿಂತಿಸಬೇಡಿ. ಏನೋ ವಿಚಾರ ಬಂತು, ಕೇಳಿದೆ,'' ಎಂದಳು.

ಆದರೆ ಅವಳ ಸಾನ್ನಿಧ್ಯ, ಅವಳ ಮಾತು ಆರಿಲಸನ ಹೃದಯವನ್ನು ಸೂರೆಗೊಂಡಿದ್ದವು. ಅವನು ನಿರಾಶೆಯ ಧ್ವನಿಯಲ್ಲಿ ಆದರೂ "ನಾನು ಮಾಡಬಹುದಾದ ಸಹಾಯವೇನಾದರೂ ಇದ್ದಿದ್ದರೆ . . . . '' ಎಂದ.

" ಛೆ ! ಛೆ! ನಿಮ್ಮ ತಪ್ಪೇನೂ ಇಲ್ಲದಿರುವಾಗ ನೀವೇಕೆ ವ್ಯಥೆಪಟ್ಟುಕೊಳ್ಳುತ್ತೀರಿ ? "

" ಇಲ್ಲ, ನನ್ನದೇ ತಪ್ಪಾಗಿದೆ. ನಾನು ಬಹಳ ಅವಸರ ಮಾಡಿದೆ. ಬರ್ಟ ಅದೊಂದನ್ನು ಬಿಟ್ಟು ಮತ್ತೇನು ಮಾಡಿದ್ದರೂ . . . " ತುಸು ನಿಂತು ಆರಿಲಸ್ ದೀರ್ಘಶ್ವಾಸವನ್ನೆಳೆದು, " ನನ್ನ ಮೂಗಿನ ಸಂಬಂಧ ಬಂತೆಂದರೆ ನಾನು ರಾಕ್ಷಸನಾಗಿ ಬಿಡುತ್ತೇನೆ" ಎಂದ.

ಅವಳು ಅವನನ್ನು ದಿಟ್ಟಿಸಿ ನೋಡಿದಳು. ಅವಳ ಕಣ್ಣುಗಳು ಇದ್ದಕ್ಕಿದ್ದಂತೆ ಅಗಲವಾದವು. ಅವಳಲ್ಲಿ ಹೊಸ ಹುರುಪು ಕಂಡು ಬಂದಿತು.

" ಆರಿ ! ''

ಅವಳ ಆ ಆತ್ಮೀಯ ಕೂಗಿನಿಂದ ಆರಿಲಸ್ ಪುಲಕಿತನಾದ.

" ಆರಿ, ಕಿವಿಗೊಟ್ಟು ಕೇಳಿರಿ. ದಿವ್ಯವಾದೊಂದು ವಿಚಾರ ನನ್ನ ತಲೆಗೆ ಹೊಳೆದಿದೆ. ನಾವು ಮಾಡಿಕೊಂಡಿರುವ ಈ ವಿಕ್ಷಿಪ್ತ ಕರಾರು ಏನು ಗೊತ್ತೆ ? ಮುಷ್ಟಿಯುದ್ಧಕ್ಕೆ ನಿಂತ ಮಾತ್ರಕ್ಕೆ ೨೦೦ ಪೌಂಡುಗಳು, ಐದು ಸುತ್ತಿನವರೆಗೂ ತಪ್ಪದೆ ಹೋರಾಡಿದರೆ ಬರುವ ಹಣದಲ್ಲಿ ಶೇಕಡ ೧೦ ರಷ್ಟು ಹೆಚ್ಚಿಗೆ. ಗೆದ್ದರೆ ಶೇಕಡ ೩೫ ರಷ್ಟು ಹೆಚ್ಚಿಗೆ ಸಿಗುತ್ತದೆ.

" ನಿಮ್ಮ ವಿಶ್ವವಿದ್ಯಾಲಯ ೧೫ ನೆಯ ತಾರೀಖಿನ ವರೆಗೂ ಪ್ರಾರಂಭವಾಗುವದಿಲ್ಲ. ಈ ಮುಷ್ಟಿಯುದ್ಧ ನಡೆಯಬೇಕಾದ್ದು ೧೨ ರಂದು. ಮ್ಯಾಂಚೆಸ್ಟರ ಇಲ್ಲಿಂದ ೨೦ ಮೈಲು ದೂರದಲ್ಲಿದೆ. ಯಾರಿಗೂ ಗೊತ್ತಾಗುವದಿಲ್ಲ. ಏನನ್ನುತ್ತೀರಿ ? "

ಅವಳು ಮುಂದೆ ಬಂದು ಅವನ ಭುಜ ಹಿಡಿದು ಅಲ್ಲಾಡಿಸಿದಳು. ಮತ್ತೆ ಆರಿಲಸ್ ಬಾಯಿ ತೆರೆಯುವದರೊಳಗಾಗಿ ಹಿಂದೆ ಸರಿದು ದೂರ ನಿಂತು ಅವನನ್ನು ಆಪಾದಮಸ್ತಕ ನಿರುಕಿಸಿ ನೋಡತೊಡಗಿದಳು. ಆರಿಲಸನಿಗೆ ತಾನು ಪೇಟೆಗೆ ಮಾರಲು ತಂದ ದನವೇನೋ ಎಂದು ಭಾಸವಾಯಿತು. ಅವನು ಆಶ್ಚರ್ಯದಿಂದ ಆ ಎಂದು ಬಾಯಿ ತೆರೆದು ಟೋನಿಯನ್ನು ನೋಡತೊಡಗಿದ.

ಮತ್ತೆ " ನೀವಂದದ್ದು ನನಗೆ ತಿಳಿಯಲಿಲ್ಲ" ಎಂದ.

'' ನಿಮ್ಮ ಕೈಗಳನ್ನು ಎತ್ತಿ ಹಿಡಿಯಿರಿ. ''

ಆರಿಲಸ್ ಆಜ್ಞಾಪಾಲಕ ಸೈನಿಕನಂತೆ ಕೈಗಳನ್ನೆತ್ತಿದ. ಟೋನಿ ಒಮ್ಮಿಂದೊಮ್ಮೆ ಅವನ ಸಮೀಪಕ್ಕೆ ಬಂದು ಅವನ ಎದೆಯಮೇಲೆ ಬಲವಾಗಿ ಗುದ್ದಿದಳು.

'' ವ್ಹಾ ! ನಿಮಗೆ ಸಾಧ್ಯವಿದೆ. ಆರಿ, ನಿಮಗೆ ಸಾಧ್ಯವಿದೆ.'' ಆರಿಲಸನಿಗೆ ಮಾತಾಡಲು ಕೂಡ ಅವಕಾಶವೀಯದೆ ಅವಳು, '' ಎಂದಾದರೂ ಮುಷ್ಟಿಯುದ್ಧ ಮಾಡಿದ್ದೀರಾ ?'' ಎಂದು ಕೇಳಿದಳು.

''ಶಾಲೆಯಲ್ಲಿದ್ದಾಗ ಏನೋ ಅಲ್ಪ ಸ್ವಲ್ಪ...'' ಆರಿಲಸನಿಗೆ ಏನೊ ಹೊಳೆದಂತಾಗಿ '' ಅಂದರೆ ನಾನೇ ಬರ್ಟನೆಂದು ನಟಿಸಿ ಜೋನಸನೊಂದಿಗೆ ಮುಷ್ಟಿಯುದ್ಧ ಮಾಡಬೇಕೆನ್ನುವಿರೇನು ?'' ಎಂದು ಕೇಳಿದ.

'' ಛೆ ! ಛೆ ! ಪಾಪಾ ಇದುವರೆಗೂ ಗುಪ್ತವಾಗಿಟ್ಟಿದ್ದ ಆಸ್ಟ್ರೇಲಿಯದ ಓರ್ವ ಜಟ್ಟಿಯೆಂದು ನೀವು ಯುದ್ಧ ಮಾಡಬೇಕು. ಕೃತಕ ಹೆಸರಿನಲ್ಲಿ ನಿಮಗೆ ನಾವು ಲಾಯಸೆನ್ಸ್ ತರಿಸಿ ಕೊಡುತ್ತೇವೆ. ''

ಭಯ—ಕುತೂಹಲಮಿಶ್ರಿತ ನೋಟದಿಂದ ಆರಿಲಸ್ ಅವಳನ್ನು ನೋಡಿದನು. ಅವನ

ಮುಖಮುದ್ರೆಯನ್ನು ಕಂಡು ಅವಳು, "ಇಲ್ಲ. ನೀವೆಣಿಸುವಷ್ಟು ಕಷ್ಟದ ಕೆಲಸವಲ್ಲ. ಮತ್ತೆ ಯಾರಿಗೂ ಗೊತ್ತಾಗುವದಿಲ್ಲ. ಹೇಗೆ ಗೊತ್ತಾಗಬೇಕು ?" ಎಂದಳು.

ಅವಳಿಗೆ "ಇಲ್ಲ" ವೆನ್ನಬೇಕಲ್ಲ ಎಂದು ಸಂಕಟವಾದರೂ ಆರಿಲಸ್ "ಛೆ! ಇಲ್ಲ. ಸಾಧ್ಯವಿಲ್ಲ. ಖಂಡಿತವಾಗಿಯೂ ಅಸಾಧ್ಯ" ಎಂದ.

ಅವಳ ಮುಖದಲ್ಲಿದ್ದ ಗೆಲವು ಕ್ಷಣಾರ್ಧದಲ್ಲಿ ಮಾಯವಾಯಿತು. "ಹೋಗಲಿ. ಅದು ಅಕಸ್ಮಾತ್ತಾಗಿ ನನಗೆ ಹೊಳೆದ ವಿಚಾರ. ಹುಚ್ಚಳ ವಿಚಾರ ಅಲ್ಲವೆ ?"

ಅವಳು ನಿಧಾನವಾಗಿ ಬಾಗಿಲ ಕಡೆ ಹೆಜ್ಜೆಯಿಟ್ಟಳು. ದುಃಖಪೂರ್ಣ ದೃಷ್ಟಿಯಿಂದ ಆರಿಲಸ್ ಅವಳನ್ನು ನೋಡಿದ. ಅವಳ ದೇಹ ಕುಸಿಯುವಂತೆ ಕಂಡಿತು. ಆದರೆ ಅವಳು ನಿರ್ಧಾರದಿಂದ ದೇಹವನ್ನು ಸೆಟೆಸಿ ಬಾಗಿಲ ಅಗಳಿಗೆ ಕೈ ಹಾಕಿದಳು. "ಸ್ವಲ್ಪ ತಡೆಯಿರಿ" ಆರಿಲಸ್ ಹೇಳಿದ.

ಇದು ನಡೆದದ್ದು ಮಂಗಳವಾರ. ಸ್ಟ್ಯಾಂಡ್-ಚೆಸ್ಟರದ ಹೆರಾಲ್ಡ ಪತ್ರಿಕೆಯ ಗುರುವಾರದ ಸಂಚಿಕೆಯಲ್ಲಿ "ಅಪಘಾತಕ್ಕೆ ಸಿಲುಕಿದ ಬರ್ಟವಿಜನ್ ಜೋ ಮಸ್ತರಾಮಿಯ ಕೂಡ ಮುಷ್ಟಿಯುದ್ಧ ಮಾಡಲಾರ. ಆದರೆ ಪಾಪ್ ಅವನ ಬದಲು ಆಸ್ಟ್ರೇಲಿಯಾದ ಇನ್ನೊಬ್ಬ ಪ್ರಸಿದ್ಧ ಜಟ್ಟಿ ಚಾರ್ಲಿ ಜೆಕ್ಸನ್ ಎಂಬಾತನನ್ನು ಕರತಂದಿದ್ದಾನೆ" ಎಂದು ಪ್ರಕಟವಾಯಿತು.

೧೨ ನೆಯ ತಾರೀಕು ಬಂದಿತು. ಮುಷ್ಟಿಯುದ್ಧ ನೋಡಲು ಬಂದ ಜನಸಂದಣಿ ಎರಡು ಸುತ್ತು ಮುಗಿದಾಗಲೆ ಕೇಕೆ ಹಾಕಲು ಪ್ರಾರಂಭಿಸಿತು.

ಕುಸ್ತಿಕಣದ ಮೂಲೆಯಲ್ಲಿ ಸ್ಟೂಲಿನ ಮೇಲೆ ಕುಕ್ಕರಿಸಿದ್ದ ಆರಿಲಸ್ ( ಚಾರ್ಲಿ ಜೆಕಸನ್ )ನಿಗೆ ಪಾಪ್ ಮತ್ತು ಇನ್ನಿಬ್ಬರು ಗಾಳಿ ಹಾಕುತ್ತಿದ್ದರು. ಮೈ ತಿಕ್ಕುತ್ತಿದ್ದರು. ಆರಿಲಸನ ಮುಖದ ಮೇಲೆ ಯಾವ ಗುರುತೂ ಇಲ್ಲದಿದ್ದರೂ ಮೈ ತುಂಬೆಲ್ಲ ಕೆಂಪು ಗುರುತುಗಳು ಕಂಡುಬರುತ್ತಿದ್ದವು. ಅವನ ಎದೆ ಎಲುಬುಗಳೆಲ್ಲ ಮುರಿದುಹೋದಂತೆ ಕಾಣುತ್ತಿತ್ತು. ಆಸ್ಟ್ರೇಲಿಯಾದ ಪ್ರಸಿದ್ಧ ಜಟ್ಟಿಯ ಪರಾಭವ ಜನರನ್ನು ಉತ್ಸಾಹಹೀನರನ್ನಾಗಿ ಮಾಡಿತ್ತು.

ಮತ್ತೆ ಗಂಟೆ ಬಾರಿಸಿತು. ಪಾಪ್ ಮತ್ತು ಸಂಗಡಿಗರು ಆರಿಲಸನನ್ನು ಸ್ಟೂಲಿನಿಂದೆತ್ತಿ ಕಣಕ್ಕೆ ನೂಕಿದರು.

ಮತ್ತೆ ಮೊದಲಿನ ಹಾಡೇ ಆರಂಭವಾಯಿತು. ಮನಬಂದಂತೆ ಕೈಬೀಸಿ ಹೊಡೆಯಲೆತ್ನಿಸುತ್ತಿದ್ದ ಆರಿಲಸನ ಏಟುಗಳನ್ನು ತಪ್ಪಿಸಿಕೊಂಡು ಜೋ ಅವನ ಮೇಲೆ ಮುಷ್ಟಿಪ್ರಹಾರವನ್ನು ಒಂದೇ ಸವನೆ ನಡೆಸತೊಡಗಿದನು.

ಜನ ಕೂಗಿದರು. ಚೇಷ್ಟೆ ಮಾಡಿದರು. ಯಾರೋ ಒಬ್ಬ "ಏ, ಆಸ್ಟ್ರೇಲಿಯಾ, ಜಾಗೃತನಾಗು" ಎಂದು ಒದರಿದ.

ಕಣದ ಸುತ್ತ ಕಟ್ಟಿದ್ದ ಹಗ್ಗದ ಬಳಿ ನಿಂತಿದ್ದ ಪಾಪನನ್ನು ಯಾರೋ ಭುಜತಟ್ಟಿದರು. ಅವನು ತಿರುಗಿ ನೋಡಿದಾಗ ಟೋನಿ ಬಂದಿದ್ದು ಕಾಣಿಸಿತು.

"ಪಾಪಾ! ನಾನಿದನ್ನು ಸಹಿಸಲಾರೆ."

"ನಾನು ಸಹ ಸಹಿಸಲಾರೆ. ನನ್ನ ಹೆಸರು ಹಾಳಾಗಿ ಹೋಗುವ ಹೊತ್ತು ಬಂತು" ಪಾಪ್ ಹೇಳಿದ.

"ಏನಂದಿ?" ಯಾಂತ್ರಿಕವಾಗಿ ಟೋನಿ ನುಡಿದಳು.

ಅವಳು ಮತ್ತೊಮ್ಮೆ ಕಣದತ್ತ ನೋಡಿ ತಲೆ ತಗ್ಗಿಸಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. "ಛೇ! ನಾನು ಹಾಗೆ ಮಾಡಬಾರದಿತ್ತು" ಎಂದು ಅವಳು ತನ್ನಷ್ಟಕ್ಕೆ ಹೇಳಿಕೊಂಡಳು.

"ಅಂದರೆ, ಮುಷ್ಟಿಯುದ್ಧ ನಿಲ್ಲಿಸಿಬಿಡು ಎಂದು ನಾನವನಿಗೆ ಹೇಳಬೇಕೆನ್ನುತ್ತಿಯೇನು ?" ಪಾಪ್ ವ್ಯಂಗವಾಗಿ ಕೇಳಿದ.

"ಅವನು ನಿಲ್ಲಿಸುವದಿಲ್ಲ, ನಿನಗದು ಗೊತ್ತಿದೆ." ಮತ್ತೆ ಅವಳು ಏಕಾಏಕಿಯಾಗಿ "ಜೋ ಅವನ ಮೂಗಿನ ಮೇಲೆ ಹೊಡೆಯುವದೇ ಇಲ್ಲವೆ ?" ಎಂದಳು.

ಜನರು ಒಮ್ಮಿಂದೊಮ್ಮೆ 'ಹೋ' ಎಂದು

ಕೂಗಿದರು. ಆರಿಲಸ್ ಎದುರಾಳಿಯ ಹೊಡೆತಕ್ಕೆ ಹಗ್ಗದ ಬಳಿ ನೆಲಕಂಡಿದ್ದ. ಆತ ಏಳಬೇಕೆನ್ನುವಷ್ಟರಲ್ಲಿ ಆ ಸುತ್ತು ಮುಗಿದ ಗಂಟೆ ಬಾರಿಸಿತು.

ಪಾಪ್ ಅವನತ್ತ ಹೋಗಬೇಕೆನ್ನುವಷ್ಟರಲ್ಲಿ ಟೋನಿ "ಪಾಪಾ, ನನಗೊಂದು ವಿಚಾರ ಹೊಳೆದಿದೆ" ಎಂದು ಹೇಳಿದಳು.

ಆರಿಲಸನಿಗೆ ಉಪಚಾರ ಮಾಡುತ್ತಿದ್ದಾಗ ಪಾಪ್ "ಅವನು ನಿನ್ನ ಭುಜಕ್ಕೆ ತಲೆಯಾನಿಸಿ ನಿನ್ನನ್ನು ಹೊಡೆಯುವಾಗ ಅವನ ತಲೆಯಮೇಲೆ ನಿನ್ನ ತಲೆಯಿಟ್ಟು ಕೆಳಕ್ಕೊತ್ತು. ನಿನ್ನ ಎದೆಗೆ ಅವನು ಹೊಡೆಯದಂತೆ ನೋಡಿಕೊ. ತಿಳಿಯಿತೆ ಮಗು?" ಎಂದ.

ಇದರ ಪರಿಣಾಮ ಮುಷ್ಟಿಯುದ್ಧದ ಇತಿಹಾಸದಲ್ಲಿ ಅಪೂರ್ವವಾದ ರೀತಿಯಲ್ಲಿ ಆಯಿತು. ನಾಲ್ಕನೆಯ ಸುತ್ತು ಆರಂಭವಾಗಿ ಮೊದಲಿನ ಮೂರು ಸುತ್ತುಗಳ ಇತಿಹಾಸದ ಪುನರಾವೃತ್ತಿಯಾದಾಗ ಆರಿಲಸ್ ತನ್ನೆಲ್ಲ ಭಾರವನ್ನು ಜೋನ ತಲೆಯ ಮೇಲೆ ಹಾಕಿ ಕೆಳಕ್ಕೊತ್ತಿದ.

ಆಗ ಪ್ರತ್ಯಕ್ಷ ಮೃತ್ಯುದೇವತೆಯೆ ರಣರಂಗದಲ್ಲಿಳಿದಂತಾಯಿತು. ತನ್ನ ಮೇಲೆ ಬಿದ್ದಿದ್ದ ಭಾರದಿಂದ ಮುಕ್ತನಾಗಲು ಹಿಂದಕ್ಕೆ ಸರಿದು ಜೋ ತಲೆಯೆತ್ತಲು ಅದು ಆರಿಲಸನ ಮೂಗಿಗೆ ನೇರವಾಗಿ ಬಡಿಯಿತು.

ಮುಂದೆ! ಆರಿಲಸನ ಬಾಯಿಯಿಂದ ಪ್ರತ್ಯಕ್ಷ ಹುಲಿಯ ಗರ್ಜನೆ ಹೊರಟಿತೆಂದು ಪ್ರೇಕ್ಷಕರು ನಂತರ ಹೇಳಿದರು. ಅದೆಂತೇ ಇರಲಿ, ಆರಿಲಸನಲ್ಲಿ ಅದ್ಭುತ ಬದಲಾವಣೆಯಾಯಿತು ಎಂಬುದು ನಿಜ.

ಮುಂದಿನದನ್ನು ಒರ್ವ ಸುದ್ದಿಗಾರನ ವರದಿಯಲ್ಲಿದ್ದಂತೆ ಹೇಳುವದೊಳಿತು:

"ಇದುವರೆಗೆ ತನ್ನ ಪ್ರಸಿದ್ಧಿಗೆ ತಕ್ಕಂತೆ ಯಾವದನ್ನೂ ತೋರದ ಚಾರ್ಲಿ ಜಾಗೃತನಾದನು. ಜೋನ ಮೇಲೆ ಅವನ ಪ್ರಹಾರಗಳು ಧಬಧಬೆಯ ನೀರಿನಂತೆ ಅವ್ಯಾಹತವಾಗಿ ಬೀಳತೊಡಗಿದವು. ಅವನ ಏಟುಗಳಲ್ಲಿ ಸುಸಂಬದ್ಧತೆ ಇತ್ತೆಂದು ಹೇಳಲು ಬಾರದಿದ್ದರೂ ಅವು ಅಪೂರ್ವವಾಗಿದ್ದವು. ಈ ರಭಸ ಆರಂಭವಾದ ಕೆಲವೇ ನಿಮಿಷಗಳಲ್ಲಿ ಆರಿಲಸನ ಬಲಮುಷ್ಟಿಯ ಪ್ರಹಾರ ಜೋನನ ಗದ್ದಕ್ಕೆ ಬಿತ್ತು. ಜೋ ಮುಖ ಅಡಿಯಾಗಿ ಬಿದ್ದ. ಒಂದು, ಎರಡು, ಮೂರು–ಹತ್ತು ಎಣಿಸಿದರೂ ಆತ ಏಳಲಿಲ್ಲ. ನೂರು ಎಣಿಸಿದರೂ ಆತನಿಗೆ ಎಚ್ಚರವಾಗುತ್ತಿತ್ತೋ ಇಲ್ಲವೊ!"

ಮುಷ್ಟಿಯುದ್ಧ ಮುಗಿಯಿತು. ಟೋನಿಯ ತಲೆಯಲ್ಲಿ ಗದ್ದಲವೊ ಗದ್ದಲ. ಅವಳು ತನ್ನ ಕುರ್ಚಿಯ ಕೈಗಳನ್ನು ಬಲವಾಗಿ ಹಿಡಿದು ಕುಳಿತಳು. ಅಳಬೇಕೇ ನಗಬೇಕೇ ಅವಳಿಗೆ ತಿಳಿಯದಾಗಿತ್ತು.

ಯಾರೋ ಅವಳ ಭುಜವನ್ನು ಪುನಃ ಪುನಃ ತಟ್ಟಿದರು. ಮಧ್ಯ ವಯಸ್ಸಿನ ಗೃಹಸ್ಥನೊಬ್ಬ "ನಿಮ್ಮಗೂಡ ಒಂದು ನಿಮಿಷ ಮಾತಾಡಬಹುದೇ?" ಎಂದು ಕೇಳಿದ. "ಯಾರು? ಯಾಕೆ?" ಟೋನಿ ಕೇಳಿದಳು. ಆ ಗೃಹಸ್ಥ "ನಾನು ಅಬಿಂಗಫೋರ್ಡ ವಿಶ್ವವಿದ್ಯಾಲಯದ ಉಪಕುಲಗುರು. ನಿಮ್ಮಗೂಡ ಮಾತಾಡಬೇಕು" ಎಂದನು.

ಟೋನಿಯ ಮುಖ ಬಿಳಿಚಿಕೊಂಡಿತು; ಅವಳು ತೆಪ್ಪಗೆ ಆ ಗೃಹಸ್ಥನ ಜೊತೆ ಹೋದಳು.

ಅಲ್ಲಿ ಕಣದಲ್ಲಿ ತನ್ನೆದುರು ಉದ್ದಕ್ಕೆ ನೆಲದ ಮೇಲೆ ಬಿದ್ದಿದ್ದ ಜೋನನ್ನು ಕಂಡು ಆರಿಲಸ್ ಮಹಾಪರಾಧ ಮಾಡಿದವನಂತೆ "ಅಯ್ಯೋ, ದೇವರೆ!" ಎಂದು ಉದ್ಗಾರ ತೆಗೆದ.

ಮುಂದೆ ಅವನಿಗೆ ಯಾವದೂ ಸ್ಪಷ್ಟವಾಗಿ ತಿಳಿಯಲಿಲ್ಲ. ಯಾರೋ ಅವನನ್ನು ಉಡುಪು ಧರಿಸುವ ಕೋಣೆಗೆ ಕರೆದೊಯ್ದರು. ಕೆಲವರು ಅವನ ಮೈ ನೋವಾಗುವಂತೆ ತಿಕ್ಕಿದರು. ಕೆಲವರು ಅವನ ತಲೆಯನ್ನು ನಳದ ಬುಡಕ್ಕೆ ಹಿಡಿದರು.

ಮತ್ತೆ ತನ್ನ ಎಂದಿನ ಉಡುಪನ್ನು ಧರಿಸಿ ತಾನೊಬ್ಬನೇ ಕುಳಿತಿದ್ದು ಅವನ ಲಕ್ಷ್ಯಕ್ಕೆ ಬಂತು. ಕುರ್ಚಿಯಲ್ಲಿ ಅವನು ಕುಸಿದನು. ಅವನ ಹ್ಯಾಟು ಅವನ ಮೂಗಿನ ಮೇಲೆ ಬಂದು ಕುಳಿತಿತು. ಅದು ಸರದಾರನೋರ್ವನ ಶಿರಸ್ತ್ರಾ

ಣವಂತೆ ಅವನಿಗೆ ಭಾಸವಾಯಿತು. ಅವನ ಬಳಿ ಯಾರೋ ಬಂದ ಸದ್ದಾಯಿತು.

ಅವನ ಶಿರಸ್ತ್ರಾಣವನ್ನು ಬಿಳಿಯ ಕೈಯೊಂದು ಮೇಲಕ್ಕೆತ್ತಿತು. ಮೃದುವಾದ ಚೆಂದುಟಿಗಳು ಅವನ ಒರಟಾದ ಒಣಗಿದ ತುಟಿಗಳ ಮೇಲೆ ತಮ್ಮ ಮುದ್ರೆಯನ್ನೊತ್ತಿದವು. ಅವನ ಕಿವಿಯಲ್ಲಿ ಮೃದು ಮಧುರವಾದ ಧ್ವನಿಯೊಂದು, “ಆರಿ, ಆರಿ, ಪ್ರಿಯತಮಾ, ಬಹಾದ್ದೂರ ನೀನು” ಎಂದುಸಿರಿತು.

ನಿಜವಾಗಿಯೂ ಅವನು ಆದಿತ್ಯವಾರವಿಡೀ ಹಾಸಿಗೆಯಲ್ಲಿ ಬಿದ್ದಿರಬೇಕಾಗಿತ್ತು. ಆದರೆ ಪ್ರೇಮದ ಜ್ವರವೇರಿದ್ದ ಆತ ಸುಮ್ಮನೆ ಕೂಡ್ರುವಂತಿರಲಿಲ್ಲ. ತನ್ನ ಪ್ರೇಯಸಿಯನ್ನು ಆತ ಭೆಟ್ಟಿಯಾಗಬೇಕಿತ್ತು; ಅಂತೇ ಸಂಜೆಯ ಹೊತ್ತಿಗೆ ಆತ ಹಾಸಿಗೆ ಬಿಟ್ಟೆದ್ದು ಉಡುಪು ಧರಿಸಿ ಕಷ್ಟವಾಗುತ್ತಿದ್ದರೂ ಹೊರಗೆ ನಡೆದ.

ಚರ್ಚಿನ ಬಳಿ ರಸ್ತೆಯಲ್ಲಿ ತಿರುಗಿದಾಗ ಅವನೆದುರು ದೊಡ್ಡ ಆತಂಕವೊಂದು ಬಂತು. ಉಪಕುಲಗುರುಗಳೂ ಅವರ ಪತ್ನಿಯೂ ಎದುರಿಗೆ ಬರುತ್ತಿದ್ದರು. ತಿರುವಿನಲ್ಲಿ ಕಾಣದ್ದರಿಂದ ಅವಳು ಆರಿಲಸನಿಗೆ ಹಾಯ್ದು ಬಿಟ್ಟಳು. ಆರಿಲಸ್ ಎದೆಹಿಡಿದುಕೊಂಡು ‘ಹಾ’ ಎಂದ.

ಉಪಕುಲಗುರುಗಳ ಪತ್ನಿ “ಎಲಾ! ಬ್ರೌನ್! ಏನಾಗಿದೆ? ಮತ್ತೆ ನಿನ್ನ ಮೂಗು!” ಎಂದಳು.

ಆರಿಲಸ್ ಯಾರದೋ ಸಹಾಯವನ್ನಪೇಕ್ಷಿಸುವವನಂತೆ ಹತಾಶ ಭಾವದಿಂದ ಸುತ್ತಲೂ ಮತ್ತೆ ಮೇಲೆ ಆಕಾಶದತ್ತಲೂ ನೋಡಿದ. ಆ ಸಹಾಯ ಅನಿರೀಕ್ಷಿತವಾಗಿ ಅವನ ಉಪಕುಲಗುರುಗಳಿಂದ ಬಂತು.

“ಹ್ಞಾ! ನಿಸರ್ಗಪ್ರಿಯರು! ಏನು ಹೇಳಲಿ ಇವರ ಕಥೆಯನ್ನು? ಈ ಹುಚ್ಚು ಹುಡುಗ ಕೆಳಗೆ ಬಿದ್ದ ಹಕ್ಕಿಯ ಮರಿಯನ್ನು ಅದರ ಗೂಡಿಗೆ ಸೇರಿಸಲೆಂದು ಮರವೇರಿ ಕೆಳಗೆ ಬಿದ್ದು ಈ ಅವಸ್ಥೆಗೀಡಾಗಿದ್ದಾನೆ” ಎಂದು ಉಪಕುಲಗುರುಗಳು ಹೇಳಿ ತಮ್ಮ ಹೆಂಡತಿಯ ಕುತೂಹಲವನ್ನು ಶಾಂತಗೊಳಿಸಿದರು.

ಮತ್ತೆ ಅವರು ಆರಿಲಸನತ್ತ ತಿರುಗಿ, “ಆ ಹಕ್ಕಿಯ ಮರಿ ಅಪರೂಪದ ವಸ್ತುವಾಗಿತ್ತಲ್ಲವೇ ಬ್ರೌನ್? ಆಸ್ಟ್ರೇಲಿಯದ ಹಕ್ಕಿ ಅದು ಎಂದು ಕಾಣುತ್ತೆ. ಅದರ ಹೆಸರು ಏನೊ ‘ವಿಜನ್’ ಎಂದಿದ್ದೆಯಲ್ಲವೆ?” ಎಂದರು.

ಉಪಕುಲಗುರುಗಳು ಈ ಮಾತುಗಳನ್ನಾಡುವಾಗ ಕಣ್ಣು ಮಿಟುಕಿಸಿದ್ದು ಆರಿಲಸನ ಗಮನಕ್ಕೆ ಬಾರದಿರಲಿಲ್ಲ.



## ಅಹಿಂಸೆ : ವೆಲ್ಸ್ ಮಾದರಿ

ಆಂಗ್ಲ ಸಾಹಿತಿ ಎಚ್. ಜಿ. ವೆಲ್ಸರೊಡನೆ ಭಾರತೀಯ ಪತ್ರಿಕಾಕಾರನೊಬ್ಬನು ಅಹಿಂಸೆಯ ಕುರಿತು ಅಭಿಪ್ರಾಯವನ್ನು ಕೇಳಿದ.

ವೆಲ್ಸ್ ಹೇಳಿದರು : “ಈ ಪ್ರಶ್ನೆಯ ಬಗ್ಗೆ ದಾರ್ಶನಿಕ ವಿವೇಚನೆಯನ್ನು ನಾನು ಮಾಡಲಾರೆ; ಆದರೆ ದನ ಹುಲ್ಲು ತಿನ್ನುವುದನ್ನು ನಾನು ನೋಡಿದ್ದೇನೆ; ಹುಲ್ಲು ದನವನ್ನು ತಿನ್ನುವದನ್ನು ನೋಡಿಲ್ಲ. ಈ ಅನುಭವದ ಮಾತನ್ನಷ್ಟೇ ನಾನು ಹೇಳಬಲ್ಲೆ.”

# ಸಂತಾಲರ ಸಂಪ್ರದಾಯಗಳು

"ಸಂತಾಲರ ಬಂಡಾಯ" (೧೮೮೫) ದಿಂದ ಇತಿಹಾಸದಲ್ಲಿ ಪ್ರಸಿದ್ಧರಾದ ಸಂತಾಲರು ಬಿಹಾರದ ಆದಿವಾಸಿ ಜನಾಂಗಗಳಲ್ಲಿ ಮುಖ್ಯರು. ಕಳೆದ ಜನಗಣನೆಯಲ್ಲಿ ಅವರ ಸಂಖ್ಯೆ ೧೭,೨೦,೫೨೯ ಇತ್ತು.

ಸಂತಾಲ ಜನರು ನಾಗರಿಕತೆಯಿಂದ ಇನ್ನೂ ದೂರವಾಗಿಯೇ ಇದ್ದಾರೆ. ನಿರಕ್ಷರಿಗಳೇ ಬಹಳವಾಗಿರುವ ಅವರಲ್ಲಿ ಅನಾದಿ ಕಾಲದ ರೂಢಿ ಸಂಪ್ರದಾಯಗಳು ಇಂದಿಗೂ ಉಳಿದುಕೊಂಡಿವೆ. ವಿಶೇಷವಾಗಿ ವಿವಾಹ, ವಿವಾಹವಿಚ್ಛೇದ ಸಮಾಜ ಬಹಿಷ್ಕಾರಾದಿ ವಿಷಯಗಳಲ್ಲಿ ಅವರ ರೂಢಿಗಳು ತುಂಬ ಕೌತುಕದವಾಗಿವೆ.

ನೀವು ಸಂತಾಲರಲ್ಲಿ ಜನ್ಮತಾಳಿದರೆ—ಗಂಡಸರಿರಲಿ ಹೆಂಗಸರಿರಲಿ—ಲೈಂಗಿಕ ಸಂಬಂಧದಲ್ಲಿ ಸಾಕಷ್ಟು ಸ್ವತಂತ್ರರಾಗಿರುವಿರಿ. ಮದುವೆಗೆ ಮೊದಲೇ ಹುಡುಗ-- ಹುಡುಗಿ ನಿಸ್ಸಂಕೋಚವಾಗಿ ಬೆರೆಯಬಹುದು. ಈ ಅವಸ್ಥೆಯಲ್ಲಿ ಅವರಲ್ಲಿ ದೇಹಸಂಬಂಧವಾದರೆ ಆಕ್ಷೇಪವೇನೂ ಇಲ್ಲ.



## ಬಿಠಲಾ

ಆದರೆ ಸಗೋತ್ರದಲ್ಲಾಗಲಿ ನಿಕಟ ರಕ್ತ ಸಂಬಂಧದವರಲ್ಲಾಗಲಿ ದೇಹಸಂಬಂಧಕ್ಕೆ ಕಡು ನಿಷೇಧವಿದೆ. ಇಂಥ ಸಂಬಂಧವಾದದ್ದು ಪ್ರಕಟವಾದರೆ ಇಬ್ಬರೂ ಜಾತಿ ಬಹಿಷ್ಕಾರಕ್ಕೊಳಗಾಗುವರು. ಈ ಜಾತಿ ಬಹಿಷ್ಕಾರಕ್ಕೆ "ಬಿಠಲಾ" ಎಂದು ಹೆಸರು. ಬಿಠಲಾದ ಶಿಕ್ಷೆ ಮೈನಡುಗಿಸುವಷ್ಟು ಘೋರವಾಗಿದೆ. ಸಂತಾಲರಲ್ಲಿ ಲೈಂಗಿಕ ಸ್ವಾತಂತ್ರ್ಯ ಬೇಕಾದಷ್ಟಿದ್ದರೂ ಇದ್ದಬಿದ್ದ ನಿಯಮಗಳನ್ನು ಮುರಿಯುವುದು ಎಷ್ಟು ಭಯಂಕರ ಪರಿಣಾಮವನ್ನುಂಟು ಮಾಡುವುದೆಂದು ಇದು ತೋರಿಸುತ್ತದೆ.

ಸಂಬಂಧಪಟ್ಟವರ ಮೇಲಿನ ಆರೋಪವನ್ನು ಗ್ರಾಮದ ಮುಖ್ಯಸ್ಥನ ನೇತೃತ್ವದಲ್ಲಿ ಸಾಮೂಹಿಕವಾಗಿ ಒಂದು ಬೇಸಗೆಯ ದಿನ ವಿಚಾರಿಸಿ, ಆರೋಪ ಸಿದ್ಧವಾದರೆ ಒಂದು ನಿಶ್ಚಿತ ದಿನ ಬಿಠಲಾ ವಿಧಿ ಜರಗುತ್ತದೆ. ಅಂದು ಮುಂಜಾನೆ ಸಾವಿರಗಟ್ಟಳೆ ಸಂತಾಲರು ಅಪರಾಧಿಯಿರುವ

ಗ್ರಾಮದಲ್ಲಿ ಕೊಳಲು, ಡೋಲು, ತುತೂರಿ ಮೊದಲಾದ ವಾದ್ಯಗಳಿಂದಲೂ ಧನುರ್ಬಾಣಾದಿಗಳಿಂದಲೂ ಸನ್ನದ್ಧರಾಗಿ ಸೇರುತ್ತಾರೆ. ಅವರು ಹರದಾರಿಗಟ್ಟಳೆ ದೂರ ಕೇಳಿಸುವಂತೆ ಅಸಾಧ್ಯ ತುಮುಲವೆಬ್ಬಿಸುತ್ತ ಅಪರಾಧಿಯ ಮನೆಗೆ ಮುತ್ತಿಗೆ ಹಾಕಿ ಅಶ್ಲೀಲ ಹಾಡುಗಳನ್ನು ಹಾಡುತ್ತ ಒಂದು ಉದ್ದನ್ನ ಬಿದಿರ ತುದಿಯ ಪೊಳ್ಳಿನಲ್ಲಿ ಸುಟ್ಟ ಕಟ್ಟಿಗೆ ತುರುಕಿ ಅದಕ್ಕೆ ಕಸಬರಿಗೆ ಮತ್ತು ಎಂಜಲು ಪತ್ರಾವಳಿ ಕಟ್ಟಿ ಮನೆಯ ಮುಂದೆ ಅದನ್ನು ಹುಗಿದು ಧ್ವಜಸ್ತಂಭದಂತೆ ನಿಲ್ಲಿಸುತ್ತಾರೆ. ಮನೆಯ ಪಾತ್ರಪರಡಿಗಳನ್ನೆಲ್ಲ ಒಡೆದು ಹಾಕಿ ಸುತ್ತಲೂ ಉಗುಳಿ ಹೊಲಸು ಮಾಡಿ ಹೊರಟುಹೋಗುತ್ತಾರೆ.

ಬಿಟಲಾಕ್ಕೆ ಗುರಿಯಾದವರ ಅನ್ನ-ನೀರಿನ ಸಂಪರ್ಕವನ್ನು ಇಡೀ ಸಮಾಜವೇ ಹರಿದುಕೊಳ್ಳುವುದಲ್ಲದೆ ಇಬ್ಬರೂ ಅಪರಾಧಿಗಳ ತಂದೆ-ತಾಯಿ ಬಂಧುಬಾಂಧವರಷ್ಟೇ ಅಲ್ಲ, ಕೆಲವೇಳೆ ಅವರ ಊರವರು ಕೂಡ ಬಹಿಷ್ಕಾರಕ್ಕೊಳಗಾಗುವುದುಂಟು. ಅವರಿಗೆ ಸಮಾಜದಿಂದ ಅಸಹ್ಯ ಉಪದ್ರವಗಳು ಬಗುವುದರಿಂದ ಅವರು ಬೇಗನೆ ಸಮಾಜಕ್ಕೆ ಶರಣಾಗತರಾಗುವರು.

ಬಹಿಷ್ಕೃತರನ್ನು ಪುನಃ ಜಾತಿಯಲ್ಲಿ ಸೇರಿಸಿಕೊಳ್ಳಲು "ಜಾಮುಜಾತಿ" ಎಂಬ ವಿಶೇಷ ಸಮಾರಂಭ ಜರಗುತ್ತದೆ. ಇದಕ್ಕಾಗಿ ಬಹಿಷ್ಕೃತನು ಸಮಾಜಕ್ಕೆ ಭೋಜನ ಏರ್ಪಡಿಸಬೇಕಾಗುವುದಲ್ಲದೆ ಸಮಾಜದ ಹಿರಿಯರ ಮುಂದೆ ಕ್ಷಮಾಭಿಕ್ಷೆ ಬೇಡಿ ಅವರಿಗೆ ನಿಶ್ಚಿತ ಧನವನ್ನು ದಂಡ ತೆರಬೇಕಾಗುತ್ತದೆ. ಅವರು ಸೂರ್ಯನಮಸ್ಕಾರ ಮಾಡಿ ನೀರಿನಿಂದ ಅಪರಾಧಿಯ ಮುಖ ತೊಳೆದು ಅವನನ್ನು ಪಾಪಮುಕ್ತಮಾಡುತ್ತಾರೆ.

## ಬಪಲಾ

ಸಂತಾಲರ ವಿವಾಹಕ್ಕೆ "ಬಪಲಾ" ಎಂದು ಹೆಸರು. ಹೆಣ್ಣು-ಗಂಡು ಪ್ರಾಯಪ್ರಬುದ್ಧರಾದ ಮೇಲೆ (ಸಾಮಾನ್ಯವಾಗಿ ೧೮-೨೨ ವಯಸ್ಸಿನ ನಡುವೆ) ಸ್ವಂತ ಇಚ್ಛೆಯಂತೆ ಮದುವೆಯಾಗುತ್ತಾರೆ. ಮೇಲೆ ಹೇಳಿದ ನಿಷಿದ್ಧ ಸಂಬಂಧ ಮತ್ತು ಸಗೋತ್ರ ಹೊರತು ವಯಸ್ಸಿನ ಅಂತರ ಮೊದಲಾದ ಯಾವ ನಿರ್ಬಂಧವೂ ಇಲ್ಲ. ಉಭಯತರ ತಂದೆ-ತಾಯಿಗಳ ಅನುಮತಿ ಅಗತ್ಯ. ಅವರಲ್ಲಿ ೧೨ ಗೋತ್ರಗಳಿದ್ದು ಕೆಲ ಗೋತ್ರಗಳು ಕೆಲವಕ್ಕೆ ಶತ್ರುಗಳೆಂದು ಭಾವಿಸಲ್ಪಟ್ಟಿವೆ. ಅಂಥವರೊಳಗೂ ಹೆಣ್ಣು ಗಂಡು ಆಗುವದಿಲ್ಲ.

ಮದುವೆಯ ವಿಧಿಯಲ್ಲಿ ಮುಖ್ಯ ಅಂಗಗಳೆಂದರೆ ಸಿಂದೂರ ಹಚ್ಚುವುದು ಮತ್ತು ಸಹಭೋಜನ. ವಧುವನ್ನು ಅವಳ ಕಡೆಯವರು ಒಂದು ಬುಟ್ಟಿಯಲ್ಲಿ ಕುಳ್ಳಿರಿಸಿ ಹೆಗಲ ಮೇಲೇರಿಸಿಕೊಳ್ಳುತ್ತಾರೆ. ಗಂಡಿನವರು ವರನನ್ನು ಹೆಗಲ ಮೇಲೇರಿಸಿಕೊಳ್ಳುತ್ತಾರೆ. ವರವಧುವಿನ ಹಣೆಗೆ ಸಿಂದೂರ ಹಚ್ಚುತ್ತಾನೆ. ಅನಂತರ ವಧೂವರರು ಒಂದೇ ತಾಟಿನಲ್ಲಿ ಊಟಮಾಡುತ್ತಾರೆ.

ಮದುವೆಯಾದ ಮೇಲೆ ವಧೂವರರು ಪ್ರತ್ಯೇಕ ಮನೆ ಮಾಡುವುದು ಸಾಧಾರಣ ರೂಢಿ; ಆದರೆ ಅನಿವಾರ್ಯವಲ್ಲ.

ಸಂತಾಲರಲ್ಲಿ ಅನೇಕ ವಿವಾಹ ಪ್ರಕಾರಗಳಿವೆ.

"ಕಿರಿಂಗ ಬಹು" ಪದ್ಧತಿಯಲ್ಲಿ ವಧುವನ್ನು ತೆರ ಕೊಟ್ಟು ತರುವರು. "ರಯೀಬರ" ಎಂಬ ವಿವಾಹ ಘಟಕರ ಮುಖಾಂತರ ಮೊದಲು ಸಂಧಾನ ನಡೆಸಿದ ನಂತರ ವರನ ಮಿತ್ರರು ಹೆಣ್ಣು ನೋಡಲು ಅವಳ ಊರಿಗೆ ಹೋಗಿ ಸಂತಾಲರ "ಜೋಗಮಾಂಝಿ" (ಊರಗೌಡ) ನಲ್ಲಿ "ನಾವು ಪಾತ್ರ ನೋಡಲು ಬಂದಿದ್ದೇವೆ" ಎನ್ನುತ್ತಾರೆ. ಅವನು ಕರೆ ಕಳಿಸಿದೊಡನೆ ಇಬ್ಬರು ಸಖಿಯರೊಡನೆ ವಧು ಅಲ್ಲಿಗೆ ಬರುತ್ತಾಳೆ. ವರನ ಕಡೆಯವರಿಗೆ ಮೆಚ್ಚಿಕೆಯಾದರೆ ವಧುವಿನ ಸಖಿಯರು ಹಾಗೆಯೇ ವರನಲ್ಲಿಗೆ ಹೋಗಿ ಬರುವರು. ಅನಂತರ ಯಾವುದಾದರೂ ಜಾತ್ರೆ ಅಥವಾ ಸಂತೆಯಲ್ಲಿ ವಧೂವರರು ಬೆರೆತು ಪರಸ್ಪರ ಒಪ್ಪುವರು. ಆ ಮೇಲೆ ವಿವಾಹ ನಿಶ್ಚಿತವಾಗಿ ನಿರ್ದಿಷ್ಟ ದಿನದೊಳಗೆ

ವರನು ತೆರದ ಹಣ ತುಂಬಬೇಕು. ಇದು ಮೂರರಿಂದ ಏಳು ರೂಪಾಯಿ ಇರಬಹುದು.

ಹಗ್ಗದಲ್ಲಿ ನಿರ್ದಿಷ್ಟ ದಿನಗಳಷ್ಟು ಗಂಟುಗಳನ್ನು ಹಾಕಿಟ್ಟುಕೊಂಡು ದಿನವೂ ಒಂದೊಂದು ಗಂಟು ಬಿಚ್ಚಿ ಈ ಜನ ದಿನಗಳನ್ನೆಣಿಸುತ್ತಾರೆ! ತೆರವನ್ನು ಕೊಟ್ಟ ಬಳಿಕ ಮದುವೆಯ ದಿನ ಗೊತ್ತಾಗುತ್ತದೆ. ಭಾರಿ ಉತ್ಸಾಹದಿಂದ ಚಿತ್ರ ವಿಚಿತ್ರವಾಗಿ ವಿವಾಹೋತ್ಸವವನ್ನು ಆಚರಿಸಲಾಗುತ್ತದೆ.

"ಘರ ಜವಾಯಿ" ಮತ್ತು "ಘರದೀ ಜವಾಯಿ" ಇವು "ಮನೆಯಳಿಯ" ಪದ್ಧತಿಗಳು. ಮೊದಲನೆಯದರಲ್ಲಿ ವರ ಬಂದು ವಧುವಿನ ಮನೆಯಲ್ಲಿ ನಿರಂತರವಾಗಿ ಮಗನಂತೆಯೇ ವಾಸವಾಗುತ್ತಾನೆ. ಎರಡನೆಯದರಲ್ಲಿ ನಾಲ್ಕೈದು ವರ್ಷ ಕಾಲ ಹೆಂಡತಿಯ ಮನೆಯಲ್ಲಿ ವರನು ಪ್ರತಿಫಲವಿಲ್ಲದೆ ದುಡಿಯಬೇಕು. ಎರಡರಲ್ಲಿಯೂ ಹೆಣ್ಣಿನವರಿಗೆ ತೆರ ಸಿಗಲಾರದು.

ಗೋತ್ರ ನಿಷೇಧದಿಂದ ಪ್ರೇಮಿಕೆಯೊಡನೆ ವಿವಾಹ ಅಶಕ್ಯವಾದರೆ ಸಂತಾಲ ಸಮಾಜ ಅದಕ್ಕೊಂದು ಉಪಾಯ ಕಲ್ಪಿಸಿದೆ. ಪ್ರಣಯಿಯು ಸ್ವಂತ ಖರ್ಚಿನಿಂದ ಅವಳನ್ನು ಹೆಸರಿನ ಪೂರ್ತಿ ಯಾರಾದರೊಬ್ಬನಿಗೆ ಮದುವೆ ಮಾಡಿಸಬೇಕು. ಅವನಿಗೆ "ತಾಳಿ ಕಟ್ಟೋಕ್ಕೂಲಿ" ಸಿಗುತ್ತದೆ. ಅನಂತರ ಗುಪ್ತ ರೀತಿಯಲ್ಲಿ ಪ್ರಣಯಿಗಳು ಬೆರೆತು ಸುಖಿಸಲು ಅಡ್ಡಿಯಿಲ್ಲ.

ಆದರೆ ಎಲ್ಲಕ್ಕಿಂತ ರೊಮಾಂಟಿಕ ವಿವಾಹವೆಂದರೆ "ಇತುಕ" ಪದ್ಧತಿಯದು. ಹೆಣ್ಣಿನ ಕಡೆಯವರ ವಿರೋಧವಿದ್ದರೂ ಮೆಚ್ಚಿದ ಸುಭದ್ರೆಯನ್ನು ಮಾಡಿಕೊಂಡೇ ಬಿಡುವೆನೆಂಬ ಸಾಹಸಾರ್ಜುನರು ಮಾತ್ರ ಈ ಪದ್ಧತಿಗೆ ಕೈಹಾಕುತ್ತಾರೆ.

## ಇತುಕ

"ಇತುಕ" ಎಂದರೆ ಬಣ್ಣ ಹಚ್ಚುವುದು. ತರುಣನು ತನ್ನ ಗೆಳೆಯರ ಸಂಗಡ ಮುಂಚಿತವಾಗಿ ಹೊಂಚು ಹಾಕಿ, ತನ್ನ ಮನದನ್ನೆಯನ್ನು ಬೀದಿಯಲ್ಲೋ ಸಂತೆ ಜಾತ್ರೆಯಲ್ಲೋ ಅಕಸ್ಮಾತ್ತಾಗಿ ಹಿಡಿದು ಅವಳ ಹಣೆಗೆ ಸಿಂದೂರ ಅಥವಾ ಅದು ಸಿಗದಿದ್ದರೆ ಬೀದಿಯ ಕೆಂಧೂಳಿ ತೆಗೆದು ಹಚ್ಚಿಬಿಡುತ್ತಾನೆ. ಹೀಗೆ ಮಾಡಿದರೆ ವಿಧಿವತ್ತಾಗಿ ಅವನು ಅವಳನ್ನು ಮದುವೆಯಾದಂತೆಯೇ.

ಇಷ್ಟು ಮಾಡಿ ಅವನು ಜೀವ ಕೈಯಲ್ಲಿ ಹಿಡಿದುಕೊಂಡು ಓಡಬೇಕು. ಹೆಣ್ಣಿನ ಕಡೆಯವರು ಅವನನ್ನು ಬೆನ್ನಟ್ಟದೆ ಬಿಡುವುದಿಲ್ಲ. ಅವರು ಅವನ ಮನೆಯನ್ನು ಮುತ್ತಿ ಸಿಕ್ಕಿದ್ದನ್ನೆಲ್ಲ ಹಾಳುಗೆಡಹುತ್ತಾರೆ. ಹುಡುಗ ಸಿಕ್ಕಿದರೆ ಅವನನ್ನು ಚೆನ್ನಾಗಿ ಥಳಿಸಿ ಅರೆಜೀವಮಾಡಿ 'ಅಂಗಳದಲ್ಲಿ' ಚೆಲ್ಲಿಕೊಟ್ಟು ಹೋಗುತ್ತಾರೆ.

ಅನಂತರ ಅವನ ಮನೆಯ ಎರಡು ಆಡುಗಳನ್ನು ಕೊಡಲಿಯಿಂದ ಕಡಿದು ಅವನ ಎತ್ತುಗಳನ್ನು ಅಟ್ಟಿಕೊಂಡು ಅವರು ಜಾತಿಯ ಗೌಡನಲ್ಲಿಗೆ ಹೋಗಿ ದೂರು ಕೊಡುತ್ತಾರೆ. ಅವನು ಗಂಡಿನವರಿಂದ ಹೆಣ್ಣಿನವರಿಗೆ ಹದಿನಾರು ರೂಪಾಯಿ ದಂಡ ಕೊಡಿಸುತ್ತಾನೆ.

ಎಕಂ ಒಡೆಚ ದೃಶ್ಯ



ಹೋರಾಟದಲ್ಲಿ ಯುವಕ ಸತ್ತರೆ ಅದು ಅವನ ಉದ್ಧಾಮತನಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ಬಗೆಯಲಾಗುವದು.

ತದ್ವಿರುದ್ಧವಾಗಿ "ನಿರವೊಲೋಕ" ದಲ್ಲಿ ಪ್ರೇಮಿಕೆಯೇ ಮುಂದುವರಿದು ಹೋಗುತ್ತಾಳೆ. ಮನಸು ಕೂಡಿದರೂ ಗಂಡ, ಹೆಜ್ಜೆಮುಂದಿಡಲು ಹಿಂಜರಿದರೆ 'ಜೋಗ ಮಾಂಝಿ' (ಊರಗೌಡ) ಯ ಹತ್ತಿರ ಹೇಳಿ ಅವಳು ಗಂಡಿನ ಮನೆಗೆ ತಾನೇ ಬಂದು ಎರಡುದಿನ ಅಲ್ಲಿ ಉಳಿಯುವಳು.

ಆಗ ಮದುವೆಗೆ ಒಪ್ಪಿಗೆಯಾದರೆ ಸರಿ. ಇಲ್ಲದಿದ್ದರೆ ಆ ದಿಟ್ಟೆ ಮುಂಗೈ ಕಸುವು ತೋರಿಸಬಹುದು! ಅವಳು ಪ್ರಿಯಕರನ ಮನೆಯಲ್ಲಿ ಹೊಕ್ಕು ಒಂದು ಮೂಲೆಯಲ್ಲಿ ಪಟ್ಟುಹಿಡಿದು ಕುಳಿತುಬಿಡುತ್ತಾಳೆ. ಹುಡುಗನ ತಾಯಿ ಅವಳನ್ನು ಓಡಿಸಲು ತಂಬಾಕಿನೆಲೆಯ ಹೊಗೆ ಹಾಕಬಹುದು. ಎಲ್ಲ ಯತ್ನದ ನಂತರವೂ ಮದುವೆಗೆ ಒಪ್ಪಿಗೆಯಾಗದೆ ಹೋದರೆ ಇಬ್ಬರಿಗೂ ಊರ ಹಿರಿಯರು ದಂಡ ವಿಧಿಸುವರು.

ಸಂತಾಲರಲ್ಲಿ ಬಹುಪತಿ ವಿವಾಹವೂ ಇದೆ. ಹುಡುಗಿಯ ಮದುವೆ ಗಂಡನ ಎಲ್ಲ ತಮ್ಮಂದಿರೊಡನೆಯೂ ಆಗುತ್ತದೆ. ಆದರೆ ಸಭ್ಯತೆಯನ್ನು ತೀರ ಅಲಕ್ಷಿಸದೆ ಅವಳು ಇತರ ಗಂಡಂದಿರೊಡನೆ ತೀರ ಬಹಿರಂಗವಾಗಿ ಸಂಪರ್ಕವಿಟ್ಟುಕೊಳ್ಳುವುದಿಲ್ಲ.

ಸಂತಾಲರಲ್ಲಿ ವಿವಾಹವಿಚ್ಛೇದವು ಸರಳವಾಗಿದೆ. ಹಿಂದಿನ ಕಾಲದಲ್ಲಿ ಹೆಂಡತಿ ವ್ಯಭಿಚಾರಿಣಿಯಾಗಿದ್ದರೆ ಅಥವಾ ಮಾಟಗಾತಿಯಾಗಿದ್ದರೆ ಮಾತ್ರ ವಿಚ್ಛೇದವಾಗುತ್ತಿತ್ತಂತೆ. ಆದರೆ ಈಗ ಗಂಡನ ಮನೆಯಲ್ಲಿ ಕೂಡಿ ನಡೆಯದಿದ್ದರೆ, ಗಂಡಹೆಂಡಿರಲ್ಲಿ ಹೊಂದಿಕೆಯಾಗದಿದ್ದರೆ ಅಥವಾ ಗಂಡನು ಎರಡನೇ ಮದುವೆಯಾದದ್ದು ಹೆಂಡತಿಗೆ ಹಿಡಿಸದಿದ್ದರೆ ವಿಚ್ಛೇದವಾಗುತ್ತದೆ.

## ಎಕಂ ಒಡೆಚ

ವಿಚ್ಛೇದವಾಗಬೇಕಿದ್ದರೆ ಎರಡೂ ಊರುಗಳ ಗೌಡರ ನೇತೃತ್ವದಲ್ಲಿ ಊರವರು ಸೇರುತ್ತಾರೆ. ವಿಚ್ಛೇದ ವಿಧಿಗೆ "ಎಕಂ ಒಡೆಚ" (ಎಲೆ ಹರಿಯುವುದು) ಎಂದು ಹೆಸರು.

ಗಂಡನು ಪೂರ್ವಾಭಿಮುಖನಾಗಿ ಮತ್ತು ಹೆಂಡತಿ ಅವನೆದುರು ಪಶ್ಚಿಮಾಭಿಮುಖಿಯಾಗಿ ನಿಂತು ತಮ್ಮ ಮುಂದೆ ಒಂದು ಗಿಂಡಿಯಲ್ಲಿ ನೀರು ತುಂಬಿಟ್ಟುಕೊಳ್ಳುತ್ತಾರೆ. ಗೌಡನು ನೆರೆದವರನ್ನು ಸಂಬೋಧಿಸಿ "ಸಿಂಗ ಬೊಂಗ (ಸೂರ್ಯ), ಪಂಚ ಪರ್ವತ ದೇವತೆಗಳು ಹಾಗು ಪುರುಷರ ದಯೆಯಿಂದ . . . . ನಾವು ನಿಮ್ಮಿಬ್ಬರನ್ನು ಲಾಡ ಮತ್ತು ಬಂದೋ ಒಳ್ಳಿಗಳಿಂದ ಒಂದುಗೂಡಿಸಿ ಬಂಧಿಸಿದ್ದೆವು . . . . ಈ ಬಂಧನ ಕಲ್ಲಿನಂತೆ ದೃಢವಾಗಿರುವುದೆಂದು ನಂಬಿದ್ದೆವು. ಆದರೆ ನಿಮ್ಮಿಬ್ಬರಲ್ಲಿ ದುರ್ದೈವದಿಂದ ಮನಸ್ತಾಪವಾಗಿದೆ. ನಿಮ್ಮ ನಿಮ್ಮ ಮನಸನ್ನು ಇನ್ನೊಮ್ಮೆ ಸರಿಯಾಗಿ ಪರೀಕ್ಷಿಸಿಕೊಳ್ಳಿರಿ. ಹಿಂದುಗಡೆ ನಾವು ನಿಮ್ಮನ್ನು ಅಗಲಿಸಿದೆವೆಂಬ ಶಬ್ದ ಬರಬಾರದು. ಪುರುಷನೆ, ಹೆಂಡತಿಯನ್ನು ಬಿಡುವುದು ಖಂಡಿತವಾಗಿದ್ದರೆ ಸಿಂಗಬೊಂಗ, ಗುಡ್ಡದ ದೇವತೆಗಳು ಮತ್ತು ಪುರುಷರನ್ನು ನೆನೆದು ಎಲೆಗಳನ್ನು ಹರಿದು ಹಾಕು" ಎನ್ನುತ್ತಾನೆ.

ಅನಂತರ ಗಂಡನು ಎಡಗಾಲ ಮೇಲೆ ನಿಂತು ಸೂರ್ಯನನ್ನು ವಂದಿಸಿ ಜನರು ಕೊಟ್ಟ ಮೂರು ಎಲೆಗಳನ್ನು ಹರಿದು ಹಾಕಿ ಎಡಗಾಲಿಂದ ಗಿಂಡಿಯನ್ನೊದ್ದು ನೀರುನ್ನು ಉರುಳಿಸಿಬಿಡುವನು. ಈ ಹೆಂಗಸಿನ ಸಂಸರ್ಗವನ್ನು ಇನ್ನೆಂದೂ ಮಾಡುವುದಿಲ್ಲೆಂದು ಪ್ರತಿಜ್ಞೆ ಮಾಡುವನು. ಹೆಂಗಸೂ ಇದೇ ವಿಧಿಯನ್ನು ಅನುಸರಿಸುವಳು.

ಎಲೆ ಸರಿಯಾಗಿ ಹರಿಯದಿದ್ದರೆ ಇಲ್ಲವೆ ನೀರು ಪೂರ್ತಿಯಾಗಿ ಚೆಲ್ಲಿಹೋಗದಿದ್ದರೆ ಗಂಡಹೆಂಡಿರಲ್ಲಿ ಇನ್ನೂ ಪ್ರೇಮ ಉಳಿದಿದೆ, ಅವರು ಇಲ್ಲಲ್ಲದಿದ್ದರೆ ಪರಲೋಕದಲ್ಲಾದರೂ ಪುನರಪಿ ಒಂದಾಗುವರು ಎಂದು ಸಂತಾಲರಲ್ಲಿ ನಂಬಿಕೆಯಿದೆ.

ವಿಚ್ಛೇದಕ್ಕಿಂತ ಮೊದಲು ಉಭಯಪಕ್ಷಗಳ ಪ್ರತಿಪಾದನೆಯನ್ನು ಕೇಳಿಕೊಂಡು ಊರ ಹಿರಿಯರು ತೀರ್ಪು ಹೇಳುತ್ತಾರೆ. ಹೆಂಡತಿಯ ತಪ್ಪಿ

ಲ್ಲವಿದ್ದರೆ ಅವಳಿಗೆ ಗಂಡನು ಐದು ರೂಪಾಯಿ, ಒಂದು ದನ, ಹನ್ನೆರಡು ಮಣ ಧಾನ್ಯ, ಒಂದು ಸೀರೆ, ಒಂದು ಹಿತ್ತಾಳಿ ಕಡಾಯಿ ದಂಡ ಕೊಡ ಬೇಕಾಗುವದು. ಅವಳಿಗಾಗಿಅವಳ ತಂದೆತಾಯಿ ಗಳಿಗೆ ಕೊಟ್ಟ ತೆರವೂ ತಿರುಗಿ ದೊರೆಯದು. ಮಕ್ಕಳೆಲ್ಲಕ್ಕೂ ಗಂಡನೆ ಅಧಿಕಾರಿಯಾಗುತ್ತಾನೆ.

ಹೆಂಡತಿ ವಿಚ್ಛೇದಕ್ಕೆ ಕಾರಣಳಿದ್ದರೆ ಅವಳಿಗೆ ಕೊಟ್ಟ ತೆರ ಗಂಡನಿಗೆ ತಿರುಗಿ ಬರುವುದು. ವ್ಯಭಿಚಾರಕ್ಕಾಗಿ ಬಿಡುಗಡೆಯಾಗುತ್ತಿದ್ದರೆ ಅವಳ ಪ್ರಿಯತಮನು ಅವಳ ಗಂಡನಿಗೆ ಇಮ್ಮಡಿ ಸ್ತ್ರೀಧನ ತೆಂಬೇಕಾಗುವದು. ವ್ಯಭಿಚಾರವನ್ನು ಕ್ಷಮಿಸಿ ಗಂಡನು ಅವಳನ್ನು ಮತ್ತೂ ಇಟ್ಟು ಕೊಳ್ಳಲು ಒಪ್ಪನಾದರೆ ಪ್ರಿಯತಮನು ಗಂಡನಿಗೆ "ಪಾತ್ರ ಸ್ವಚ್ಛ ಮಾಡುವ ಖರ್ಚು" ಐದು ರೂಪಾಯಿ ಮತ್ತು ವಿಟನಿಗೆ ಜೀವದಾನ ಮಾಡಿದ್ದಕ್ಕೆ ಐದು ರೂಪಾಯಿ ದಂಡ ತೆರಬೇಕು. ಹಿಂದಿನ ಕಾಲದಲ್ಲಿ ಗಂಡನು ವಿಟನನ್ನು ಕೊಲ್ಲುವ ರೂಢಿಯಿತ್ತು.

( ಸಂಗೃಹೀತ )



## ಆತ್ಮಹತ್ಯ—ಪಾಪ

ಒಬ್ಬ ಸಾಹುಕಾರನಿದ್ದ, ತುಂಬಾ ಚತುರ ವ್ಯಾಪಾರಿ. ವ್ಯಾಪಾರಿ ಸಾಕಷ್ಟು ಸಂಪಾದನೆ ಮಾಡಿದ. ಆದರೆ ಆತನು ರೈತರಿಗೆ ಕೊಟ್ಟ ಸಾಲಕ್ಕಾಗಿ ಅನೇಕ ಹೊಲ, ತೋಟ, ಗದ್ದೆಗಳು ಆತನವಾದವು. ಬೇಸಾಯದಲ್ಲಿ ಆತನಿಗೆ ಅನುಭವವಿರಲಿಲ್ಲ. ಈ ತೋಟ, ಗದ್ದೆಗಳ ಪರಿಣಾಮವಾಗಿ ಆತನು ಕೆಲವೇ ವರ್ಷಗಳಲ್ಲಿ ದಿವಾಳಿಯಾದ. ಈಗ ಮರ್ಯಾದೆಯ ಪ್ರಶ್ನೆ. ಅವನು ಹೇಗೆ ಮುಖ ತೋರಿಸಬೇಕು ? ಹೊಳೆಯಲ್ಲಿ ಹಾರಿಕೊಂಡು ಆತ್ಮಹತ್ಯ ಮಾಡಿಕೊಳ್ಳುವ ನಿಶ್ಚಯಮಾಡಿದ. ಅರ್ಧರಾತ್ರಿಯಲ್ಲಿ ಹಾಸಿಗೆಯಿಂದೆದ್ದು ಮನಸ್ಸಿನಲ್ಲಿಯೇ ಧರ್ಮಪತ್ನಿಯ ಕ್ಷಮೆ ಕೇಳಿದ ; ಮಲಗಿ ನಿದ್ರಿಸುವ ಮಕ್ಕಳ ಮುಖ ನೋಡಿ ಕಣ್ಣೀರು ಉದುರಿಸಿದ. ಮನಸ್ಸು ಕಲ್ಲುಮಾಡಿಕೊಂಡು ಮನೆಯಿಂದ ಹೊರಬಿದ್ದು ನದಿಯ ತೀರಕ್ಕೆ ಬಂದ. ನದಿ ತುಂಬಿ ಹರಿಯುತ್ತಿತ್ತು.

ಆತ ದಿನ್ನೆಯನ್ನೇರಿ ನಿಂತುಕೊಂಡು ನದಿಯನ್ನು ಒಂದು ಸಲ ನೋಡಿದ. ಕಣ್ಣುಮುಚ್ಚಿ—ಹಾರಿಕೊಳ್ಳಬೇಕೆಂದು ಗಟ್ಟಿ ಮನಸ್ಸು ಮಾಡಿದ—ಮತ್ತೆ ಕಣ್ಣುತೆರೆದ. ಸುತ್ತಲೂ ಒಂದು ಸಲ ನೋಡಿದಾಗ ಕೊಂಚ ದೂರದಲ್ಲಿ ಯಾರೋ ಒಬ್ಬರು ಈತನಂತೆಯೇ ಆತ್ಮಹತ್ಯ ಮಾಡಿಕೊಳ್ಳಲು ಬಂದು ನಿಂತಿದ್ದಾನೆ. ಸಾಹುಕಾರನಿಗೆ ತನ್ನ ಆತ್ಮಹತ್ಯದ ವಿಚಾರವೇ ಹೋಯಿತು. ಆತ ಇನ್ನೊಬ್ಬನ ಕಡೆಗೆ ಓಡಿ ಹೋದ. ಆ ಮನುಷ್ಯನ ಅಂಗಿಯನ್ನು ಹಿಡಿದು ಹಿಂದಕ್ಕೆಳೆದು ಹೇಳಿದ : "ಹುಚ್ಚ! ಏನಾಗಿದೆ ನಿನಗೆ ಸಾಯುಲಿಕ್ಕೆ ! ಪರಮೇಶ್ವರನಿಂದ ಕೃಪಾಪೂರ್ವಕವಾಗಿ ದೊರೆತ ಪ್ರಾಣವನ್ನು ಕಳೆದುಕೊಂಡು ಜನ್ಮಾಂತರಗಳ ಘೋರ ಪಾಪಕ್ಕೆ ಗುರಿಯಾಗುತ್ತಿದ್ದೀಯೆ ! ಗಂಡಸಾಗಿ ಹೆಂಗಸಿನಂತೆ ಹೊಳೆಗೆ ಬಿದ್ದು ಸಾಯಲು ಬಂದಿರುವಿ, ನಾಚಿಕೆಯಾಗುವುದಿಲ್ಲವೇ ನಿನಗೆ ?"

—ರಮಣಮಹರ್ಷಿ

ಸೀನು ನೀವೆಣಿಸಿದಷ್ಟು ನಿರುಪದ್ರವಿಯಲ್ಲ.



# ಆ ಒಂಟಿ ಸೀನು!

**ಗಂಗಾಧರ**

ಒಂಟಿ ಸೀನು ಬರಬಾರದು, ಅದು ಶುಭಲಕ್ಷಣವಲ್ಲ ಎನ್ನುತ್ತಾರೆ. ಸೀನು ಬರುವದು ನಿಸರ್ಗ ನಿಯಮಕ್ಕನುಸರಿಸಿಯಾದರೂ ಈ ಭಾವನೆ ಜನರಲ್ಲಿದೆ. ನಮ್ಮ ದೇಶದಲ್ಲಿ ಮಾತ್ರವಲ್ಲ, ಜಗತ್ತಿನ ಅನೇಕ ಕಡೆಗಳಲ್ಲಿ ಸೀನಿನ ಬಗ್ಗೆ ಇಂಥ ಭಾವನೆಯಿದೆ.

ವರ್ಜೀನಿಯದ ೧೩ ವರ್ಷದ ಓರ್ವ ಬಾಲಿಕೆ ಒಮ್ಮೆ ಸೀನತೊಡಗಿದಳು. ಅವಳ ತಂದೆತಾಯಿಗಳು ಮಗಳಿಗೆ ನೆಗಡಿಯಾಗಿದೆ ಎಂದು ಮೊದಲು ಭಾವಿಸಿದರು. ಆದರೆ ಹುಡುಗಿ ತಾಸುಗಟ್ಟಲೆ ಒಂದೇಸವನೆ ಸೀನುತ್ತಲೇ ಹೊದಳು. ಅವರು ಡಾಕ್ಟರರನ್ನು ಕರೆದು ತೋರಿಸಿದರು. ಆದರೆ ಡಾಕ್ಟರರ ಉಪಚಾರ ನಡೆದು ಎರಡು ತಿಂಗಳಾದರೂ ಆ ಹುಡುಗಿ ಸೀನುವದು ತಪ್ಪಲಿಲ್ಲ. ಹುಡುಗಿ ದಿನಕ್ಕೆ ಹತ್ತಲ್ಲ, ನೂರಲ್ಲ, ಸಾವಿರಾರು ಸಲ ಸೀನುತ್ತಿದ್ದಳು. ಇಡೀ ಜಗತ್ತಿನ ಲಕ್ಷ್ಯ ಅವಳತ್ತ ಹೊರಳಿತು.

ಈ ಸೀನುಗಳನ್ನು ನಿಲ್ಲಿಸಲೆಂದು ಸಾವಿರಾರು ಉಪಾಯಗಳು ಸೂಚಿಸಲ್ಪಟ್ಟವು. ಅವ ಮೂಗಿಗೆ ಅರಿವೆ ತೂಗಿಹಾಕುವ ಚಿಮ್ಮಟಿ ಯನ್ನು ಹಾಕಿ ನೋಡಿ, ಅವಳನ್ನು ತಲೆಕೆಳಗಾ ನಿಲ್ಲಿಸಿ ನೋಡಿ ಎಂಬಿತ್ಯಾದಿ ಉಪಾಯಗಳ ಹೇಳಲ್ಪಟ್ಟವು. ಒಂದೂ ಪ್ರಯೋಜನಕ್ಕೆ ಬ ಲಿಲ್ಲ.

ಕೊನೆಗೆ ಅವಳನ್ನು ಜಾನ ಹಾಪಕಿನ್ ಆಸ್ಪತ್ರೆಗೆ ಒಯ್ದರು. ಅಲ್ಲಿ ಡಾ. ಲಿಯೊ ಕಾನರರು ಅವಳ ಈ ಮಹಾರೋಗವನ್ ಬಹು ಶೀಘ್ರದಲ್ಲಿ ಗುಣಪಡಿಸಿದರು. ಸೀನ ರೋಗದ ವಿಷಯದಲ್ಲಿ ಜಗತ್ತಿನಲ್ಲಿಯೆ ತಜ್ಞ ರೆನಿಸಿಕೊಂಡವರಲ್ಲಿ ಡಾ. ಕಾನರರೂ ಒಬ್ಬರು.

ಡಾ. ಕಾನರರು ಔಷಧಿಗಳನ್ನು ಉಪಯೋ ಗಿಸಲಿಲ್ಲ. ಶಸ್ತ್ರಕ್ರಿಯೆಯನ್ನೂ ನಡೆಸಲಿಲ್ಲ ನಮ್ಮ ಶರೀರವು ಸೀನಿನ ಮೂಲಕ ತೋರಿಸು ಈ ಪ್ರತಿಕ್ರಿಯೆಯ ಬಗ್ಗೆ ಪ್ರಾಚೀನವಾದೊಂದ ಮೂಢ ನಂಬಿಗೆಯಲ್ಲಿ ಡಾ. ಕಾನರರು ಈ ಹುಡುಗಿಯ ರೋಗನಿವಾರಣೆಯ ಉಪಾಯ

'ಕೊರೊನೆಟ್' ಪತ್ರಿಕೆಯ ಆಧಾರದಿಂದ

ವನ್ನು ಕಂಡುಹಿಡಿದರು. ೩,೦೦೦ ವರ್ಷಗಳ ಹಿಂದೆ ಹೌದುಹೌದೆಂದು ಹೇಳಬಹುದಾದ ಮಾತೊಂದನ್ನು- ಆ ಹುಡುಗಿಯ ಮನಸ್ಸಿನಲ್ಲಿ ಈ ಸೀನಿನ ಕಾರಣವಿದೆಯೆಂಬುದನ್ನು- ಡಾ. ಕಾನರರು ಹೇಳಿದರು.

ವಿಪರೀತ ಸೀನುವದು ಆತ್ಮದ ಅಸ್ವಸ್ಥತೆಯ ಕಾರಣವೆಂಬ ಹಳೆಯ ನಂಬಿಕೆಗೆ ಡಾ. ಕಾನರರು ಆಧುನಿಕ ಮಾನಸಶಾಸ್ತ್ರದ ಶಬ್ದಗಳಲ್ಲಿ ವಿವರಣೆಯಿತ್ತರು. ತಮ್ಮ ಈ ವಿವರಣೆಗನುಗುಣವಾಗಿ ಅವರು ಆ ಹುಡುಗಿಯನ್ನು ಉಪಚರಿಸತೊಡಗಿದರು.

"ಆಸ್ಪತ್ರೆಯ ಕೋಣೆಯಲ್ಲಿ ಹುಡುಗಿಯ ಮನರಂಜಿಸಬಹುದಾದ ವಾತಾವರಣವನ್ನು ನಿರ್ಮಿಸಿ, ಕ್ಷಯರೋಗದ ಬಗ್ಗೆ ಅವಳಲ್ಲಿದ್ದ ಅವಾಸ್ತವ ಭೀತಿಯನ್ನು ಹೋಗಲಾಡಿಸಿದಾಗ ಎರಡೇ ಎರಡು ದಿನಗಳಲ್ಲಿ ಹುಡುಗಿ ಸೀನುವುದು ನಿಂತು ಹೋಯಿತು,'' ಎಂದು ಡಾ. ಕಾನರರು ಹುಡುಗಿಯನ್ನು ಗುಣಪಡಿಸಿದ ನಂತರ ಹೇಳಿದರು.

ಸೀನು ಯಾವಾಗಲೂ ಒಂದು ಕುತೂಹಲದ, ಅರ್ಥವಾಗದ, ಭಯದ ವಿಷಯವಾಗಿದೆ. ಡಾ. ಕಾನರರು ಈ ಬಗ್ಗೆ ಬೇರೆ ಬೇರೆಡೆಗಳಲ್ಲಿರುವ ಸಾವಿರಾರು ಮೂಢ ನಂಬಿಕೆಗಳನ್ನು ತಿಳಿದುಕೊಂಡಿದ್ದಾರೆ. ಯಾರಿಗಾದರೂ ಸೀನು ಬಂದಾಗ ಹತ್ತಿರಿದ್ದವರು "ದೇವರು ಕಾಪಾಡಲಿ" ಎನ್ನುವ ರೂಢಿ ಬಹಳ ಕಡೆಗಳಲ್ಲಿದೆ. ಸೀನು ಬರುವದಕ್ಕೆ ಮೈಯಲ್ಲಿ ಪಿಶಾಚಿಯೊಂದರ ಪ್ರವೇಶವಾಗಿರುವದೇ ಕಾರಣವೆಂಬ ಪ್ರಾಚೀನ ಕಾಲದ ನಂಬಿಗೆಯೆ 'ದೇವರು ಕಾಪಾಡಲಿ" ಎಂದು ಹೇಳುವದಕ್ಕೆ ಕಾರಣವಾಗಿರಬೇಕು ಎಂದು ಡಾ. ಕಾನರರು ಅಭಿಪ್ರಾಯಪಟ್ಟಿದ್ದಾರೆ. ಜಗತ್ತು ಇಂದು ಮುಂದುವರಿದಿರುವದಾದರೂ ಈ ಹಳೆಯ ನಂಬಿಗೆಯೇನೂ ಮನದಿಂದ ಅಳಿಸಿಹೋಗಿಲ್ಲ.

ಮಾನಸ ಶಾಸ್ತ್ರಜ್ಞರು ಸೀನಿನ ವಿಷಯ ಏನೆನ್ನುತ್ತಾರೆ? ನಿಮ್ಮ ಬುದ್ಧಿಪೂರ್ವಕವಾದ ಸಹಾಯವಿಲ್ಲದೆ ಆಗುವ ದೇಹದ ಯಾಂತ್ರಿಕ ಕ್ರಿಯೆ ಅದು ಎಂದು ಅವರ ಮತ. ಸೀನಬೇಕಾದಾಗ ನೀವು ಸೀನುವಿರಿ. ಮೂಗಿನಲ್ಲಿರುವ ತ್ರಾಸದಾಯಕವಾದ ವಸ್ತುವೊಂದನ್ನು ಹೊರಗೆ ಹಾಕಲು ನಿಸರ್ಗವು ಏರ್ಪಡಿಸಿರುವ ತಂತ್ರ ಸೀನು. ಮೂಗಿನಲ್ಲಿರುವದು ಧೂಳಿನ ಕಣವಾಗಿರಬಹುದು, ರೋಗಕಾರಕ ಜೀವಾಣುಗಳಾಗಿರಬಹುದು. ಸೀನಿನ ಮೂಲಕ ಅವನ್ನು ಹೊರಗೆ ಹಾಕಲು ನಿಸರ್ಗವು ಪ್ರಯತ್ನಿಸುತ್ತದೆ.

ಮೂಗಿನೊಳಗೆ ಈ ಅನಿಷ್ಟ ವಸ್ತುಗಳಿಂದ ತೊಂದರೆಯಾದೊಡನೆ ಅತಿ ತ್ವರಿತಗತಿಯಲ್ಲಿ ನಾಲಿಗೆ ಬಾಯಿಯ ಮೇಲಂಗಳದತ್ತ ಹೋಗಿ ಒತ್ತುತ್ತದೆ. ಆಗ ಆಗುವ ಗಾಳಿಯ ಒತ್ತಡವು ಬಾಯ ಮೂಲಕ ಹೊರಗ ಹೋಗಲಾರದ್ದರಿಂದ ಅದು ಮೂಗಿನ ಮೂಲಕ ಹೊರಬೀಳುತ್ತದೆ. ಸೀನು ಎಂದರೆ ನಿಜವಾಗಿ ಗಾಳಿಯ ಸ್ಫೋಟ.

ಸೀನಿನ ಕ್ರಿಯೆ ಹೇಗೆ ಜರುಗುತ್ತದೆ ಎಂಬುದನ್ನು ನೋಡಲು ಮೆಶಾಶೂಟ್ಸ ಇನಸ್ಟಿಟ್ಯೂಟ ಆಫ್ ಟೆಕ್ನಾಲಜಿಯ ಪ್ರೊಫೆಸರ ಮಾರ್ಶಲ್ ಜೆನಿಸನ್ ಮತ್ತು ಡಾ. ಎಚ್. ಇ. ಎಡ್ಗರಟನ್ನರು ಅತ್ಯಂತ ತ್ವರಿತ ಗತಿಯಲ್ಲಿ ಚಿತ್ರ ತೆಗೆಯುವ ಕ್ಯಾಮರಾವನ್ನು ಉಪಯೋಗಿಸಬೇಕಾಯಿತು. ೧।೧೦೦೦೦೦ ಸೇಕಂದಿನಲ್ಲಿ ಒಂದು ಚಿತ್ರ ಮೂಡಿಸಬೇಕಾಯಿತು.

ದೀರ್ಘಕಾಲದ ವರೆಗೆ ಸೀನು ಬರುತ್ತ ಹೋಗುವದಕ್ಕೆ ಭಾವನಾಪ್ರಧಾನವಾದ ಸಂಕಟಗಳೇ ಕಾರಣಾಗುತ್ತವೆ ಎಂದು ಮಾನಸಶಾಸ್ತ್ರಜ್ಞರಿಗೆ ನಂಬಿಕೆಯಾಗಿದೆ. ಆದರೆ ಸಾಮಾನ್ಯವಾಗಿ ಒಮ್ಮೆ ಎರಡು, ಮೂರು ಸೀನುಗಳು ಬಂದವೆಂದ ಮಾತ್ರಕ್ಕೆ ಮಾನಸಶಾಸ್ತ್ರಜ್ಞರ ಕಡೆಗೆ ಓಡುವ ಅವಶ್ಯಕತೆಯೇನೂ ಇರುವದಿಲ್ಲ.

ಸಾಮಾನ್ಯವಾಗಿ ಒಂದೇ ಸವನೆ ಸೀನುವ ಪ್ರವೃತ್ತಿ ನಿಮ್ಮಲ್ಲಿದ್ದರೆ ಆನುವಂಶಿಕ ದೋಷ ಎಂಬದು ವಿಚಿತ್ರವಾದರೂ ಸತ್ಯವೆಂದು ಸಂತಾನ ಶಾಸ್ತ್ರಜ್ಞರು ಹೇಳುತ್ತಾರೆ. ಒಂದು ಕುಟುಂಬದ ಮೂರು ಪೀಳಿಗೆಯನ್ನು ಅಭ್ಯಸಿಸಿ ಅವರು ಕೂಸು ಕೂಡ ತನ್ನ ಕುಟುಂಬದ ಪದ್ಧತಿಯಂತೆ ಸೀನುತ್ತದೆ ಎಂದಿದ್ದಾರೆ.

ಸೇಕಂದಿಗೆ ೧೫೨ ಅಡಿ ವೇಗದಲ್ಲಿ ಸೀನು ಮೂಗಿನಿಂದ ೪,೬೦೦ ಕಣಗಳನ್ನು ಗಾಳಿಯಲ್ಲಿ ಹಾರಿಸಬಲ್ಲದು ಎಂದು ಮೆಶಾಶೂಟ್ಸ ಇನಸ್ಟಿಟ್ಯೂಟ ಆಫ ಟೆಕ್ನಾಲಜಿಯ ತಜ್ಞರು ಹೇಳಿದ್ದಾರೆ ಭಾರವಾದ ಕಣಗಳನ್ನು ಸೆಕಂದಿಗೆ ೧೨ ಅಡಿಗಳ ವೇಗದಲ್ಲಿ ಸೀನು ಹೊರಗೆ ತೂರಬಲ್ಲದು.

ಹೊರಬಿದ್ದ ಕಣದ ಸುತ್ತಲಿನ ತೇವವು ಹವೆಯಾಗಿ ಹೋಗಿ ಆ ಕಣ ಮಾತ್ರ ಗಾಳಿಯಲ್ಲಿ ತೇಲುತ್ತಿರುತ್ತಿದೆ. ಇಂಗ್ಲಿಷ ಸಂಶೋಧಕರು ಸೀನು ಬಂದ ಅರ್ಧ ತಾಸಿನ ನಂತರ ಇಂಥ ೪,೦೦೦ ಕಣಗಳು ಗಾಳಿಯಲ್ಲಿ ತೇಲುತ್ತಿರುವದನ್ನು ಕಂಡುಹಿಡಿದಿದ್ದಾರೆ.

ಈ ಕಣಗಳು ನಿರುಪದ್ರವಿನೀರಿನ ಹನಿಗಳಾಗಲಿ ಅಥವಾ ಜಡ ವಸ್ತುವಾಗಲಿ ಇರುವದಿಲ್ಲ; ಇವು ರೋಗಾಣು ಪ್ರಸಾರಕ ಸಾಧನಗಳಾಗಿರುತ್ತವೆ. ಒಂದೇ ಒಂದು ಸೀನು ೮,೫೦,೦೦,೦೦೦ ರೋಗಕ್ರಿಮಿಗಳನ್ನು ಪಸರಿಸಲು ಸಮರ್ಥವಾಗುವದು. ರೋಗ ಪ್ರಸಾರದಲ್ಲಿ ಸೀನು ಮುಖ್ಯಪಾತ್ರ ವಹಿಸುತ್ತದೆಂದು ಡಾಕ್ಟರರಿಗೆ ಗೊತ್ತಾಗಿದೆ.

೧೯೧೮ ರಲ್ಲಿ ಜಗತ್ತಿನಲ್ಲೆಲ್ಲ ಇನಫ್ಲುಯೆಂಝಾ ಪಿಡುಗು ಹಬ್ಬಿದಾಗ ರೋಗಿಗಳು ಬಹಳವಾಗಿ ಸೀನುತ್ತಿದ್ದರು. ಈ ಸೀನುಗಳೇ ಈ ರೋಗದ ವ್ಯಾಪಕ ಪ್ರಸಾರಕ್ಕೆ ಕಾರಣವಾದವು. ರಾತ್ರಿ ಬೆಳಗಾಗುವದರೊಳಗಾಗಿ ಊರಿಗೆ ಊರ ಜನರನ್ನೆ ಬಲಿತೆಗೆದುಕೊಂಡ ಮಧ್ಯಯುಗದ ಪ್ಲೇಗ ಬೇನೆ ಕೂಡ ಸೀನಿನ ಮೂಲಕ ಹಬ್ಬಿತ್ತು.

ಸೀನುವಾಗ ಮುಖ ತಿರುಗಿಸಿ ಕೆಳಗಡೆ ಮಾಡಿ ಸೀನಿರಿ ಎಂದು ಡಾಕ್ಟರರು ಹೇಳುತ್ತಾರೆ. ಹೀಗೆ ಮಾಡುವದರಿಂದ ಸೀನು ಬಂದಾಗ ಹೊರ ಹಾರುವ ಕಣಗಳು ನೆಲಕ್ಕೆ ಬಡಿದು ಅಲ್ಲಿಯೇ ಉಳಿಯುತ್ತವೆ. ಅವು ಗಾಳಿಯಲ್ಲಿ ತೇಲಿ ಹೋಗಿ ಎರಡನೆಯವರ ಶ್ವಾಸದೊಂದಿಗೆ ಅವರ ದೇಹವನ್ನು ಪ್ರವೇಶಿಸುವದಿಲ್ಲ. ಇದರಿಂದ ರೋಗ ಪ್ರಸಾರಕ್ಕೆ ಅವಕಾಶ ಸಿಕ್ಕುವದಿಲ್ಲ.



ಐವತ್ತು ಜನ ಗೆಳೆಯರಿದ್ದರೆ ಸಾಲದು; ಒಬ್ಬ ವೈರಿಯಿದ್ದರೆ ಹೆಚ್ಚಾಯಿತು.

— ಇಟಲಿಯ ಗಾದೆ.

ಎರಡನೆಯವರು ಸುಲಭವಾಗಿ ಮಾಡಲಾರದ ಕೆಲಸವನ್ನು ಮಾಡುವುದು ಕಾರ್ಯ ಕುಶಲತೆಯಾಗುತ್ತದೆ. ಎರಡನೆಯವರಿಗೆ ಅಸಾಧ್ಯವಾದದ್ದನ್ನು ಮಾಡುವುದು ಪ್ರತಿಭಾಶಾಲಿತ್ವದ ಪತಾಕೆಯಾಗಿದೆ.

— ವಿಲಿಯಂ.

ಸಮುದ್ರವು ಸೂರ್ಯನಿಗೆ ತನ್ನ ನೀರನ್ನು ಉಣಿಸಿಯೂ ಉಕ್ಕುತ್ತದೆ; ಕೊಡುವವನು ಕೊಟ್ಟು ಮುಕ್ತನಾಗುವನು. ಮಳೆಸುರಿಸಿ ಮೋಡ ಬರಿದಾಗುತ್ತದೆ; ಮತ್ತು ಅದು ಆಗಸಕ್ಕೇರಿ ಗರ್ಜಿಸುತ್ತದೆ. ಸೂರ್ಯ ತನ್ನ ಸರ್ವಸ್ವವನ್ನು ಜಗತ್ತಿಗೆ ಕೊಟ್ಟು ಮತ್ತೂ ಹೆಚ್ಚು ಪ್ರಕಾಶಿಸುತ್ತಾನೆ. —ಗುಜರಾತೀ ಕವಿ ‘ ಖಬರದಾರ ’

**ಗೊತ್ತಿದ್ದ ಅಪರಿಚಿತರು—೪**

# ಸಮಾಜದ ಗಂಗಾಮಾತೆ : ಅಗಸ

ರಾವ್ ಬಹಾದ್ದೂರ

ಅಗಸನನ್ನು ಕಂಡು ನಾನಾವಾಗಲೂ ಸೋಜಿಗಪಟ್ಟಿದ್ದೇನೆ. ಸಂಭಾವಿತರೆನಿಸುವವರಿಗೇ ಕುಲುಕಲು ಕೊಟ್ಟ ಕೈ ತಿರುಗಿ ಬಂದೊಡನೆ ಬೆರಳುಗಳನ್ನು ಎಣಿಸಿಕೊಂಡು ಖಾತ್ರಿ ಮಾಡಿಕೊಳ್ಳಬೇಕಾದ ಈ ಕಲಿಕಾಲದಲ್ಲಿ, ಅಪರಿಚಿತ, ಬಡವ, ಅಸಂಸ್ಕೃತ ಅಗಸನ ಹತ್ತಿರ ಕಾಗದಪತ್ರ ಜಾಮಿನು ಇಲ್ಲದೆ ನೂರಾರು ರೂಪಾಯಿ ಬೆಲೆಬಾಳುವ ಬಟ್ಟೆಯನ್ನು ಯಾವ ಧೈರ್ಯದಿಂದ ಕೊಡಬೇಕು? ಇವನೇನು ಧರ್ಮರಾಯನ ತುಣುಕೆ? ಇವನಲ್ಲಿ ಅಂಥದು ಏನಿದೆ?

ಆದ್ದರಿಂದ ನಾನು ಬಹಳ ಕಾಲದವರೆಗೆ ನನ್ನ ಬಟ್ಟಬರೆಗಳನ್ನು ಅಗಸನಿಗೆ ಕೊಡುವ ಹವ್ಯಾಸಕ್ಕೇ ಹೋಗಲಿಲ್ಲ. ಇವರಿಂದ ನನ್ನ ಅಂಗಿ ದೋತರಗಳು ಭಗವಾ ಝುಂಡಾಕ್ಕೂ ಎರಡು ವರ್ಷಗಳಿಂದ ಪೇಂಟ್ ಮಾಡಿಸದಿದ್ದ ಎಂ. ಎಸ್. ಎಂ. ರೈಲ್ವೆಡಬ್ಬಿಗೂ ನಡುವಣ ಯಾವುದೋ ಒಂದು ಹೆಸರಿಲ್ಲದ ಬಣ್ಣದಿಂದ ರಾರಾಜಿಸುತ್ತವೆಂದು ನನ್ನ ಮಿತ್ರರು ಆಡಿಕೊಳ್ಳುತ್ತಿದ್ದುದು ನಿಜ. ನನ್ನ ಕೋಟಿನ ಕಾಲರು ಜೂಲು ನಾಯಿಯ ಕಿವಿಯಂತೆಯೂ ಅದರ ಮೈ ಮಠದ ಅರ್ಧೋಪವಾಸಿ ಆನೆಯ ಮೈಯಂತೆಯೂ ಕಾಣಿಸುತ್ತವೆಂಬ ಟೀಕೆಗಳೂ ಕೇಳಬರುತ್ತಿದ್ದವು. ಆದರೆ ಭಗವಾ ಝುಂಡಾವಾದರೂ ನನ್ನ ಬಟ್ಟೆ ನನ್ನ ಹತ್ತಿರವೇ ಇರುವುದು ಕ್ಷೇಮವೆಂದು ನಾನು ಈ ಎಲ್ಲ ಟೀಕೆಟಿಪ್ಪಣಿಗಳಿಗೆ ಎದೆಗೊಟ್ಟು ನಿಂತಿದ್ದೆ.

ಆದರೆ ನನ್ನ ಮಿತ್ರರು ನನ್ನ ಅಗಸೋಫೋಬಿಯಾವನ್ನು ನಿವಾರಿಸಿಯೇ ಬಿಡುವೆವೆಂದು



ಪಟ್ಟುಹಿಡಿದರು. ನನ್ನನ್ನು ಒಂದು ದಿನ ಒಂದು ಲಾಂಡ್ರಿಗೆ ಎಳೆದೊಯ್ದು ಇಲ್ಲಿ ಬಟ್ಟೆ ಬರೆ ಗಂಜಿಗೆ ಕೊಟ್ಟರೆ ಪಾವತಿ ಕೊಡುವರೆಂದೂ ನನ್ನ ಬಟ್ಟೆಗೆ ಭಯವಿಲ್ಲೆಂದೂ ಹೇಳಿದರು.

ಲಾಂಡ್ರಿಯಲ್ಲಿ ನಾನು ಕಂಡದ್ದು ನನ್ನ ಆಶ್ಚರ್ಯವನ್ನು ಮತ್ತಷ್ಟು ಹೆಚ್ಚಿಸಿತು. ಕೊಳಕಿನ ವಿವಿಧ ಅಂತಸ್ತುಗಳಲ್ಲಿದ್ದ ಬಟ್ಟೆಗಳ ರಾಶಿಯೇ ಅಲ್ಲಿ ಕೂಡಿಬಿದ್ದಿತ್ತು. ಹೊಸತಾಗಿ ಕೊಟ್ಟ ಬಟ್ಟೆಗಳು ಆ ರಾಶಿಯಲ್ಲಿ ಸೇರಿಕೊಳ್ಳುತ್ತಿದ್ದವು. ಇಲ್ಲಿ ಸೇರಿ ಹೋದ ನಿಮ್ಮ ಬಟ್ಟೆಯನ್ನು ತಿರುಗಿ ಗುರುತು ಹಚ್ಚಲು ನಿಮಗೇ ಸಾಧ್ಯವಾಗಲಾರದೆಂದ ಮೇಲೆ ಅಗಸ ಎಲ್ಲವನ್ನು ಒಟ್ಟಾಗಿ ಒಗೆದು ನಿಮ್ಮನಿಮ್ಮದನ್ನು ವಿಂಗಡಿಸಿ ನಿಮನಿಮಗೇ ಕೊಡುವನೆಂದು ನಂಬುವದಾದರೆ ಸಮುದ್ರದಲ್ಲಿನ ನೀರಿನ ಯಾವ ಬಿಂದು ಯಾವ ನದಿಯಿಂದ ಬಂದದ್ದೆಂದೂ ಅವನು ಗುರುತಿಸಬಲ್ಲನೆನಿಸಿತು. ಅವನು ಬಟ್ಟೆಗಳ ಮೇಲೆ ಗುರುತುಗಳನ್ನು ಹಾಕಿಕೊಂಡು ಈ ಅಸಾಧ್ಯವನ್ನು ಸಾಧ್ಯಮಾಡಿಕೊಳ್ಳುತ್ತಾನೆಂದು ನನಗೆ ಹೇಳಲಾಯಿತು. ಆ ಗುರುತುಗಳನ್ನು ನೋಡಿದ ಮೇಲೆ, ಯಾರಿಂದಲೂ ಓದಲು ಸಾಧ್ಯವಾಗದ ಮೊಹೆಂಜೋದಾರೊ ಲಿಪಿಯನ್ನು ಈ ಅಗಸ ಓದಬಹುದೆಂದೆನಿಸಿತು. ಆದರೆ ನನ್ನ ಗೆಳೆಯರು ಈ ಅಗಸನ ಗುರುತುಗಳಿಂದಲೇ ಎಷ್ಟೋ ಕೊಲೆಗಡಕರ ಪತ್ತೆ ಮಾಡಲಾಗುತ್ತಿದೆಯೆಂದು ನನಗೆ ಭರವಸೆ ಕೊಟ್ಟರು. ಇದರಿಂದ ನನ್ನ ಆಶ್ಚರ್ಯವು ಭಯಮಿಶ್ರಿತವಾಯಿತೇ ಹೊರತು ವಿಶ್ವಾಸ ಕುದುರಲಿಲ್ಲ.

ನಾನು ಎಚ್ಚರಿಕೆಯಿಂದಲೇ ಅಗಸನೊಡನೆ ಪ್ರಥಮ ಸಂಬಂಧ ಹೂಡಿದೆ. ಟ್ರಾಯಲ್ ಎಂದು ಮೂರು ಗಾಂಧೀ ಟೊಪ್ಪಿಗೆಗಳನ್ನು ಹಾಕಿ ಪಾವತಿ ತೆಗೆದುಕೊಂಡೆ. ಪಾವತಿಯಲ್ಲಿ ಹಾಕಿದ ವಾಯಿದೆಯ ದಿನ ಹಾಜರಾದಾಗ, ಅಗಸನು ಪಾವತಿ ತೆಗೆದುಕೊಂಡು ನಂಬರು ನೋಡಿ, ಕನ್ನಡಿಯ ಕಪಾಟಿನಲ್ಲಿ ಹಳೆ ವರ್ತಮಾನ ಪತ್ರವನ್ನು ಹೊದ್ದು ಕಾಯುತ್ತಿದ್ದ ಟೋಪಿಕಾತ್ರಯವನ್ನು ತೆಗೆದು ನನಗೊಪ್ಪಿಸಿದ. ಪರವಾ ಇಲ್ಲ, ಎಂದು ಮನೆಗೆ ಮರಳಿದೆ.

ಮರುದಿನ ಮಂತ್ರಿಗಳು ಸವಣೂರಿಗೆ ಆಗಮಿಸಿದರು. ಅವರ ಭಾಷಣದ ವರದಿ ಮಾಡಲು ಹೋಗುವಾಗ, ಈ ಹೊಸದಾಗಿ ಇಸ್ತ್ರೀಕೃತವಾದ ಶ್ವೇತ ಕಿರೀಟ ಧರಿಸೋಣವೆಂದು ಪುಡಿಕೆ ಬಿಚ್ಚಿ ಒಂದು ಟೊಪ್ಪಿಗೆಯನ್ನು ತಲೆಗೇರಿಸಿದೆ. ಹುಡುಗರು ನಕ್ಕದ್ದು ನೋಡಿ ಕನ್ನಡಿ ನೋಡುತ್ತೇನೆ, ೨೩ ಇಂಚು ವ್ಯಾಸದ ನನ್ನ ಶಿರಸ್ಸಿನ ಮೇಲೆ ೧೬ ಇಂಚಿನ ಟೊಪ್ಪಿಗೆ.

ನಾನೇ ಕೈತಪ್ಪಿ ಮಕ್ಕಳ ಟೊಪ್ಪಿಗೆ ಕೊಟ್ಟಿರಬೇಕೆಂದು ಸಮಾಧಾನ ಮಾಡಿಕೊಂಡು ಇನ್ನೊಂದನ್ನು ಏರಿಸಿದೆ. ಅದು ನನ್ನ ತಲೆಯನ್ನಲ್ಲದೆ ಅರ್ಧ ಮುಖವನ್ನೂ ನುಂಗಿತು. ಇದರಲ್ಲಿ ತಪ್ಪಿಗೆ ಅವಕಾಶವೇ ಇದ್ದಿಲ್ಲ. ಇದು ೩೦ ಇಂಚು ತಲೆಯ ಯಾವನೋ ಮಹಾ ದೇಶಭಕ್ತನದೇ ಇರಬೇಕು ಆಗ ನನಗೆ ಅಗಸನ ಮೇಲಿನ ಸಿಟ್ಟಿಗಿಂತಲೂ ಆ ದೇಶಭಕ್ತನ ಅವಸ್ಥೆಯ ಚಿಂತೆ ಹೆಚ್ಚಾಯಿತು. ಅವನು ಇವೊತ್ತಿನ ಸಮಾರಂಭಕ್ಕೆ ಇದೇ ಟೊಪ್ಪಿಗೆಯನ್ನು ಅವಲಂಬಿಸಿದ್ದು ನನ್ನ ೨೩ ಇಂಚಿನ ಶಿರಸ್ತ್ರಾಣ ಅವನಿಗೆ ಹೋಗಿದ್ದರೆ ಅವನ ಅವಸ್ಥೆ ಏನಾಗಬೇಕು ? ಯಾವ ಖಾದೀ ಭಂಡಾರವೂ ಇಂಥ ರುಂಡವನ್ನು ಬಳಸಬಲ್ಲ ತಯಾರಿ ಟೊಪ್ಪಿಗೆಯನ್ನು ಇಟ್ಟಿರುವುದಿಲ್ಲ. ಪಾಪ! ಅವನು ಈ ಸಭೆಗೆ ಎರವಾಗಬೇಕಾದೀತು.

ಮೂರನೇ ಟೊಪ್ಪಿಗೆ ಸುದೈವದಿಂದ ನನ್ನ ತಲೆಗೆ ಸರಿಹೋಯಿತು. ನಾನು ಕನ್ನಡಿಯಲ್ಲಿ ನೋಡಿಕೊಂಡು ಉಬ್ಬಿನಿಂದಲೇ ಸಭೆಗೆ ಹೋದೆ.

ಸಭೆಯ ಕಾರ್ಯಕಲಾಪ ಪ್ರಾರಂಭವಾದೊಡನೆ ವೇದಿಕೆಯ ಮೇಲೆ ಕುಳಿತು ತಲೆಬಾಗಿಸಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದ ನನಗೆ ಎಲ್ಲರ ಕಣ್ಣುಗಳೂ ಮಂತ್ರಿಗಳ ಮುಖ ಬಿಟ್ಟು ನನ್ನ ಕಡೆಗೇ ನೋಡುತ್ತಿರುವಂತೆ ಒಂದು ಕಸವಿಸಿಯ ಭಾವನೆಯುಂಟಾಯಿತು. ಮಂತ್ರಿಗಳ ಭಾಷಣ ಪ್ರಾರಂಭವಾಗುತ್ತಲೇ ಸಣ್ಣಗೆ ಒಂದು ಮೂಲೆಯಿಂದ ನಗು ಪ್ರಾರಂಭವಾಗಿ ಸುಂಟರ ಗಾಳಿಯಂತೆ ಸುತ್ತಲೂ ವ್ಯಾಪಿಸಿತು. ಮಂತ್ರಿಗಳ ಭಾಷಣದ

ವರದಿ ಬರೆದುಕೊಳ್ಳುತ್ತಿದ್ದ ನಾನು ಕಂಸಿನಲ್ಲಿ (ನಗು), (ಹೆಚ್ಚು ನಗು) ಎಂದು ಯಾಂತ್ರಿಕವಾಗಿ ಒಂದೆರಡು ಸಲ ಬರೆದುಕೊಂಡೆ. ಆದರೆ ಅವರ ಮಾತಿನಲ್ಲಿ ನಗು ಬರಿಸುವಂಥದೇನೂ ಇರಲಿಲ್ಲೆಂದು ನನಗೆ ಹೊಳೆಯದಿರಲಿಲ್ಲ. ಮಂತ್ರಿಗಳು ಗಾಬರಿಯಾಗಿ ಮಾತು ನಿಲ್ಲಿಸಿದರು.

ಸಭೆಯನ್ನು ಕೆಡಿಸಬೇಕೆಂದು ಕಮ್ಯುನಿಷ್ಟರೇನೋ ಒಳಸಂಚು ಮಾಡಿದ್ದಾರೆಂದು ನಾನು ತರ್ಕಿಸುತ್ತಿದ್ದಂತೆ, ವೇದಿಕೆಯ ಮೇಲಿದ್ದ ನನ್ನ ಮಿತ್ರರೊಬ್ಬರು ನನಗೆ ಒಂದು ಚೀಟಿ ಕಳಿಸಿದರು. ಅದು ಚಿಕ್ಕದಿದ್ದರೂ ನಿಸ್ಸಂದಿಗ್ಧವಾಗಿತ್ತು: "ಟೊಪ್ಪಿಗೆ ತೆಗೆದು ಕಿಸೆಯಲ್ಲಿ ಹಾಕು, ಇಲ್ಲವೆ ಹೊರಟು ಹೋಗು." ಟೊಪ್ಪಿಗೆ ತೆಗೆದು ನೋಡಿದ ಕೂಡಲೆ ನಗೆಯ ರಹಸ್ಯ ನನಗೆ ತಿಳಿಯಿತು. ಆ ಟೊಪ್ಪಿಗೆಗೆ ತಲೆಯ ಮೇಲಿನ ಚಕ್ರವೇ ಇದ್ದಿಲ್ಲ. ಟೊಪ್ಪಿಗೆಯಿಂದ ಹೊರ ಹಣಕುತ್ತಿದ್ದ ನನ್ನ ನೆತ್ತಿಯ ದೃಶ್ಯವೇ ಸಭೆಯಲ್ಲಿ ನಗೆಯ ತುಫಾನು ಎಬ್ಬಿಸಿತ್ತು. ಆಗಿನ ನನ್ನ ಅವಸ್ಥೆಯನ್ನು ಏನನ್ನಲಿ.

ಅಗಸನೊಡನೆ ನನ್ನ ಪ್ರಥಮ ಸಂಬಂಧದ ಈ ಅನುಭವವು ನನ್ನನ್ನು ಆ ಜಾತಿಯ ಮೇಲೆ ಉರಿದುಬೀಳುವಂತೆ ಮಾಡಿತು. ಅಗಸನಿಗೂ ಕತ್ತೆಗೂ ದೇವರು ಗಂಟುಹಾಕುವಾಗ ಎರಡನೆಯದರ ಬಹುವಂಶವನ್ನು ಮೊದಲನೆಯವನಲ್ಲಿ ಸೇರಿಸಿದ್ದಾನೆ ಎಂದು ನಾನು ಕಟುವಾಗಿ ಯೋಚಿಸಿದೆ. ಅಗಸನನ್ನು ಇನ್ನು ಕಣ್ಣೆತ್ತಿ ನೋಡುವದಿಲ್ಲ ಎಂದು ಪಣತೊಟ್ಟೆ.

ಆದರೆ ಈಚೆಗೆ ನಾನು ಅಗಸವರ್ಗದೊಡನೆ ರಾಜಿಮಾಡಿಕೊಂಡಿದ್ದೇನೆ. ಖಾದಿಗೆ ಕೂಡ ನಾಗರಿಕತೆ ಬಂದಿರುವ ಈ ಕಾಲದಲ್ಲಿ ಆಧುನಿಕ ನಾಗರಿಕತೆಯು ತ್ರಿಮೂರ್ತಿಗಳಲ್ಲೊಬ್ಬನಾದ ಅಗಸನ (ಮತ್ತಿಬ್ಬರು ಸಿಂಪಿಗ, ಕ್ಷೌರಿಕ) ಹಂಗಿಲ್ಲದೆ ಬಾಳುವೆನೆಂಬವನ "ಸೊಕ್ಕ ನೋಡಿ (ಬೇಂದ್ರೆಯವರನ್ನುವಂತೆ) ಯಮ ನಕ್ಕ!" ಅಗಸನ ಸಂಗಡ ಜಗಳವಿರುವವನನ್ನು ಇಂದಿನ ಸಮಾಜ ನಾಗರಿಕನೆಂದು ಒಪ್ಪುವದೇ ಇಲ್ಲ. ಅವನ ಸಂಗಡ ರಾಜಿಯಾದಬಳಿಕ ನಾನೀಗ ಅವನಲ್ಲಿ ಎಷ್ಟೋ ಗುಣಗಳನ್ನೂ ಕಂಡಿದ್ದೇನೆ.

ಅಗಸನಿಲ್ಲದಿದ್ದರೆ ನಾಗರಿಕತೆಯೇನಾಗುತ್ತಿತ್ತೆಂದು ಒಂದು ಕ್ಷಣ ವಿಚಾರಿಸಿರಿ. ನಿಮ್ಮ ಸ್ಟ್ರೀಂಲೈನ್ ರೈಲು, ನಿಮ್ಮ ರೋಲ್ಸರಾಯ್ಸಕಾರು, ನಿಮ್ಮ ಅಣುಬಾಂಬು ಯಾವದೂ ನಾಗರಿಕತೆಯ ಆಧಾರವಲ್ಲ. ಇವೆಲ್ಲ ನಿಂತದ್ದು ಚೆನ್ನಾಗಿ ಒಗೆದು ಇಸ್ತ್ರಿಮಾಡಿದ ಚೊಣ್ಣ ಕೋಟು ಟೈಗಳ ಇಸ್ತ್ರಿ ಪಟ್ಟಿಗಳ ಮೇಲೆ. ಆಧುನಿಕ ಯುಗದ ಭೀಕರ ರೂಪವನ್ನು ಮುಚ್ಚಿ ಅದನ್ನು ಸುಂದರವಾಗಿ ಮಾಡಿದವನೇ ಅಗಸ. ಅವನಲ್ಲದಿದ್ದರೆ ಅತಿ ಚತುರ ಸಿಂಪಿಗ ಹೊಲಿದಂಥ ನಿಮ್ಮ ಸೂಟು ಕೂಡ ನಿಮ್ಮನ್ನು ನಾಗರಿಕನಾಗಿ ಮಾಡಲಾರದು. ಕುರೂಪಿ ವರನಿಗೆ ವರದಕ್ಷಿಣೆ ತರುವದು, ದಿವಾಳಿ ಕಂಪನಿಯ ಏಜಂಟನಿಗೆ ಗಿರಾಕಿಗಳನ್ನು ಕೊಡುವದು, ಬಟಾಟಿ ತಲೆಯ ಉಮೇದ್ವಾರನಿಗೆ ನೌಕರಿ ದೊರಕಿಸುವದು ಅಗಸನ ಮಹಿಮೆ.

ತ್ರಿಮೂರ್ತಿ ಅಂದೆನಲ್ಲ—ಬಟ್ಟೆಯ ಮಟ್ಟಿಗೆ ಸಿಂಪಿ ಬ್ರಹ್ಮನಾದರೆ ಅಗಸ ಪ್ರಳಯರುದ್ರನೇ ಸೈ ಎಂದು ನನಗೆ ಟೊಪ್ಪಿಗೆಯ ಅನುಭವದ ಕಾಲದಿಂದಲೂ ಅನಿಸಿದೆ. ಆದರೆ ಈಗ ನನ್ನ ಅಗಸ ನನ್ನೊಂದು ಶರ್ಟನ್ನು ಹರಿದು ತಂದರೆ ಮೊದಲಿನಷ್ಟು ಸಿಟ್ಟು ಬರುವದಿಲ್ಲ. ಮಲಿನವಾಗಿದ್ದುದನ್ನು ಶುದ್ಧಮಾಡಬೇಕಾದರೆ ಮೇಲಿಂದ-ಮೇಲೆ ಇಂಥ ಸಂಕಟ ಕಾದಿರುತ್ತದೆ. ಡಾಕ್ಟರರಿಗೆಲ್ಲ ತಿಳಿದಿರುವಂತೆ, ಕೆಲ ವೇಳೆ ರೋಗಿಯನ್ನು ಕೊಲ್ಲದೆ ರೋಗ ಗುಣಪಡಿಸಲಾಗುವದಿಲ್ಲ. ಬಟ್ಟೆಹರಿಯದೆ ಅದನ್ನು ಸ್ವಚ್ಛಮಾಡಲೂ ಸಾಧ್ಯವಾಗುವದಿಲ್ಲ. ಅಂಥ ಶರ್ಟುಗಳನ್ನು ನಾನೀಗೀಗ ಸಿಟ್ಟಿನಿಂದ ತೆಗೆದು ಅಗಸನ ಮುಸುಡಿಯ ಮೇಲೆ ಒಗೆಯುವದಿಲ್ಲ. ಬದಲಿಗೆ ಅದಕ್ಕೆ ನನ್ನ ಕೊನೆಯ ಆಲಿಂಗನವೆಂದು ಅದನ್ನು ತೊಟ್ಟು ಹರಕು ಮುಚ್ಚಲು ಮೇಲೆ ಕೋಟುಹಾಕಿಕೊಳ್ಳುತ್ತೇನೆ.

ಅಗಸನು ಎಂದೂ ಸ್ವಂತ ಬಟ್ಟೆ ಹೊಲಿಸುವದಿಲ್ಲ ಎಂಬ ಅತಿಶಯೋಕ್ತಿಮಯ ಆರೋಪವನ್ನು ನಾನು ಆಗಾಗ್ಗೆ ಕೇಳಿದ್ದೇನೆ. ಇದನ್ನು ನಾನು

ನಿಸ್ಸಂದಿಗ್ಧವಾಗಿ ನಿರಾಕರಿಸುತ್ತೇನೆ. ಯಾಕೆಂದರೆ, ಒಮ್ಮೊಮ್ಮೆ ನನ್ನ ಅಗಸನು ಸ್ವಂತ ಬಟ್ಟೆ ಹೊಲಿಸಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಸ್ವಂತ ಬಟ್ಟೆ ಹಾಕಿಕೊಳ್ಳದಿರುವಾಗ, ಅವನು ನಿಮ್ಮ ಜರದ ರುಮಾಲು, ಬನ್ನಿ ಜುಬ್ಬ, ಗಬರ್ಡೀನ್ ಕೋಟು, ಕ್ಯಾಲಿಕೋ ಮರ್ಸರೈಜ್ಡ ಧೋತರಗಳನ್ನು ವಿನಿಯೋಗಿಸಿಕೊಳ್ಳುವದಿಲ್ಲೆಂದು ನಾನು ಗ್ಯಾರಂಟಿ ಕೊಡಲಾರೆ. ಆದರೆ ಅಗಸನನ್ನು ಸ್ವಲ್ಪ ಸಹಾನುಭೂತಿಯಿಂದ ನೋಡಿರಿ. ನೀವು ಚಂದ ಚಂದವಾದ ನವಿರುನವಿರಾದ ಬಟ್ಟೆಗಳನ್ನು ಅವನಿಗೊಪ್ಪಿಸುತ್ತೀರಿ. ಕೈಯಿಂದ ಮುಟ್ಟುವಾಗಲೇ ಮೈಮರುಳಾಗಿಸುವ ಈ ಬಟ್ಟೆಯನ್ನು ಒಮ್ಮೆಮಾತ್ರ ತೊಡಬೇಕೆಂದು ಅವನಿಗೆ ಹಂಬಲವಾದರೆ ಅಚ್ಚರಿಯೇನು ? ಪ್ರಲೋಭನಗಳನ್ನು ತಡೆಯುವದು ಋಷಿಗಳಿಗೂ ಅಸಾಧ್ಯವಾಗಿತ್ತಲ್ಲವೆ ?

ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಅಗಸ ನಿಮಗೆ ಬಹಳಬಳ್ಳೆಯವನಾಗಿಯೇ ಕಾಣದಿರನು. ಅವನು ಒಮ್ಮೊಮ್ಮೆ ನಿಮ್ಮ ಬಟ್ಟೆ ಹಾಕಿಕೊಳ್ಳಬಹುದು ; ಆದರೆ ಸಿಂಪಿಗನಂತೆ ನಿಮ್ಮ ಬಟ್ಟೆ ಕದಿಯುವದಿಲ್ಲ. ಒಮ್ಮೊಮ್ಮೆ ಅವನು ನಿಮ್ಮ ಬಟ್ಟೆ ಕಳೆದರೆ ಮತ್ತಾರದನ್ನಾದರೂ ತಂದು ಕೊಡದಿರುವದಿಲ್ಲ. ನೀವು ಇದಕ್ಕಾಗಿ ಮನಸಿನಲ್ಲಿ ಹಿಂಜರಿದು ಆ ಬಟ್ಟೆಯನ್ನು ತಿರುಗಿ ಕೊಡಲು ಹೋಗಬೇಡಿರಿ. ಯಾಕಂದರೆ ಆ ಇನ್ನೊಬ್ಬರಿಗೆ ಮತ್ತಾರದಾದರೂ ಅವರಿಗೆ ಬೇರಾರದಾದರೂ ಬಟ್ಟೆ ಸಿಕ್ಕೇ ಸಿಗುವದು. ( ಕಡೆಯುವನನ್ನು ದೇವರು ನೋಡಿಕೊಳ್ಳುತ್ತಾನೆ ). ಅವನು ನಿಮ್ಮ ಬಟ್ಟೆಗಳನ್ನು ಹೇಳಿದ ಮುದ್ದತ್ತಿಗೆ ಕೊಡಲು ತಪ್ಪಬಹುದು; ಆದರೆ ಇದಕ್ಕೆ ಅವನು ಬಟ್ಟೆಯ ಬ್ರಹ್ಮನಾದ ಸಿಂಪಿಗನಷ್ಟು ಬ್ರಹ್ಮಾಂಡದಂಥ ಸುಳ್ಳುಗಳನ್ನು ಹುಟ್ಟಿಸಿ ಸಮಾಧಾನ ಹೇಳುವದಿಲ್ಲ. ಮಳೆ ಬಂತು, ಕತ್ತೆ ಮೆಟ್ಟಿತು ಇತ್ಯಾದಿ ನಮ್ಮ ನಿಮ್ಮಂಥ ಕ್ಷುದ್ರಾತ್ಮರಿಗೆ ನುಂಗಲು ಸಾಧ್ಯವಿರುವ ಸುಳ್ಳುಗಳನ್ನೇ ಹೇಳುತ್ತಾನೆ.

ಅಗಸ ಗಂಗಾನದಿಯಂತೆ ಸಕಲರ ಮಲಿನ-ಕಲ್ಮಷಗಳನ್ನು ತೊಳೆಯುವ ಪುಣ್ಯಾತ್ಮ. ಗಂಗೆಗೊಮ್ಮೆ ಮಹಾಪೂರ ಬಂದು ಹಳ್ಳಗಳು ಕೊಚ್ಚಿಕೊಂಡು ಹೋದರೂ ಅವಳು ಲೋಕಪಾವನಿಯೇ. ಹಾಗೆಯೇ ನಿಮ್ಮ ಬಟ್ಟೆಗಳನ್ನು ಒಮ್ಮೊಮ್ಮೆ ಹರಿದರೆ, ಕಳೆದರೆ ಅಗಸನ ಶ್ರೇಷ್ಠತೆಗೆ ಚ್ಯುತಿ ಬರಬಾರದು. ಹಾಗೆ ನೋಡಿದರೆ ಗಂಗಾ ಮಹಾಪೂರದಿಂದ ಹುಲುಸಾದ ಮಣ್ಣು ತೀರದ ಹೊಲಗಳಿಗೆ ಬಂದು ಬಿದ್ದು ಭೂಮಿ ಫಲವತ್ತಾಗುವಂತೆ ಅಗಸನ ಪ್ರಮಾದಗಳು ಜವಳಿ ಗಿರಣಿ, ಕೈಮಗ್ಗ, ಖಾದಿ ಉದ್ದಿಮೆಗಳ ಬೆಳವಣಿಗೆಗೆ ಕಾರಣವಾಗಿ ನಿರುದ್ಯೋಗ ನಿವಾರಿಸುವದು. ಅಗಸನಿಂದ ಸ್ವರೂಪ ಕೆಡಿಸಿಕೊಂಡು ಮರಳಿದ ಬಟ್ಟೆಗಳನ್ನು ಬಡಬಗ್ಗರಿಗೆ ದಾನಮಾಡುವ ಬುದ್ಧಿ ಬಹಳ ಬೇಗ ಬರುವದರಿಂದ ಅಗಸನನ್ನು ಅವರೂ ಹರಸಬೇಕು. ಇಡೀ ಸಮಾಜದ ಕೊಳೆಯ ಭಾರವನ್ನು ಹೊತ್ತು ಅವನು ನಿರ್ಮಲಗೊಳಿಸುತ್ತಾನೆ.

ಇಂಥವನಿಗೆ ಸಮಾಜದಲ್ಲಿ ಗಣ್ಯ ಸ್ಥಾನವಿಲ್ಲದ್ದು ಅನ್ಯಾಯ. ಸಾಲದಕ್ಕೆ ಅವನ ವ್ಯವಸಾಯಕ್ಕೆಗಂಭೀರವಾದ ಅಪಾಯ ಬಂದಿದೆ. ಜನರು ಮನೆಯೊಳಗೇ ಇಲೆಕ್ಟ್ರಿಕ್ ಇಸ್ತ್ರಿ ಉಪಯೋಗಿಸುವದಲ್ಲದೆ ದೊಡ್ಡ ದೊಡ್ಡ ಯಂತ್ರಗಳನ್ನು ಹಾಕಿ ಸಾವಿರಾರು ಬಟ್ಟೆಗಳನ್ನು ಕ್ಷಣಾರ್ಧದಲ್ಲಿ ಸ್ವಚ್ಛಮಾಡುವ ಕಂಪನಿಗಳು ತಲೆಯೆತ್ತಿ ಅಗಸನ ಸಮಾಜಸೇವೆಯ ಅಡಿಗಲ್ಲನ್ನೇ ಸಡಿಲಿಸುತ್ತಿವೆ. ಅವನ ಸಹಾಯಕ್ಕಾಗಿಯೇ ದೇವರು ನಿರ್ಮಿಸಿದ ಕತ್ತೆಗಳನ್ನು ಇಟ್ಟಂಗಿ ಭಟ್ಟಿಯವರು ಮಣ್ಣು ತರಲು ಉಪಯೋಗಿಸುವದರಿಂದಲೂ ಅವನಿಗೆ ಪ್ರತಿಕೂಲ ಪರಿಸ್ಥಿತಿ ಒದಗಿದೆ. ಕೈಮಗ್ಗಗಳ ರಕ್ಷಣೆಗಾಗಿ ಗಿರಣಿಗಳ ಉತ್ಪಾದನೆಗೆ ಮಿತಿ ಹಾಕಿದಂತೆ ಅಗಸನ ಉಳಿಗಾಲಕ್ಕಾಗಿ ಯಾಂತ್ರಿಕ ಲಾಂಡ್ರಿಗಳ ಬೆಳವಣಿಗೆಗೆ ತಡೆ ಹಾಕಲೇಬೇಕು. ಯಾಕಂದರೆ ಅಗಸನು ಕೇವಲ ಅಗಸನಲ್ಲ, ಜಾತ್ಯತೀತತೆಯ ಪ್ರತೀಕ. ಭಾರತವೆಲ್ಲ ಜಾತಿಮಯವಾಗಿದ್ದಾಗ ಅವನೊಬ್ಬನು ಎಲ್ಲ ಜಾತಿಯವರ ಸೇವೆಮಾಡಿದವನು.

# ಸಂಖ್ಯೆಗಳೊಡನೆ ಸರಸ!

## ೯

ಅಂಕೆಗಳಲ್ಲಿ ಜಾದೂ ಅಂಕೆಯೆಂಬುದಿದ್ದರೆ ಅದು ಒಂಭತ್ತು. ಅದು ಸಜೀವ ಅಂಕೆಯೆಂದರೂ ಸಲ್ಲುವದು; ಯಾಕೆಂದರೆ ಪ್ರಾಣಿಗಳಲ್ಲಿ ಹೇಗೋ ಹಾಗೆ ಒಂಬತ್ತರಿಂದ ಏನು ಹುಟ್ಟಿದರೂ ಅದರ ಜಾತಿಯು ದೇ.

ಒಂದರಿಂದ ಒಂಭತ್ತರ ವರೆಗಿನ ಸಂಖ್ಯೆಗಳನ್ನು ಕೂಡಿಸಿರಿ: ೪೫ ಆಗುವದು; ಅದರ ಅಂಕೆಗಳನ್ನು ಕೂಡಿಸಿದರೆ ೪ + ೫ = ೯.

ಒಂಭತ್ತಕ್ಕೆ ಒಂದು ಸ್ಥಾನದ ಯಾವ ಸಂಖ್ಯೆಯಿಂದ ಗುಣಿಸಿರಿ, ಉತ್ತರದಲ್ಲಿರುವ ಅಂಕೆಗಳನ್ನು ಕೂಡಿಸಿದರೆ ೯ತ್ತೇ ಬರುವದು:

೯ × ೨ = ೧೮; ೧ + ೮ = ೯

೯ × ೩ = ೨೭; ೨ + ೭ = ೯

೯ × ೪ = ೩೬; ೩ + ೬ = ೯

ಇತ್ಯಾದಿ.

ಹಾಗೆಯೇ, ಎರಡು ಅಥವಾ ಹೆಚ್ಚು ಸ್ಥಾನಗಳುಳ್ಳ ಯಾವ ಸಂಖ್ಯೆಯನ್ನು ೯ ರಿಂದ ಗುಣಿಸಿದರೂ ಉತ್ತರದಲ್ಲಿರುವ ಅಂಕೆಗಳನ್ನು ಕೂಡಿಸಿದರೆ ಅದು ೯ ರಿಂದ ಭಾಜ್ಯವಾಗುವದು.

ಉದಾ:

೬೪ × ೯ = ೫೭೬

೫ + ೭ + ೬ = ೧೮ = ೯ × ೨

೭೬೪೩ × ೯ = ೬೮೭೮೭

೬ + ೮ + ೭ + ೮ + ೭ = ೩೬ = ೯ × ೪

ಇತ್ಯಾದಿ.

ಯಾವುದಾದರೊಂದು ಸಂಖ್ಯೆಯೊಳಗಿನ ಅಂಕೆಗಳನ್ನು ಕೂಡಿಸಿದರೆ ೯ ಅಥವಾ ೯ ರ ಗುಣಿತಗಳಾಗುತ್ತಿದ್ದರೆ ಆ ಸಂಖ್ಯೆ ೯ ರಿಂದ ನಿಶ್ಶೇಷವಾಗಿ ಭಾಗಿಸಲು ಬರುವದು. ಉದಾ: ೭೫೫೧ ಎಂಬ ಅಂಕಿ ೯ ರಿಂದ ಭಾಜ್ಯವೆಂದು ನೋಡಿದೊಡನೆ ಹೇಳಬಹುದು. ಯಾಕೆಂದರೆ, ೭ + ೫ + ೫ + ೧ = ೧೮ = ೯ × ೨.

ಇದರಿಂದ ಎಂಥೆಂಥ 'ಮೆಜಿಕ್' ಮಾಡಬಹುದನ್ನುತ್ತೀರಿ!

೭೫೩*೧೬೨೮—ಇದರಲ್ಲಿ *ಗುರುತು ಇದ್ದಲ್ಲಿದ್ದ ಅಂಕೆ ಅಳಿಸಿಹೋಗಿದೆ. ಆದರೆ ಮೇಲಿನ ಇಡೀ ಸಂಖ್ಯೆಯನ್ನು ೯ ರಿಂದ ಭಾಗಿಸಿದರೆ ಶೇಷ ಉಳಿಯುವದಿಲ್ಲೆಂದು ನಿಮಗೆ ಗೊತ್ತಿದೆ. ಅಳಿಸಿಹೋದ ಸಂಖ್ಯೆ ಯಾವದು? ಇದರ ಉತ್ತರ ಬಹಳ ಸುಲಭ. ಮೇಲಿನ ಸಂಖ್ಯೆಯಲ್ಲಿನ ಅಂಕೆಗಳನ್ನೆಲ್ಲ ಕೂಡಿಸಿರಿ; ೩೨ ಬರುತ್ತದೆ. ಇದು ೯ ರಿಂದ ಭಾಜ್ಯವಾಗಬೇಕಾದರೆ ೪ ಸೇರಿಸಬೇಕು. ಆದ್ದರಿಂದ ಅಳಿಸಿ ಹೋದ ಅಂಕಿ ೪ ಇರಬೇಕು. ಬೇಕಾದರೆ *ಇದ್ದಲ್ಲಿ ೪ ಹಾಕಿ ಭಾಗಿಸಿ ನೋಡಿರಿ.

ಇನ್ನೂ ಬೇಕೆ? ಎರಡು ಅಥವಾ ಹೆಚ್ಚು ಸ್ಥಾನಗಳುಳ್ಳ ಯಾವ ಅಂಕೆಯನ್ನಾದರೂ ತೆಗೆಕೊಳ್ಳಿರಿ. ಅದರ ಅಂಕೆಗಳನ್ನು ಸ್ಥಾನಪಲ್ಲಟಗೊಳಿಸಿರಿ. ಆಮೇಲೆ ಮೂಲ ಸಂಖ್ಯೆಗೂ ಪಲ್ಲಟಿತ ಸಂಖ್ಯೆಗೂ ಅಂತರ ತೆಗೆಯಿರಿ. ಉತ್ತರವು ಯಾವಾಗಲೂ ೯ ಇಲ್ಲವೆ ೯ ರ ಗುಣಿತವಾಗಿ ಬರುವದು. ಉದಾ:

೫೨ − ೨೫ = ೨೭ = ೯ × ೩

೬೫೪ − ೫೪೬ = ೧೦೮ = ೯ × ೧೨

೮೫೭೪ − ೪೫೮೭ = ೩೯೮೭ = ೪೪೩ × ೯

ಒಂಭತ್ತರ ಅಂಕೆಯ ಸಹಾಯದಿಂದ ಇಂಥ ಎಷ್ಟೋ ಚಮತ್ಕಾರಗಳನ್ನು ಮಾಡಬಹುದು.

ನ್ಯೂಟನ್ ಫ್ರೆಂಡರ ಪುಸ್ತಕದಿಂದ

## ೩೭

ಈ ಸಂಖ್ಯೆಗೆ ೩,೬,೯, .... ೨೭ ಈ ವರಸೆಯ ಸಂಖ್ಯೆಗಳಿಂದ ಗುಣಿಸಿದರೆ ಆಗುವ ಮೋಜು ನೋಡಿರಿ.

೩೭ × ೩ = ೧೧೧
× ೬ = ೨೨೨
× ೯ = ೩೩೩
× ೧೨ = ೪೪೪
× ೧೫ = ೫೫೫
× ೧೮ = ೬೬೬
× ೨೧ = ೭೭೭
× ೨೪ = ೮೮೮
× ೨೭ = ೯೯೯



## ೧೦೮೯

ಇದೊಂದು ವರ್ಗ ಸಂಖ್ಯೆ ಅಂದರೆ ೩೩ × ೩೩ (೩೩²). ಅದು ಎರಡು ವರ್ಗಗಳ ಅಂತರವೂ ನಿಜ;

೬೫² − ೫೬² = ೩೩² = ೧೦೮೯

ಅದಲ್ಲದೆ ೧೦೮೯ ಕ್ಕೆ ೯ ರಿಂದ ಗುಣಿಸಿದರೆ ಬರುವ ಉತ್ತರವು ಮೂಲ ಸಂಖ್ಯೆಯ ತಿರುವು ಮುರುವಾಗುತ್ತದೆ. ೧೦೮೯ × ೯ = ೯೮೦೧.

ಇಷ್ಟೇ ಅಲ್ಲ.

ಯಾವದೊಂದು ಮೂರು ಸ್ಥಾನಗಳುಳ್ಳ ಸಂಖ್ಯೆ ತೆಗೆದುಕೊಳ್ಳಿರಿ. ಉತ್ತರದಲ್ಲಿ ಋಣ ಸಂಖ್ಯೆಬಾರದಂತೆ ಶತಕ ಸ್ಥಾನದಲ್ಲಿ ಏಕಸ್ಥಾನಕ್ಕಿಂತ ದೊಡ್ಡ ಅಂಕೆಯಿರಲಿ. ಹೀಗೆ ಮೂರು ಯಾವುದೇ ಸಂಖ್ಯೆಗಳನ್ನು ಆರಿಸಿಕೊಳ್ಳೋಣ.

| | | | |
|---|---|---|---|
| | ೬೮೪ | ೮೩೫ | ೯೭೨ |
| ತಿರುವು ಮುರುವು ಮಾಡಿರಿ | ೪೮೬ | ೫೩೮ | ೨೭೯ |
| ಕಳೆಯಿರಿ | ೧೯೮ | ೨೯೭ | ೬೯೩ |
| ತಿರುವು ಮುರುವು ಮಾಡಿರಿ | ೮೯೧ | ೭೯೨ | ೩೯೬ |
| ಕೂಡಿಸಿರಿ | ೧೦೮೯ | ೧೦೮೯ | ೧೦೮೯ |

ಯಾವ ಸಂಖ್ಯೆ ಹಿಡಿದರೂ ಪರಿಣಾಮ ಯಾವಾಗಲೂ ೧೦೮೯ !



## ೧೪೨೮೫೭

ಈ ಅಂಕೆಯ ಸೋಜಿಗವಂತೂ ಅಸಾಧಾರಣ. ಅದನ್ನು ೩ ರಿಂದ ಗುಣಿಸೋಣ—

೧೪೨೮೫೭ × ೩
೪೨೮೫೭೧

ಉತ್ತರದಲ್ಲಿರುವ ಅಂಕೆಗಳೆಲ್ಲವೂ ಮೂಲ ಗುಣ್ಯದ ಅಂಕೆಗಳೇ; ಅದೇ ವರಸೆಯಲ್ಲಿ; ಬುಡದಲ್ಲಿದ್ದ ೧ ಮಾತ್ರ ತುದಿಗೆ ಹೋಗಿ ಕುಳಿತಿದೆ.

ಈಗ ಅದನ್ನು ೫ ರಿಂದ ಗುಣಿಸುವಾ—

೧೪೨೮೫೭ × ೫
೭೧೪೨೮೫

ಈಗ ಮೂಲ ಗುಣ್ಯದ ತುದಿಯಲ್ಲಿದ್ದ ೭ ಉತ್ತರದಲ್ಲಿ ಮೊದಲಿನ ಸ್ಥಾನಕ್ಕೆ ಜಿಗಿದು ಕುಳಿತಿದೆ. ಅಂಕೆಗಳೂ ಅವುಗಳ ವರಸೆಯೂ ಅವೇ.

ಈ ಮಾಯಕದ ಸಂಖ್ಯೆಯನ್ನು ೭ ರ ವರೆಗಿನ ಇತರ ಅಂಕೆಗಳಿಂದ ಗುಣಿಸಿರಿ. ಉತ್ತರದಲ್ಲಿ ಅವೇ ಅಂಕೆಗಳು ಸ್ಥಾನ ಸರಿಸಿಕೊಂಡು ಪ್ರತ್ಯಕ್ಷವಾಗುತ್ತವೆ.

೧೪೨೮೫೭ × ೨ = ೨೮೫೭೧೪
× ೪ = ೫೭೧೪೨೮
× ೬ = ೮೫೭೧೪೨

ಇವೆಲ್ಲವುಗಳ ತುದಿಗೆ—

೧೪೨೮೫೭ × ೭ ಮಾತ್ರ
೯೯೯೯೯೯ ಆಗುತ್ತದೆ!

೭ ರ ಅಂಕಿಯೊಡನೆ ಈ ಸಂಖ್ಯೆಯ ಸಂಬಂಧ ಅಪರೂಪವಾದದ್ದು ನೋಡಿರಿ—

೧/೭ ನ್ನು ದಶಾಂಶಕ್ಕೆ ಪರಿವರ್ತಿಸಿದರೆ—

೦·೧೪೨೮೫೭,೧೪೨೮೫೭,೧೪೨೮೫೭ ..... ..... ಹೀಗೇ ಅನಂತವಾಗಿ ಬೆಳೆಯುತ್ತಲೇ ಹೋಗುತ್ತದೆ.

ಸಂಖ್ಯೆಗಳ ವರ್ತನೆ ಅದ್ಭುತವಾಗಿರುತ್ತದೆ ಅಲ್ಲವೆ?

ಜಿಂಕಿಯನ್ನು ಕಾಪಾಡುವದು ಮಕ್ಕಳ ಅಥವಾ ತನ್ನ ಸ್ವಂತ ಜೀವಕ್ಕಿಂತ ಮುದುಕಿಗೆ ಮುಖ್ಯವಾಗಿತ್ತು.

# ಅಗ್ನಿಹೋತ್ರ

ಪ್ರೊ. ಜ. ಅ. ಅಷ್ಟಪುತ್ರೆ

ಇದೊಂದು ಅತ್ಯಂತ ಪುರಾತನಕಾಲದ ಕತೆ. ಆಗ್ಗೆ ಮಾನವ ಈಗಿನಂತೆ ನಾಗರಿಕನಾಗಿರಲಿಲ್ಲ. ಆತನಿಗೆ ಕಸಬು-ಕೈಗಾರಿಕೆ ಗೊತ್ತಿರಲಿಲ್ಲ. ಬೇಸಾಯವೂ ಗೊತ್ತಿರಲಿಲ್ಲ. ಅಷ್ಟೇಕೆ, ಆತನಿಗೆ ಜಿಂಕಿಯನ್ನು ಉತ್ಪನ್ನ ಮಾಡಿಕೊಳ್ಳುವ ಕಲೆಯೂ ಹಸ್ತಗತವಾಗಿರಲಿಲ್ಲ. ಆಗ ಮಾನವ ಜೀವಿಸುತ್ತಿದ್ದುದು ಚಿಕ್ಕ ದೊಡ್ಡ ಗುಂಪುಗಳಲ್ಲಿ ಮಾತ್ರ.

ಮಾನವನ ಆ ಗುಂಪುಜೀವನವೂ ವಿಲಕ್ಷಣವಾಗಿಯೇ ಇದ್ದಿತು. ಆ ಗುಂಪಿನಲ್ಲಿ ನಾಯಕನೊಬ್ಬನಾಗಲೂ ಇರಲಿಲ್ಲ. ಆದರೂ ಗುಂಪಿನ ಜನತೆಯಲ್ಲೊಂದು ಬಗೆಯ ಸೂತ್ರಬದ್ಧತೆ ನಡೆದುಬರುತ್ತಿದ್ದಿತು. ಎಲ್ಲರೂ ಒಟ್ಟಾಗಿ ಸೇರಿ ಕೆಲಸ ಮಾಡುವದು, ಎಲ್ಲರೂ ಸೇರಿ ದುಡಿಮೆಯ ಫಲವನ್ನು ಉಣ್ಣುವದು ಇವೇ ಆ ಗುಂಪಿನ ನಿತ್ಯಜೀವನ. ಬೇಸಾಯ, ಪಶುಪಾಲನೆ ಕೂಡ ಗೊತ್ತಿರದ ಆ ಗುಂಪಿನ ಮುಖ್ಯ ದುಡಿಮೆ ಎಂದರೆ ಆಹಾರ ಸಂಪಾದನೆ. ಆಹಾರ ಸಂಪಾದನೆಗಾಗಿ ಅವರಿಗೆ ಗೊತ್ತಿದ್ದ ಮಾರ್ಗಗಳೆಂದರೆ ಎರಡೇ-ಒಂದು ಬೇಟೆಯಾಡುವದು; ಇನ್ನೊಂದು ಪ್ರಕೃತಿದತ್ತವಾದ ಹಣ್ಣು-ಹಂಪಲು, ಗಡ್ಡೆ-ಗೆಣಸುಗಳನ್ನು ಆಯ್ದು ತರುವದು. ಎಲ್ಲರೂ ದುಡಿದರೆ ಏನಾ ಎಲ್ಲರ ಹೊಟ್ಟೆ ತುಂಬುವಂತೆಯೂ [illegible]. ಬೇಟೆ ಸಿಕ್ಕದೆ ಹೋದರೆ ಆ ದಿನ ಎಲ್ಲರಿಗೂ [illegible].

ಗುಂಪಿನಲ್ಲಿ ಕುಟುಂಬದ ಕಲ್ಪನೆ ಇರಲಿಲ್ಲ. ಗಂಡ-ಹೆಂಡತಿ ಎಂಬ ಕಟ್ಟುನಿಟ್ಟುಗಳಿಲ್ಲ. ಹೊಸದಾಗಿ ಹುಟ್ಟಿದ ಮಕ್ಕಳೆಲ್ಲ ಇಡಿಯ ಗುಂಪಿನ ಮಕ್ಕಳೆಂದೇ ತಿಳಿದು ಆಸ್ಥೆಯಿಂದ ಪೋಷಿಸಲ್ಪಡುತ್ತಿದ್ದವು. ಮಕ್ಕಳ ತಾಯಿಯನ್ನು ಗುರುತಿಸುವದು ಸಾಧ್ಯವೇ ಹೊರತು ತಂದೆಯನ್ನು ಗುರುತಿಸುವದು ಸಾಧ್ಯವಿರಲಿಲ್ಲ. ಆದರೆ ಇದರಿಂದ ಗುಂಪಿನ ವ್ಯವಹಾರಕ್ಕೆ ಯಾವದೇ ಬಗೆಯ ತೊಂದರೆ ಬರುತ್ತಿರಲಿಲ್ಲ. ಹೆಣ್ಣು ಗಂಡಿನಷ್ಟೇ ಧೀರಳೂ ಸ್ವತಂತ್ರವೃತ್ತಿಯವಳೂ ಆಗಿದ್ದಳು.

ಸಾಮಾನ್ಯವಾಗಿ ಶೀತಕಟಿಬಂಧ ಎಂದು ಕರೆಯುವ ಪ್ರದೇಶದಲ್ಲಿ ಇಂತಹ ಒಂದು ಗುಂಪು ವಾಸವಾಗಿದ್ದಿತು. ಶೀತಪ್ರದೇಶದಲ್ಲಿಯ ಕಾಡಿನ ಅಂಚಿಗೆ ಹೊಂದಿ ಆ ಚಿಕ್ಕ ಗುಂಪಿನ ವಸತಿಸ್ಥಾನವಿದ್ದಿತು. ವಸತಿ ಸ್ಥಾನಗಳೆಂದರೆ ಅವೇನು ಮನೆಗಳಲ್ಲ. ನಿಸರ್ಗದತ್ತವಾದ ಗುಹೆಗಳು.

ಆ ಗುಂಪಿನ ಜೀವನ ಚಳಿಗಾಲದಲ್ಲಿ ಬಹಳ ಕಷ್ಟಮಯವಾಗುತ್ತಿತ್ತು. ಚಳಿಗಾಲದಲ್ಲಿ ದಕ್ಷಿಣದ ಕಾಡೂ ಬೆಂಗಾಡಾಗುವದರಿಂದ ಹಣ್ಣು ಹಂಪಲವಾಗಲಿ, ಬೇಟೆಯಾಗಲಿ ಸಿಕ್ಕುವದೆ ಅಪರೂಪ. [illegible] ಚಳಿಗಾಲ ದಾಟುವ [illegible]

ಪ್ರೊ. ಅಷ್ಟಪುತ್ರೆಯವರು ಧಾರವಾಡದ ಜನತಾ ಕಾಲೇಜಿನಲ್ಲಿ ವಿಜ್ಞಾನದ ಆಚಾರ್ಯರಾಗಿದ್ದಾರೆ.

ಚಳಿಗೋ ಇಡಿಯ ಗುಂಪಿಗೆ ಗುಂಪೇ ಬಲಿಯಾಗುವದು ಖಂಡಿತ.

ಆ ಗುಂಪಿನವರಿಗೆ ಬೆಂಕಿಯನ್ನು ಹೇಗೆ ಉತ್ಪನ್ನ ಮಾಡಬೇಕು ಎಂಬುದು ಗೊತ್ತಿಲ್ಲ. ಆದಾಗ್ಯೂ ಗುಹೆಯ ಒಂದು ಮೂಲೆಯಲ್ಲಿ ಬೆಂಕಿಯು ಸದಾಕಾಲವೂ ಜಾಜ್ವಲ್ಯಮಾನವಾಗಿ ಉರಿಯುತ್ತಿರುತ್ತಿತ್ತು. ಆ ಬೆಂಕಿ ಅಲ್ಲಿ ಹೇಗೆ ಬಂದಿತು ? ಅಥವಾ ಮೊಟ್ಟಮೊದಲು ಅದನ್ನು ಯಾರು ಹೊತ್ತಿಸಿದರು ಇದಾವುದೂ ಅವರಿಗೆ ಗೊತ್ತಿಲ್ಲ. ಅದನ್ನು ಸದಾಕಾಲವೂ ಉರುವಲ ಹಾಕುತ್ತ ಜೀವಂತವಾಗಿಡುವದಕ್ಕಾಗಿ ಮಾತ್ರ ಆ ಗುಂಪು ಮಹಾ ದಕ್ಷತೆಯನ್ನು ವಹಿಸುತ್ತಿದ್ದಿತು. ಒಟ್ಟು ಜೀವನದ ಮಹತ್ವದ ಅಂಗವಾಗಿ ಅದೊಂದು ಬೆಳೆದು ಬಂದಿತ್ತು, ಅಷ್ಟೇ.

ಇಂತಹದೇ ಒಂದು ಭೀಕರ ಚಳಿಗಾಲ ಸನ್ನಿಹಿತವಾಗತೊಡಗಿತ್ತು. ಇಡಿಯ ಗುಂಪಿಗೆ ಗುಂಪೇ ಚಳಿಗಾಲವನ್ನಿದಿರಿಸಲು ಪ್ರತಿ ಸಲದಂತೆ ಸರ್ವ ಸನ್ನಾಹ ಮಾಡಿಕೊಳ್ಳುವದರಲ್ಲಿ ಮೈಮರೆತು ಕೆಲಸ ಮಾಡುತ್ತಿದ್ದಿತು. ಉರುವಲ ಸಂಗ್ರಹವನ್ನೇನೋ ಸ್ವಲ್ಪ ಮಟ್ಟಿಗೆ ಮಾಡಿಯಾಗಿತ್ತು. ಆದರೆ ಆ ಸಲ ಆಹಾರಸಂಗ್ರಹ ಏಕೋ ಕಷ್ಟಕರವಾಗತೊಡಗಿತ್ತು. ಬೇಟೆ ಸಿಕ್ಕುವದು ನಿಂತುಹೋಗಿದ್ದಿತು. ಸಿಕ್ಕಿದ ಹಣ್ಣುಹಂಪಲು ದಿನದ ಆಹಾರಕ್ಕೂ ಸಾಲುತ್ತಿರಲಿಲ್ಲ.

ಚಳಿಗಾಲವಾದರೋ ಒಳ್ಳೆಯ ತೀವ್ರ ಗತಿಯಿಂದ ಸಮೀಪಿಸುತ್ತಿದ್ದಿತು. ದಕ್ಷಿಣದ ಕಾಡಿನಲ್ಲಿ ಬಲುದೂರ ಒಳಸೇರುವದು ಮಹಾ ಅಪಾಯಕರವಾಗಿದ್ದಿತು. ಸರಿಯಾಗಿ ತಿರುಗಿ ಬರಲು ದಾರಿ ಸಿಕ್ಕುವದೇ ಕಷ್ಟ. ಜೊತೆಗೆ ಹಿಮಗಾಳಿ. ಹಗಲು ದಿನವೂ ಕಿರಿ-ಅವಧಿಯದಾಗುತ್ತ ನಡೆದಿದ್ದಿತು. ಏನಾದರೇನು ? ಸಾಹಸ ಕೈಕೊಳ್ಳದಿದ್ದರೆ ಇಡಿಯ ಗುಂಪೇ ಅಳಿದು ಹೋಗುವ ಸಂಭವವಿದ್ದಿತು. ಸರಿ, ಆಹಾರ ಸಂಗ್ರಹಕ್ಕಾಗಿ ಸಾಹಸ ಕೈಕೊಳ್ಳಲು ಗುಂಪಿಗೆ ಗುಂಪೇ ಸಿದ್ಧವಾಯಿತು.

ಬೆಂಕಿ ಇದ್ದ ಗುಹೆಯಲ್ಲಿ ಅಲ್ಲಿಯವರೆಗೆ ಕೂಡಿ ಹಾಕಿದ ಉರುವಲವನ್ನೂ ಅಲ್ಪ ಸ್ವಲ್ಪ
ಸಂಗೃಹೀತವಾದ ಆಹಾರವನ್ನೂ ತಂದಿ
ಗುಂಪು ದಂಡಯಾತ್ರೆಗೆ ಸಿದ್ಧವಾಗಿ ಹೊರಟಿ
ಹಿಂದೆ ಉಳಿದವಳೆಂದರೆ ಗುಂಪಿನಲ್ಲಿಲ್ಲ ಅತ್
ವಯಸ್ಕಳಾದ ಮುದುಕಿಯೊಬ್ಬಳು. ಬ
ಯನ್ನು ಆರಗೊಡದಂತೆ ರಕ್ಷಿಸುವದು ಹಾ
ಗುಂಪಿನ ಎರಡು ಚಿಕ್ಕಮಕ್ಕಳನ್ನು ನೋ
ಕೊಳ್ಳುವದು ಇವು ಅವಳಿಗೆ ಒಪ್ಪಿಸಿದ ಕೆಲ
ಳಾಗಿದ್ದವು. ಈ ಮಕ್ಕಳ ತಾಯಂದಿರೂ ಅ
ದವರೊಡನೆ ಗುಂಪಿನ ದಂಡಯಾತ್ರೆಯಲ್ಲಿ ಭ
ವಹಿಸಿದ್ದರು. ಸದೃಢರಾದವರಾರೂ ಹಿಂದ
ಯುವಂತಿರಲಿಲ್ಲ.



ಗುಂಪಿನ ಜನವೆಲ್ಲ ಎದುರಿನ ಕಾಡಿನಲ್ಲಿ
ಯಾಗುವವರೆಗೆ ಗುಹೆಯ ಹೊರಕ್ಕೆ ನಿ
ಮುದುಕಿ ನೋಡುತ್ತಿದ್ದಳು. ಕೊನೆಗೂ
ನಿಡುಸುಯ್ದು ಗುಹೆಯ ಒಳಕ್ಕೆ ಬಂದ
ಒಂದು ಕಟ್ಟಿಗೆಯನ್ನು ಬೆಂಕಿಯಲ್ಲಿ ಹಾಕಿದ
ಬೆಂಕಿ ಪ್ರಕಾಶಮಾನವಾಗಿ ಉರಿಯತೊಡಗಿ
ಮಕ್ಕಳಿಗೆ ಆಹಾರ ತಿನ್ನಿಸಿ, ತಾನೂ ತಿಂ
ಪುನಃ ಬೆಂಕಿಯ ಬೆಳಕಿನಲ್ಲಿ ಬಂದು ಕುಳಿತ
ಗುಂಪು ಆಹಾರ ಸಂಗ್ರಹಕ್ಕಾಗಿ ಹೊ
ಹೋದಾಗ ಬೆಂಕಿಯ ರಕ್ಷಣೆಯ ಕೆ
ಯಾವಾಗಲೂ ಇವಳ ಪಾಲಿಗೆ ಕಟ್ಟಿಟ್ಟದ
ಗುಂಪಿಗೆಲ್ಲ ಇವಳೇ 'ಅಗ್ನಿಹೋತ್ರ'. ಈ ಕೆ
ವನ್ನು ಅವಳು ಅನೇಕ ಸಲ ಮಾಡಿದ್ದರೂ

ಸಲ ಅವಳಿಗೇಕೋ ಎಲ್ಲಿಲ್ಲದ ಕಾತರತೆ. ಅವಳ ಮನಸ್ಸು ಅಸ್ಥಿರವಾಗತೊಡಗಿತ್ತು. ಪ್ರತಿಸಲದ ಸ್ಥಿಮಿತ ಅವಳಲ್ಲಿ ಈ ಸಲ ಉಳಿದಿರಲಿಲ್ಲ. ಕಾರಣವೇನೋ ಅವಳಿಗೂ ತಿಳಿಯದು.

ಆಕಸ್ಮಿಕವಾಗಿ ಹೊರಗಡೆ ಗಾಳಿಯ ಆರ್ಭಟಿ ಹೆಚ್ಚಿತು. ಮಕ್ಕಳು ಬೆಚ್ಚಿ ಬಿದ್ದು ಗಾಬರಿಯಾಗಿ ಎದ್ದು ಕುಳಿತವು. ಮುದುಕಿ ಗುಹೆಯ ಬಾಗಿಲಿನಿಂದ ಕಾಡಿನೆಡೆಗೆ ದೃಷ್ಟಿ ಹರಿಸಿದಳು. ಮಂಜು ಸುರಿದು ಭೂಮ್ಯಾಕಾಶವೆಲ್ಲವೂ ಒಂದೇಯಾಗಿತ್ತು. ಮೊದಲಿನ ಕಾಡು ಎಲ್ಲಿತ್ತೆಂಬುದನ್ನು ಹೇಳುವದೂ ಸಾಧ್ಯವಿರಲಿಲ್ಲ. ಚಳಿಗಾಲ ಅನಿರೀಕ್ಷಿತವಾಗಿ ಕೆಲ ದಿನ ಮುಂಚಿತವಾಗಿಯೇ ಪ್ರಾರಂಭವಾಗಿಬಿಟ್ಟಿತ್ತು.

ದಿನ ಹೋಗಿ ರಾತ್ರಿ ಬರುತ್ತಿದ್ದಿತು. ಒಂದು ದಿನ ಹೋಗಿ ಇನ್ನೊಂದು ದಿನ ಬರುತ್ತಿದ್ದಿತು. ಆದರೆ ಎಲ್ಲವೂ ಒಂದೇ ತರಹ. ಹೊರಗಡೆ ಚಳಿಗಾಳಿಯ ಆರ್ಭಟಿ ದಿನದಿನವೂ ಹೆಚ್ಚಾಗುತ್ತಿತ್ತು. ಚಳಿಯೂ ವರ್ಧಿಸುತ್ತಿತ್ತು. ಮುದುಕಿಯ ಕೈಗಳು ಯಾಂತ್ರಿಕವಾಗಿ ಕಾರ್ಯ ಮಾಡುತ್ತಿದ್ದವು. ಮಕ್ಕಳಿಗೆ ಹಾಗೂ ತನಗೆ ಆಹಾರ ಮತ್ತು ಬೆಂಕಿಯ ರಕ್ಷಣೆ. . . .

ಮುದುಕಿಗೆ ಹೋದ ಸಲದ ಚಳಿಗಾಲದ ನೆನಪಾಯಿತು. ಆಗ್ಗೆ ಆಹಾರ ಸಮೃದ್ಧಿಯಾಗಿದ್ದಿತು.

ಅದೇ ಕಾಲಕ್ಕೆ ತನ್ನೆದುರಿಗೆ ಕುಳಿತ ಎರಡೂ ಮಕ್ಕಳು ಜನ್ಮಕ್ಕೆ ಬಂದಿದ್ದವು. ಹೊಸ ಮಕ್ಕಳು ಹುಟ್ಟಿದ್ದು ಇಡಿಯ ಗುಂಪಿಗೇ ಒಂದು ಸಂತೋಷದ ಪ್ರಸಂಗ. ದೊಡ್ಡ ಹಬ್ಬ, ಆ ಪ್ರಸಂಗದ ಉತ್ಸಾಹ-ವಿನೋದಗಳನ್ನು ಅವಳು ನೆನೆಸಿಕೊಂಡಳು. ಹೋದಸಲದ ಚಳಿಗಾಲ ಎಂತಹ ಆನಂದದಿಂದ ಕಳೆದುಹೋಯಿತು. ಈ ಸಲ [illegible] . . . ?

ಮುದುಕಿ ಪುನಃ ಬೆಂಕಿಗೆ ಉರುವಲು ಹಾಕಿದಳು. ದಿನಗಳೆದಂತೆ ಆಹಾರ ಹಾಗೂ ಉರುವಲುಗಳ ಸಂಗ್ರಹ ಕರಗುತ್ತ ನಡೆದಿದ್ದಿತು. ಈಗಾಗಲೇ ಅವಳು ಒಳ್ಳೆಯ ಜಾಗರೂಕತೆಯಿಂದ ಸಂಗ್ರಹವನ್ನು ಖರ್ಚುಮಾಡುತ್ತಿದ್ದಳು. ಈ ಸಲದ ಚಳಿಗಾಲವೇ ಹೆಚ್ಚು ದೀರ್ಘವಾಗಿದ್ದಂತೆ ಅವಳಿಗೆ ಅನಿಸತೊಡಗಿತ್ತು. ಮುದುಕಿಗೆ ಈಗೀಗ ಗುಂಪಿನ ಇತರ ಜನರ ಕಾಳಜಿ ಬಲವತ್ತರವಾಗಿ ಅಂಟಿಕೊಂಡಿತು. ಅವರೆಲ್ಲಿ ಆಶ್ರಯ ಪಡೆದಿದ್ದಾರು? ಹೇಗೆ ಜೀವನ ಮಾಡುತ್ತಿರಬಹುದು? ಅಥವಾ [illegible]......ಛೇ!

ಬೆಂಕಿಯ ಬೆಳಕಿನಲ್ಲಿ ಮಲಗಿದಾಗ್ಗೆ ಅವಳಿಗೆ ಕೆಟ್ಟಕೆಟ್ಟ ಕನಸು ಬೀಳತೊಡಗಿತು. ಎಲ್ಲ ಕನಸುಗಳಲ್ಲಿಯ ಪ್ರಾಮುಖ್ಯ ಸಂಗತಿ ಒಂದೇ. ತಾನು ಉರುವಲ ಹಾಕಲು ಮರೆತದ್ದು, ಬೆಂಕಿ ನಂದಿಹೋಗಿದ್ದು, ಗುಂಪಿನ ಜನವೆಲ್ಲ ಆಹಾರ ಕಟ್ಟಿಕೊಂಡು ಧಾವಿಸಿ ಬೆಂಕಿಯ ಆಶ್ರಯಕ್ಕಾಗಿ ಬಂದದ್ದು...ಅವಳಿಗೆ ಉರುವಲನ್ನು ಎಷ್ಟ ಹಾಕಿದರೂ ಭರವಸೆ ಎನ್ನಿಸದಂತಾಯಿತು. ಮಲಗಿ ನಿದ್ರೆಹೋಗಲಿಕ್ಕೂ ಅವಳಿಗೆ ಭಯವೆನಿಸತೊಡಗಿತು. ಉರುವಲ ಸಂಗ್ರಹದ ಮೇಲಿನ ಅವಳ ಹತೋಟಿ ತಪ್ಪತೊಡಗಿತು. ಆಹಾರ ಸಂಗ್ರಹವಂತೂ ನಿಕೃಷ್ಟಾವಸ್ಥೆಗೆ ಬಂದಿತ್ತು.

ಚಳಿಗಾಲ ಮುಗಿಯುವವರೆಗೂ ತಾನು ಬೆಂಕಿಯನ್ನು ಕಾಯ್ದುಕೊಂಡಿರುವ ಬಗ್ಗೆ ಮುದುಕಿಗೆ ಈಗ ನಿರಾಸೆಯಾಗತೊಡಗಿತು. ಆದಷ್ಟು ಹೆಚ್ಚು ಕಾಲ ಬೆಂಕಿಯುಳಿಯಲಿ ಎಂಬುದರ ಕಡೆಗೆ ಅವಳೀಗ ಲಕ್ಷ್ಯ ಹಾಕಿದಳು. ಉರುವಲಕ್ಕಿಂತ ಆಹಾರ ಪರಿಸ್ಥಿತಿ ಅವಳನ್ನು ತೀರ ಕಂಗೆಡಿಸಿತು. ಮೂವರಿಗೂ ಸೇರಿ ಆಹಾರ ಸಂಗ್ರಹ ಬಲು ದಿನ ಸಾಲುವಹಾಗಿಲ್ಲವೆಂಬುದನ್ನು ಅವಳು ಮನವರಿಕೆ ಮಾಡಿಕೊಂಡಿದ್ದಳು. ತಾನು ಒಂದು ಹೇಳೆ ಅರೆಹೊಟ್ಟೆ ಉಂಡು ದಿನ ದೂಡಬಹುದು. ಆದರೆ ಮಕ್ಕಳು...... ತೀರ ಚಿಕ್ಕ ಮಕ್ಕಳು. ಏನೂ ಅರಿಯದ ಹಸುಳೆಗಳು! ಆಹಾರವಿಲ್ಲದೆ ಉಪವಾಸ ಎಷ್ಟು ದಿನ ಇರಬಹುದು?

ಆಗ ಅವಳಿಗೆ ಇನ್ನೊಂದು ವಿಚಾರ ಬಂತು. ತಾನು ಉಪವಾಸ ಸತ್ತರೆ ಮಕ್ಕಳು ಬೆಂಕಿಯನ್ನು ಕಾಯಬಲ್ಲವೇ? ಆದರೆ...... ಮುದುಕಿ ತನ್ನ ವಿಚಾರಕ್ಕೆ ಹೆದರಿ ಗಡಗಡ ನಡುಗಿಬಿಟ್ಟಳು.

ಆದರೆ...... ಆದರೆ....... ಬೆಂಕಿ ಆರಿದ ಬಳಿಕ ಗುಂಪಿನ ಜನ ಧಾವಿಸಿ ಬಂದರೆ? ನಾನು ಜೀವಂತವಿದ್ದಾದರೂ ಏನು ಪ್ರಯೋಜನ ? ಯಾರಿದ್ದೇನು ಫಲ ? ಅವಳು ಹತಾಶಳಾದಳು. 'ಮಕ್ಕಳು ಅಥವಾ ಗುಂಪು' 'ಬೆಂಕಿ ಅಥವಾ ವ್ಯಕ್ತಿಗಳ ಜೀವ' ಯಾವದನ್ನು ಆರಿಸಬೇಕು ?......... ಮಕ್ಕಳು ಆಹಾರಕ್ಕಾಗಿ ಹಟಮಾಡುತ್ತಿದ್ದವು. ಆಹಾರ ಸಂಗ್ರಹದ ಕಡೆಗೆ ಅವಳು ದೃಷ್ಟಿ ಹೊರಳಿಸಿದಾಗ ಅವಳ ಜಂಘಾಬಲವೇ ಉಡುಗಿ ಹೋಯಿತು. ಬೆಂಕಿಗೆ ಇನ್ನಿಷ್ಟು ಉರುವಲು ಹಾಕಿದಳು. ಮುದುಕಿಯ ಮುಖಭಾವ ಗಂಭೀರವಾಯಿತು. ಗತ್ಯಂತರವಿಲ್ಲ; ಎರಡೂ ಮಕ್ಕ-ಳನ್ನು ಮುದುಕಿ ಗುಹೆಯ ಒಳಗಡೆ ಕರೆದುಕೊಂಡು ಹೋದಳು. ತಿರುಗಿ ಹೊರಗೆ ಬರುವಾಗ ಮಾತ್ರ ತಾನೊಬ್ಬಳೇ ಬಂದು ಬೆಂಕಿಯ ಮುಂದೆ ಕುಳಿತಳು.

ಅಂದಿನಿಂದ ಗುಹೆಯಲ್ಲಿ ಮಕ್ಕಳ ಸಪ್ಪಡಗಿತು. ಅಳಿದುಳಿದ ಆಹಾರ ಸಂಗ್ರಹವನ್ನೆಲ್ಲ ಹತ್ತಿರ ತಂದಿಟ್ಟುಕೊಂಡು ಮುದುಕಿಯೊಬ್ಬಳೇ ಕಾಲ ನೂಕಹತ್ತಿದಳು. ಮಕ್ಕಳ ಆಹಾರ ಪ್ರಶ್ನೆ ಈಗ ಉಳಿದಿರಲಿಲ್ಲ. ತಾನು ಜೀವಿಸಿರಲು ಬೇಕಾಗುವಷ್ಟನ್ನು ಮಾತ್ರ ತಿನ್ನತೊಡಗಿದ್ದಳು.

ಮುದುಕಿಗೆ ದಿನಗಳ ಎಣಿಕೆ ತಪ್ಪಿ ಹೋಗಿ ಅದೆಷ್ಟೋ ಕಾಲವಾಗಿತ್ತು. ಅವಳು ಈಗ ತೀರ ಕೃಶಳಾಗುತ್ತ ಸಾಗಿದ್ದಳು. ಉರುವಲ ಸಂಗ್ರಹದ ಮೇಲಿನ ಅವಳ ಹತೋಟಿ ಒಮ್ಮೆ ತಪ್ಪಿದ್ದು ತಪ್ಪಿಯೇ ಹೋಗಿತ್ತು. ಆಹಾರಸಂಗ್ರಹ ತೀರಿ ಪೂರ್ಣ ಉಪವಾಸದ ದಿನಗಳು ಪ್ರಾರಂಭವಾಗಿದ್ದವು. ಉರುವಲ ಸಂಗ್ರಹವೂ ಒಂದು ಚಿಕ್ಕ ಗುಡ್ಡೆಯಷ್ಟು ಮಾತ್ರ ಉಳಿದಿತ್ತು. ಆ ಗುಡ್ಡೆಯನ್ನು ಬೆಂಕಿಯ ಹತ್ತಿರವೇ ಇಟ್ಟು ತಾನೂ ಅಲ್ಲಿಯೇ ನೆಲ ಹಿಡಿದು ಮಲಗಿಬಿಟ್ಟಿದ್ದಳು. ಅವಳಲ್ಲೀಗ ಎದ್ದು ಕುಳಿತುಕೊಳ್ಳುವ ತ್ರಾಣವೂ ಉಳಿದಿರಲಿಲ್ಲ. ಅವಳ ಕೈಗಳು ಮಾತ್ರ ಉ... ವಲನ್ನು ಸಾವಕಾಶವಾಗಿ ಬೆಂಕಿಯಲ್ಲಿ ಹಾಕ... ತ್ತಲೇ ಇದ್ದವು. ತನ್ನ ಜೀವಜ್ಯೋತಿ ಆರು... ವರೆಗೂ ಈ ಹೊರಗಿನ ಜ್ಯೋತಿಯನ್ನು ಆ... ಗೊಡಲಾರೆ ಎನ್ನುವ ದೃಢನಿರ್ಧಾರವನ್ನು ಅವ... ತೀಕ್ಷ್ಣ ಕಣ್ಣುಗಳು ತೋರ್ಪಡಿಸುತ್ತಿದ್ದವು.

ಹೊರಗಡೆ ಚಳಿಗಾಳಿಯು ಆರ್ಭಟಿ ಕಡಿ... ಯಾದದ್ದನ್ನು ಅವಳ ಕಿವಿಗಳು ಗುರುತಿಸಿದ್ದವು... ಒಮ್ಮೊಮ್ಮೆ ದೂರ ಪಕ್ಷಿಗಳ ಕೂಗನ್ನು ಕೇಳಿದ... ತೆಯೂ ಅವಳಿಗೆ ಭಾಸವಾಗುತ್ತಿತ್ತು. ಇಡಿಯ... ಗುಂಪೆಲ್ಲ ನಿವಾಸಸ್ಥಾನದೆಡೆಗೆ ಧಾವಿಸಿ ಬರ... ತ್ತಿದ್ದ ದೃಶ್ಯವು ಈಗವಳ ಕಣ್ಣಮುಂದೆ ಯಾವಾ... ಗಲೂ ಕಟ್ಟಿಬಿಟ್ಟಿದ್ದಿತು. ಗುಂಪು ಧಾವಿ... ಬಂದಾಗ ಗುಂಪಿನ ಪ್ರಾಣದಂತಿದ್ದ 'ಬೆಂಕಿ... ನಂದಿ ಹೋಗಿದ್ದರೆ? ಅವಳೀಗ ಈ ವಿಚಾ... ದಿಂದ ಅಸ್ಥಿರಳಾಗುತ್ತಿದ್ದಿಲ್ಲ. ಅವಳ ಕಣ... ತೀಕ್ಷ್ಣವಾಗಿದ್ದಷ್ಟೇ ನಿಶ್ಚಲವೂ ಆಗಿದ್ದವು.




ಕೊನೆಯ ಉರುವಲದ ಕಟ್ಟಿಗೆಯನ್ನು ಬೆಂಕಿ... ಯಲ್ಲಿ ಹಾಕಿ ಅದರೆಡೆಗೆ ಕಣ್ಣು ಹೊರಳಿಸಿದಳು... ಬೆಂಕಿ ಪ್ರಕಾಶಮಾನವಾಗಿ ಉರಿಯಿತು. ಇನ್ನು... ಬೆಂಕಿ ಆರಿಹೋಗುವದು ಕೆಲವು ನಿಮಿಷಗಳ... ಮಾತಾಗಿತ್ತು. ಮುದುಕಿ ಒಂದು ಕ್ಷಣ ತನ... ಕಣ್ಣು ಮುಚ್ಚಿದಳು. ಅವಳಿಗೆ ತನ್ನ ಗುಂಪಿನ...

ಜನರ ಕೋಲಾಹಲ ತೀರ ಹತ್ತಿರ ಕೇಳಿಸಿದಂತೆ ಆಯಿತು. ಅವಳು ಪುನಃ ಬೆಂಕಿಯ ಕಡೆಗೆ ನೋಡಿದಳು. ಜ್ವಾಲೆ ಕಡಿಮೆಯಾಗುತ್ತಿತ್ತು. ತನ್ನ ಕೃಶವಾದ ದೇಹವೂ ಅವಳಿಗೆ ಒಂದು ಕಟ್ಟಿಗೆಯಂತೆಯೇ ಕಂಡಿತು. ಹೊರಗಡೆ ಪಕ್ಷಿಗಳ ಕೂಗು ಸುಸ್ಪಷ್ಟವಾಗಿ ಕೇಳಿಬರುತ್ತಿತ್ತು. ಜನರ ಕೋಲಾಹಲವೂ ಕೇಳಿದಂತೆ ಎನಿಸಿತು. ಒಳ್ಳೆಯ ಪ್ರಯಾಸದಿಂದ ತನ್ನ ದೇಹವನ್ನು ಹೊರಳಿಸಿದಳು. ಮುದುಕಿಯ ಕಾಲಿಗೆ ಒಂದು ಕ್ಷಣ ಅಗ್ನಿಸ್ಪರ್ಶದ ಅನುಭವವಾಯಿತು. ಅವಳ ತೀಕ್ಷ್ಣವಾದ ಕಣ್ಣು ತೃಪ್ತಿಸೂಚಕವಾಗಿ ಮುಚ್ಚಿದವು. ಬೆಂಕಿ ಮತ್ತೊಮ್ಮೆ ಪ್ರಕಾಶಮಾನವಾಗಿ ಉರಿದು ಗುಹೆಯನ್ನು ಬೆಳಗಿತು.

* * * *

ಸಾಹಸಕಾರ್ಯಕ್ಕಾಗಿ ಜೀವದ ಹಂಗು ತೊರೆದು ಹೊರಬಿದ್ದ ಆ ಗುಂಪು ಕಾಡಿನಲ್ಲಿ ಬಹಳ ದೂರದವರೆಗೆ ಒಳಸೇರಿತು. ಆ ಗುಂಪಿನ ಎಣಿಕೆಗಿಂತ ಮೊದಲೇ ಚಳಿಗಾಲವು ಬಂದುಬಿಟ್ಟಿತ್ತು. ಆಹಾರ ಸಂಗ್ರಹಿಸಿ ವಾಸಸ್ಥಾನಕ್ಕೆ ತಿರುಗಿ ಬರುವ ಆಶೆ ಆ ಗುಂಪಿಗಿರಲಿಲ್ಲ. ಚಳಿಗಾಲದ ದವಡೆಯಿಂದ ಪ್ರಾಣರಕ್ಷಣೆ ಮಾಡಿಕೊಳ್ಳಲು ವಾಸಸ್ಥಾನದಿಂದ ಇನ್ನೂ ದೂರ ದೂರ ದಕ್ಷಿಣ ದಿಕ್ಕಿಗೆ ಗುಂಪೆಲ್ಲ ಧಾವಿಸುತ್ತಿದ್ದಿತು. ಆಶ್ರಯಕ್ಕಾಗಿ ಧಾವಿಸುತ್ತಿದ್ದ ಗುಂಪಿಗೆ ಸುದೈವದಿಂದ ಅದೇ ಕಾಡಿನಲ್ಲಿ ದೂರ ವಾಸ್ತವ್ಯ ಮಾಡಿದ ಇನ್ನೊಂದು ಗುಂಪಿನ ಆಶ್ರಯ ದೊರೆಯಿತು. ಹಳೆಯ ಗುಂಪು ಹೊಸ ಗುಂಪಿನಲ್ಲಿ ಲೀನವಾಗಿ ಅದರೊಡನೆ ದಕ್ಷಿಣ ದಿಕ್ಕಿಗೆ ಪ್ರಯಾಣ ಬೆಳೆಸಿತು. ಹೊಸಗುಂಪಿನಲ್ಲಿ 'ಅಗ್ನಿಹೊತ್ರ'ವಿಗೆ ಸ್ಥಾನವಿರಲಿಲ್ಲ. ಅವರಾಗಲೇ ಎರಡು ಒಣಕಟ್ಟಿಗೆಗಳನ್ನು ಒಂದಕ್ಕೊಂದು ತಿಕ್ಕಿ ತಮಗೆ ಬೇಕಾದಾಗ ಬೆಂಕಿಯನ್ನು ಉತ್ಪನ್ನ ಮಾಡಿಕೊಳ್ಳುವ ಕಲೆಯನ್ನು ಸಾಧಿಸಿಕೊಂಡಿದ್ದರು. ಹಳೆಯ ಗುಂಪು ಹೊಸ ಗುಂಪಿನಲ್ಲಿ ಸಮರಸವಾಗಿ ತನ್ನ ಹಳೆಯ 'ಅಗ್ನಿಹೋತ್ರ' ಜೀವನವನ್ನೇ ಮರೆತುಬಿಟ್ಟಿತು.

---

## ಅಗ್ಗದ ಕಾಲ !

ಇಂದಿನ ಧಾರಣೆ ವಾಸಿ ಏರಿರುವುದನ್ನು ನೋಡಿ ಕಣ್ಣೀರು ಮಿಡಿವ ನೀವು ಕ್ರಿ. ಪೂ. ೫೦೦ ಹಿಂದೆ ಕಾತ್ಯಾಯನನ ಕಾಲದಲ್ಲಿ ಹುಟ್ಟಿದ್ದರೆ ಚೆನ್ನಾಗಿತ್ತು. ಈಗಿನ ಹಣದ ಮಾನದಿಂದ ಆ ಕಾಲದ ಧಾರಣೆವಾಸಿಗಳು ಹೀಗಿದ್ದವು :

ಒಂದು ದನಕ್ಕೆ ೮ ಆಣೆ, ಕರುವಿಗೆ ೧ ಆಣೆ, ಎತ್ತಿಗೆ ೧॥ ಆಣೆ, ಎಮ್ಮೆಗೆ ೨ ಆಣೆ; ೧೦ ಮಾಶಿ ಬಂಗಾರಕ್ಕೆ ೨॥ ಆಣೆ; ಒಂದು ಗಜ ಬಟ್ಟೆಗೆ ೩ ಕಾಸು; ಒಬ್ಬ ದಾಸಿಗೆ ೮ ಆಣೆ; ಆನೆಗೆ ರೂ. ೭-೧೩-೦.

ಕ್ರಿ. ಪೂ. ೩೦೦ ಎಂದರೆ ಮೌರ್ಯ ಚಂದ್ರಗುಪ್ತನ ಕಾಲದಲ್ಲಿ ಒಬ್ಬನ ತಿಂಗಳ ಸಂಬಳ ಅರ್ಧಾಣೆಯಿಂದ ಒಂದೂಕಾಲಾಣೆ ವರೆಗೆ ಇತ್ತು. ಅಕ್ಕಿ, ಗೋದಿ ಮೊದಲಾದ ಆಹಾರ ಧಾನ್ಯಗಳು ೩ ಕಾಸಿಗೆ ೨೦ ರಿಂದ ೩೦ ಸೇರು ದೊರೆಯುತ್ತಿದ್ದವು. ಮೂರು ಕಾಸಿಗೆ ೭॥ ಸೇರು ಎಣ್ಣೆ ದೊರೆಯುತ್ತಿತ್ತು. ೩ ಕಾಸಿಗೆ ೨೫ ಸೇರು ಹಾಲು ಸಿಗುತ್ತಿತ್ತು.

ಕ್ರಿಸ್ತಶಕಾರಂಭದಲ್ಲಿ ತುಟ್ಟಿಕಾಲ ಬಂದುಬಿಟ್ಟಿತ್ತು. ಆಕಳಿನ ಬೆಲೆ ರೂ.೧-೫-೯ ಗೆ ಏರಿತು ! ದಾಸಿಯ ಬೆಲೆ ರೂ. ೧-೪-೦, ಎತ್ತಿನ ಬೆಲೆ ರೂ. ೧-೬-೦ ಗೆ ಮುಟ್ಟಿತು. ಈ ಕಾಲದಲ್ಲಿ ಹಿಂದಿಗಿಂತ ಹೆಚ್ಚು ಕಡಮೆ ೧೬ ಪಟ್ಟು ಬೆಲೆ ಏರಿತೆಂದು ಜನ ಗೋಳಾಡತೊಡಗಿದ್ದರು !

— ಸಂಸಾರ, ದಾವಣಗೆರೆ

# ದೇಶ-ದೇಶಗಳ ಮೃಷ್ಟಾನ್ನ ಭೋಜನ

ಉತ್ಸವಪ್ರಿಯನಾದ ಮನುಷ್ಯನು ತನ್ನ ಮನರಂಜನೆಗಾಗಿ ಅನೇಕಾನೇಕ ಹಬ್ಬಗಳನ್ನು ನಿರ್ಮಿಸಿಕೊಂಡಿರುವಂತೆ ನಾಲಿಗೆಯ ತೃಪ್ತಿಗಾಗಿ ಬಗೆಬಗೆಯ ಪಕ್ವಾನ್ನಗಳನ್ನೂ ಸೃಷ್ಟಿಸಿಕೊಂಡಿದ್ದಾನೆ.

ಆದರೆ ಈ ಮಾತು ಸರ್ವಸಾಮಾನ್ಯವಾದರೂ ಒಂದೊಂದು ದೇಶದವರ ರುಚಿ ಒಂದೊಂದು ಬಗೆಯದಾಗಿರುವದರಿಂದ ಆ ಆ ದೇಶ, ಕಾಲ, ಪದ್ಧತಿಗಳ ಮೂಲಕ ಒಂದೊಂದು ಕಡೆ ಒಂದೊಂದು ಬಗೆಯ ಪಕ್ವಾನ್ನ ಪ್ರಿಯವಾಗಿದೆ. ನಮಗೆ ತೀರ ವಿಚಿತ್ರವೆನಿಸಬಹುದಾದ, ಅಸಹ್ಯವೆನಿಸಬಹುದಾದ ವಸ್ತುಗಳು ಅವುಗಳ ರೂಢಿಯಿರುವ ದೇಶಗಳಲ್ಲಿ ಅತ್ಯಂತ ರುಚಿಕಟ್ಟಾದ ತಿನಿಸುಗಳು ಎಂದು ಮನ್ನಿಸಲ್ಪಡುವವು.

ಕ್ರಿಶ್ಚನ್ನರಿಗೆ ಕ್ರಿಸ್‌ಮಸ್ ಹಬ್ಬ ಬಲು ದೊಡ್ಡ ಹಬ್ಬ. ಪಾಶ್ಚಾತ್ಯ ದೇಶಗಳಲ್ಲಿ ಈ ಹಬ್ಬದ ದಿನಗಳಲ್ಲಿ ತಯಾರಿಸುವ ಮುಖ್ಯ ಪಕ್ವಾನ್ನವೆಂದರೆ "ಟರ್ಕಿ". ಟರ್ಕಿ ಬಾತುಕೋಳಿಯಂಥದೇ ಒಂದು ಪಕ್ಷಿಯಾಗಿದೆ. ಇದರ ಮಾಂಸ ಬಲು ರುಚಿಯಾಗಿರುವದರಿಂದ ಇದರ ಬೆಲೆಯೂ ಬಹಳವಾಗಿರುತ್ತದೆ. ಒಂದು ಸೇರಿಗೆ ಸುಮಾರು ೧೨ ರೂಪಾಯಿಗಳು ಬೀಳುವದರಿಂದ ಕೇವಲ ಕ್ರಿಸ್‌ಮಸ್ ಹಬ್ಬದ ಕಾಲದಲ್ಲಿ ಮಾತ್ರ ಜನರು ಇದನ್ನು ತಿನ್ನುವರು. ಈ ಟರ್ಕಿ ಹಕ್ಕಿಯ ಮಾಂಸವನ್ನು ತಿನ್ನುವ ರೂಢಿ ಇಂಗ್ಲಂಡದ ಎಂಟನೆಯ ಹೆನ್ರಿ ಅರಸನ ಕಾಲದಲ್ಲಿ ಬಂತು, ಎಂದು ಇತಿಹಾಸದಲ್ಲಿ ಉಲ್ಲೇಖವಿದೆ. ಈ ಹಕ್ಕಿಯ ಮಾಂಸವನ್ನು ತಿನ್ನುವಾಗ ಅದರ ಎದೆಯ ಎಲುವು ಸಿಕ್ಕವನಿಗೆ ಮುಂದಿನ ವರ್ಷವೆಲ್ಲ ಸುಖಪ್ರದವಾಗುವದು ಎಂದು ಇಂಗ್ಲೀಷರು ತಿಳಿಯುತ್ತಾರೆ. ಕ್ರಿಸ್‌ಮಸ್ ಕಾಲದಲ್ಲಿ ದ್ರಾಕ್ಷೆ ಹಾಕಿದ ಒಂದು ಬಗೆಯ ಕಡುಬನ್ನೂ ಮಾಡುತ್ತಾರೆ. ಈ ಕಡುಬಿಗೆ "ಆಕ್ಟ ಆಫ್ ಸೆಟಲಮೆಂಟ ಫುಡಿಂಗ" ಎಂಬ ಭೋಜನ ಹೆಸರಿದ್ದು ಮೊದಲನೆಯ ಜಾರ್ಜ ಅರಸನ ಕಾಲದಿಂದ ಈ ಕಡುಬನ್ನು ಕ್ರಿಸ್‌ಮಸ್ ಹಬ್ಬದ ದಿನಗಳಲ್ಲಿ ತಿನ್ನುವ ರೂಢಿ ಪ್ರಾರಂಭವಾಯಿತು ಎನ್ನುತ್ತಾರೆ.

ಇರಾಣಿ ಜನರು ಜಗತ್ತಿನ ಯಾವ ಭಾಗದಲ್ಲೆ ಇದ್ದರೂ ಅವರು ೧೩ ದಿನಗಳ ವರೆಗೆ "ಜಮಶೇದಜಿ ನೌರೋಜ" ಎಂಬ ಹಬ್ಬವನ್ನಾಚರಿಸುಸುತ್ತಾರೆ. ಈ ಹಬ್ಬದಲ್ಲಿ ಇರಾಣಿಗಳು ಊಟದ ಸಮಯದಲ್ಲಿ ಶುಭಶಕುನವೆಂದು ಕಾಯಿಪಲ್ಲೆ, ಹಣ್ಣುಹಂಪಲಗಳನ್ನು ಸ್ವಚ್ಛವಾದ ಸ್ಥಳದಲ್ಲಿ ಇಡುತ್ತಾರೆ. ಈ ಪದಾರ್ಥಗಳಲ್ಲಿ "ಸ" ಅಕ್ಷರದಿಂದ ಪ್ರಾರಂಭವಾಗುವ ಹೆಸರಿನ ಏಳು ಪದಾರ್ಥಗಳು ( ಸೇಬು ಮುಂತಾದವು) ಇರಬೇಕು ಎಂಬುದರ ಕಡೆಗೆ ವಿಶೇಷ ಲಕ್ಷ್ಯ ಪೂರೈ



ಸುತ್ತಾರೆ. ಇದೊಂದು ನೇಮವೆನ್ನಲೂ ಬಹುದು. ಇವರು ಈ ಸಮಯದಲ್ಲಿ ತಯಾರಿಸುವ ವಿಶೇಷ ಪಕ್ವಾನ್ನಕ್ಕೆ "ಸಬ್ಜಿ ಪಿಲೋಮಾಹಿ'' ಎನ್ನುತ್ತಾರೆ. ಈ ಪಕ್ವಾನ್ನವನ್ನು ಹಸುರು ಸೊಪ್ಪು ಮತ್ತು ಮೀನಗಳಿಂದ ತಯಾರಿಸುತ್ತಾರೆ. ಮೀನವು ಸುಖ-ಶಾಂತಿಗಳ ದ್ಯೋತಕವೆಂದೂ ಹಸುರು ಸೊಪ್ಪು ಉನ್ನತಿ, ಸೌಭಾಗ್ಯ ಮತ್ತು ಕಲ್ಯಾಣಗಳ ಪ್ರತೀಕವೆಂದೂ ತಿಳಿದು ಈ ಪಕ್ವಾನ್ನ ತಯಾರಿಸುತ್ತಾರೆ. ಹಬ್ಬದ ದಿನ ಮನೆಗೆ ಬರುವ ಅತಿಥಿಗಳಿಗ ಚಹವನ್ನೂ "ಶಿರೀನ" ಮಿಠಾಯಿಯನ್ನೂ ಕೊಡುತ್ತಾರೆ.

ಮಲಾಯಾ ನಿವಾಸಿಗಳಿಗೆ ಹೆಬ್ಬಾವಿನ ಮಾಂಸದ ಭಕ್ಷ್ಯವು ಅತಿ ಪ್ರಿಯವಾದ ಪಕ್ವಾನ್ನವಾಗಿದೆ. ಹೆಬ್ಬಾವಿನ ಮಾಂಸ ದೊರೆತ ದಿನ ಇವರು ಬಹು ಸಂಭ್ರಮದಲ್ಲಿರುತ್ತಾರೆ. ಹಬ್ಬದ ದಿನ ಹೆಬ್ಬಾವಿನ ಮಾಂಸದ ಭಕ್ಷ್ಯ ಇವರಿಗೆ ಇರಲೇಬೇಕು.

ಚೀನೀ ಜನರು ಹಬ್ಬದ ದಿನಗಳಲ್ಲಿ ಮಾಡುವ ಪಕ್ವಾನ್ನಗಳ ವಿಷಯ ಕೇಳಿದರೆ ನೀವು ಆಶ್ಚರ್ಯಚಕಿತರಾಗುವಿರಿ. ಚೀನದಲ್ಲಿ ವಸಂತ ಋತುವಿನಲ್ಲಿ ಆಚರಿಸುವ "ಚಿಂಗ ಮಿಂಗ." ಹಬ್ಬವು ಅತಿದೊಡ್ಡ ಹಬ್ಬವಾಗಿದೆ. ಆ ದಿನ ಅಲ್ಲಿ ಹಂದಿಯ ಮಾಂಸದ ಭಕ್ಷ್ಯವಿದ್ದೇ ತೀರಬೇಕು. ಈ ಹಂದಿಗಳನ್ನು ಒಂದು ವಿಶಿಷ್ಟ ತಿನಿಸಿನ ಮೇಲೆ ಬೆಳೆಸುತ್ತಾರೆ. ಈ ಹಂದಿಗಳ ಮಾಂಸ ಬಲು ರುಚಿಯಾಗಿರುತ್ತದೆ.

ಅದರಂತೆ ಚೀನೀ ವರ್ಷಾರಂಭದ ಮೊದಲನೆಯ ತಿಂಗಳ ''ಯುಯಾನಸಿ ಆಓ"ದ ಹದಿನೈದನೆಯ ದಿನ ಆಚರಿಸುವ ಮತ್ತು ವರ್ಷ ಋತುವಿನ ಆಗಮನದ ತಿಂಗಳನ ಪ್ರಾರಂಭದಲ್ಲಿ ಆಚರಿಸುವ '' ಲುಂಗ ತಾ ಇತೊಡ್" ಹಬ್ಬದಲ್ಲಿ ''ಹೊಪ ಹಪಿಂಗ"ಎಂಬ ಪಕ್ವಾನ್ನ ತಯಾರಿಸುತ್ತಾರೆ. ಚೀನೀ ಖಾನಾವಳಿಗಳಲ್ಲಿ ಹಬ್ಬದ ದಿನಗಳಲ್ಲಿ ಕರಿನಾಯಿಯ ಮಾಂಸದ ಪಕ್ವಾನ್ನ ತಯಾರಿಸುತ್ತಾರೆ. ಇದನ್ನು ತಿನ್ನಲು ಗಿರಾಕಿಗಳು ಮುಕುರುತ್ತಾರೆ. ಗಿರಾಕಿಗಳಿಗೆ ಖಾತ್ರಿಯಾಗಲೆಂದು ನಾಯಿಯ ಮಾಂಸದ ಅಡಿಗೆ ತಯಾರಿಸುವಾಗ ಅದರ ಚರ್ಮದ ತುಂಡೊಂದನ್ನು ಅದರ ಜೊತೆಗೆ ಇಟ್ಟಿರುತ್ತಾರೆ. ಮಂಗಲ ಪ್ರಸಂಗಗಳಲ್ಲಿ ಹಳೆಯ ಕೊಳೆತ ತತ್ತಿಗಳನ್ನು ತಿನ್ನುವದಕ್ಕೆ ಚೀನದಲ್ಲಿ ಬಹು ಮಹತ್ವವಿದೆ. ಇಂಥ ತತ್ತಿಗಳನ್ನು ಇವರು ಬಹು ಪ್ರೀತಿಯಿಂದ ತಿನ್ನುತ್ತಾರೆ. ತತ್ತಿ ಎಷ್ಟು ಹಳೆಯದೋ, ಎಷ್ಟು ದುರ್ಗಂಧಯುಕ್ತವಾದುದೋ ಅಷ್ಟು ಅದು ರುಚಿಕರವೆಂದು ತಿಳಿಯುತ್ತಾರೆ. ಬಹಳ ಬೆಲೆಕೊಟ್ಟು ಇಂಥ ತತ್ತಿಗಳನ್ನು ಕೊಳ್ಳುತ್ತಾರೆ. ನೆಲದಲ್ಲಿ ತತ್ತಿಗಳನ್ನು ಹೂಳಿಟ್ಟು ಬಹುಕಾಲದ ನಂತರ ಅದನ್ನು ಹೊರತೆಗೆದು ಮಾರುತ್ತಾರೆ. ಹಳೆಯ ಸರಾಯಿಗೆ ಹೇಗೆ ಬೆಲೆ ಹೆಚ್ಚೊ ಹಾಗೆ ಈ ಹಳೆಯ ತತ್ತಿಗಳಿಗೂ ಬೆಲೆ ಹೆಚ್ಚು. ಇಲಿ ಮತ್ತು ಬೆಕ್ಕುಗಳ ಮಾಂಸದ ಭಕ್ಷ್ಯಗಳನ್ನೂ ಚೀನೀ ಜನರು ಪಕ್ವಾನ್ನವೆಂದು ತಿಳಿಯುತ್ತಾರೆ. ಚೀನದ ಕೆಲ ಪಟ್ಟಣಗಳಲ್ಲಿ ಸತ್ತ ಇಲಿ ಮತ್ತು ಬೆಕ್ಕುಗಳನ್ನು ತೂಗಹಾಕಿರುವ ಅಂಗಡಿಗಳು ಕಾಣಸಿಗುತ್ತವೆ.

ಆಸ್ಟ್ರೇಲಿಯದ ಆದಿವಾಸಿಗಳ ಪಕ್ವಾನ್ನ ಪೊಂದಿದೆ. ಇವರು ಅಡವಿಗಳಿಗೆ ಹೋಗಿ ಒಂದು ಜಾತಿಯ ಗಿಡದ ತೊಗಟೆಗಳನ್ನು ಸುಲಿಯುತ್ತಾರೆ. ಈ ತೊಗಟೆಗಳಲ್ಲಿ ಒಂದು ಉದ್ದನ್ನ ಹುಳವಿರುತ್ತದೆ. ಈ ಜನ ಬಾಯಿ ಚಪ್ಪರಿಸುತ್ತ ಈ ಹುಳಗಳನ್ನು ತಿನ್ನುತ್ತಾರೆ. ಆಮೆಯ [illegible] ಈ ಜನ ತಿನ್ನುತ್ತಾರೆ.

[illegible] ಜನರಿಗೆ ಹೆಬ್ಬಾವಿನ ಮಾಂಸ [illegible] ಸರ್ಪದ ಮಾಂಸದ [illegible] ಕಾಲ [illegible] ತಂದು ಜನ [illegible] ತಯಾರಿ [illegible], ಕಳ್ಳತನದಿಂದ ಸರ್ಪಗಳನ್ನು [illegible] ಅಂಗಡಿಗಳು ಜಪಾನದಲ್ಲಿವೆ.

ಫ್ರಾನ್ಸದಲ್ಲಿ ಕುದುರೆಯ ಮಾಂಸ ಬಲು ರುಚಿ ಎಂದು ತಿಳಿಯುತ್ತಾರೆ. ಫಿಲಿಪ್ಪಾಯಿನ್ಸದ ಜನರು ನಾಯಿಯ ಮಾಂಸವನ್ನು ಪ್ರೀತಿಯಿಂದ ತಿನ್ನುತ್ತಾರೆ.

ಮನುಷ್ಯರ ಮಾಂಸವನ್ನು ತಿನ್ನುವ ಜನರೂ ಇದ್ದಾರೆ. ಸಿಂಹಳದ ಆದಿವಾಸಿಗಳು ಸ್ವಜನ ಮಾಂಸವನ್ನು ಪಕ್ವಾನ್ನವೆಂದು ತಿನ್ನುತ್ತಾರೆ. ಆಪ್ತೇಷ್ಟರಲ್ಲಿ ಯಾರಾದರೂ ಸತ್ತರೆ ಅವರ ಮಾಂಸವನ್ನು ಬೇಯಿಸಿ ಎಲ್ಲರಿಗೂ ಹಂಚುತ್ತಿದ್ದರು. ಆದರೆ ಈಗ ನರಮಾಂಸ ಭಕ್ಷಣವು ಕದ್ದು ಮುಚ್ಚಿ ನಡೆಯುತ್ತದೆ. ರೂಢಿಗಳು ಬೇಗನೆ ಬದಲಾಗುವದಿಲ್ಲ.

ಭಾರತದಲ್ಲಿ ಇಂಥ ಪಕ್ವಾನ್ನಗಳ ರೂಢಿ ಆದಿವಾಸಿಗಳಲ್ಲೂ ಇಲ್ಲವೆನ್ನಬಹುದು ಆದುದರಿಂದ ನಮಗೆ ವಿವಿಧ ದೇಶಗಳ ಜನರ ರುಚಿಯ ವಿಚಾರವನ್ನು ಕೇಳಿದಾಗ ಆಶ್ಚರ್ಯದ ಜೊತೆಗೆ ಅಸಹ್ಯವೂ ಉಂಟಾಗುವಂತಿದೆ. ಆದರೆ ಅವರದವರದು ಅವರವರಿಗೆ ಪ್ರಿಯವಾಗುವದರಿಂದ ಈ ವಿಷಯದಲ್ಲಿ ನಮ್ಮದೇ ಶ್ರೇಷ್ಠ ಎಂದು ಯಾರೂ ಅನ್ನಲಾರರು.



## ಕ್ಷೌರ ವಿಜ್ಞಾನ

ಕ್ಷೌರದಿಂದ ಕೂದಲು ಬೆಳವಣಿಗೆ ಹೆಚ್ಚಾಗುವದು ಮತ್ತು ಕೂದಲು ಒರಟಾಗುವದು ಎಂಬ ನಂಬಿಕೆ ಸುಳ್ಳು. ಕ್ಷೌರವಿರಲಿ ಬಿಡಲಿ, ವಯಸ್ಸಾದಂತೆ ಮುಖದ ಕೂದಲು ಒರಟಾಗುತ್ತ ಹೋಗುವದು.

ತಲೆಗೂದಲಿಗಿಂತ ( ಬೋಳು ತಲೆ ಹೊರತು ) ಗಡ್ಡದ ಕೂದಲು ಮೂರುಪಟ್ಟು ದಟ್ಟವಾಗಿರುತ್ತದೆ. ಗಡ್ಡ ಮೀಸೆಗಳ ಕೂದಲು ಚದರ ಇಂಚಿಗೆ ೭೦೦--೮೦೦ ರಷ್ಟು ದಟ್ಟವಾಗಿರಬಹುದು. ಜಿಲೆಟ್ ಕಂಪನಿಯವರ ಸಂಶೋಧನೆಯ ಪ್ರಕಾರ ಗಡ್ಡವು ತಿಂಗಳಿಗೆ ಸರಾಸರಿ ಅರ್ಧ ಇಂಚು ( ದಿನಕ್ಕೆ ೦. ೦೧೭ ಇಂಚು ) ಬೆಳೆಯುತ್ತದೆ.

ಕ್ಷೌರ ಮಾಡುವಾಗ ಕೂದಲು ಮೆದುಮಾಡಲು ಸಾಬೂನಿನ ನೊರೆಯು ನೆರವಾಗುತ್ತದೆಂಬುದು ಸುಳ್ಳು. ನೀರಿಗಿಂತ ಉತ್ತಮವಾದ ಮಾರ್ದವಜನಕ ಪದಾರ್ಥ ಬೇರೊಂದಿಲ್ಲವೆಂದು ಜಿಲೆಟ್ ಕಂಪನಿ ಒಪ್ಪಿಕೊಂಡಿದೆ. ಸಾಬೂನಿನ ನೊರೆ ನೀರು ಬೇಗನೆ ಒಣಗಿಹೋಗದಂತೆ ಮಾಡುವದೆಂಬುದಷ್ಟೇ ಅದರ ಉಪಯೋಗ.

ನೀರು ಹಚ್ಚದಿದ್ದರೆ ಮೀಸೆಯ ಕೂದಲು ಅಷ್ಟೇ ಗಾತ್ರದ ತಾಮ್ರದ ತಂತಿಯಷ್ಟೇ ಗಟ್ಟಿಯಾಗಿರುತ್ತದೆ. ನೀರು ಹಚ್ಚಿದಾಗ ಅದರ ಗಾತ್ರ ನೂರಕ್ಕೆ ೧೨-೧೫ ರಷ್ಟು ಹೆಚ್ಚಾಗುತ್ತದೆ ಮತ್ತು ಕಾರಣದಿಂದ ಅದು ಮೆತ್ತಗಾಗುತ್ತದೆ.

ಪ್ರತಿಯೊಂದು ಪಾದವನ್ನು ೨೬ ಎಲುಬಿನ ತುಣುಕುಗಳನ್ನು ಜೋಡಿಸಿ ಮಾಡಿದೆ (ಮೇಲೆ ಅಂಕೆಗಳು ತೋರಿಸಿದ ೧೬ ಅಲ್ಲದೆ ಬೆರಳುಗಳ ಹತ್ತು ಎಲುಬುಗಳು ಕಾಣಿಸುತ್ತವೆ.) ಡಾಕ್ಟರರ ಅಭಿಪ್ರಾಯದಲ್ಲಿ ೯ ಮತ್ತು ೧೦ನೇ ಎಲುಬುಗಳೇ 'ಕಾಲಕಷ್ಟ'ದ ಮೂಲ.

ಮನುಷ್ಯ ಪಾದಗಳು ಮಹಾ ಅನ್ಯಾಯಗಳನ್ನು ಸಹಿಸಿವೆ

# ಪಾಪ ! ನಿಮ್ಮ ಪಾದ !

ಪಾವೆಂ

ಕೈಗಳಿಂದ ಮನುಷ್ಯ ಮನುಷ್ಯನೆನಿಸಿ ಕೊಳ್ಳುತ್ತಾನೆಂದು ತಜ್ಞರೆನ್ನುತ್ತಾರೆ. ಆದರೆ ಕೈಗಳಂತೆ ಪಾದವೂ ಮನುಷ್ಯನ ವಿಶಿಷ್ಟ ಲಕ್ಷಣವೇ. ಆದರೆ ಅದಕ್ಕೆ ಯಾವಾಗಲೂ ಮಲತಾಯಿ ಮಗನ ಪ್ರೀತಿ ಮಾತ್ರ ಸಿಕ್ಕಿದೆ. ತನ್ನ ಭಾರವನ್ನೆಲ್ಲ ಹೊರುವ ಪಾದವನ್ನು ಅವನು ಅಲಕ್ಷಿಸಿದ್ದಾನೆ.

ವೈದ್ಯಕೀಯ ಪ್ರಪಂಚದಲ್ಲಿ ಮಿದುಳಿನ ತಜ್ಞರಿದ್ದಾರೆ, ಕಣ್ಣು ಮೂಗು ಕಿವಿ ತಜ್ಞರಿದ್ದಾರೆ, ಹೃದಯತಜ್ಞರಿದ್ದಾರೆ. ಪುಪ್ಪುಸ ತಜ್ಞರಿದ್ದಾರೆ, ಬೇರೆ ಅನೇಕ ಅವಯವಗಳ ಆದ್ಯಂತ ಬಲ್ಲ ತಜ್ಞರಿದ್ದಾರೆ. ಆದರೆ ಬಡಪಾಯಿ ಪಾದಗಳನ್ನು ಅಭ್ಯಸಿಸಿದವರ—ತೀರ ಈಚೆಗಿನ ವರೆಗೂ ಇರಲಿಲ್ಲ. ಈಗೇನೋ! ಅಮೇರಿಕದಲ್ಲಿ "ಪಾದಶಾಸ್ತ್ರ"ವೊಂದು ಮೆಲ್ಲಗೆ ಹೆಜ್ಜೆಯಿಕ್ಕಹತ್ತಿದೆ ಮಾತ್ರ

'ಲೈಫ್' ಪತ್ರಿಕೆಯ ಲೇಖ ಓದಿ ಬರೆದುದು

ಆದರೆ ಅದನ್ನು ಅಭ್ಯಸಿಸಿದವರಲ್ಲಿ ಒಮ್ಮತಕ್ಕಿಂತಲೂ ಮತಭೇದವೇ ಹೆಚ್ಚಾಗಿದೆ.

ಅಂದಾಕ್ಷಣ ಪಾದವು ನಿರೋಗಿಯಾಗಿದೆಯೆಂದರ್ಥವಲ್ಲ. ಪಾದದ ಬೇನೆಯಿಂದ ಸಾವು ಬರುವುದು ಅಪರೂಪವಾದ್ದರಿಂದ ಡಾಕ್ಟರರು ಅದಕ್ಕಾಗಿ ತಲೆ ಕೆಡಿಸಿಕೊಳ್ಳುವುದಿಲ್ಲ ಅಷ್ಟೇ. ಆದರೆ ಪಾದಗಳು ನಮಗೆ ಅತಿಶಯವಾದ ತೊಂದರೆ ಮತ್ತು ನೋವು ಕೊಡಬಲ್ಲವು. ಪಾದಗಳ ಒಂದಲ್ಲ ಒಂದು ತರದ ಕ್ಲೇಶವಿಲ್ಲದವರು ವಿರಳವೆಂದೇ ಹೇಳಬೇಕು.

ಪಾದಗಳ ಆಕೃತಿವಿಕಾರಗಳನ್ನೇ ತೆಗೆದುಕೊಳ್ಳಿರಿ. ಕೆಲವರಿಗೆ ತೀರ ಚಪ್ಪಟೆ ಪಾದಗಳಿರುತ್ತವೆ; ಕೆಲವರಿಗೆ ತೀರ ಉಬ್ಬಿದ ಪಾದಗಳು (ಇವರ ದೇಹದ ಭಾರವನ್ನೆಲ್ಲ ಹಿಮ್ಮಡಿಯೇ ಹೊತ್ತು ಸೋಲಬೇಕಾಗುತ್ತದೆ); ಕೆಲವರ ಮುಮ್ಮಡಿಯ (Metatarsal) ಎಲುಬುಗಳು ವಿಕೃತವಾಗಿರುತ್ತವೆ (ಇದರಿಂದ ನಡಿಗೆಯ ನಿಲುವು ವಿಕಾರವಾಗುತ್ತದೆ); ಕೆಲವರ ಹಿಮ್ಮಡಿಯ ಟಿಶ್ಯುಗಳು ಸವೆದುಹೋಗಿರುತ್ತವೆ (ಬಹಳ ಹೊತ್ತು ನಿಂತಿರುವ ಅಥವಾ ತಪ್ಪು ನಿಲುವಿನಲ್ಲಿ ನಿಂತಿರುವ ಅಭ್ಯಾಸವೇ ಇದಕ್ಕೆ ಕಾರಣ); ಕೆಲವರ ಕಾಲಿಗೆ ಆರು, ಏಳು ಬೆರಳುಗಳು, ಕೆಲವರಿಗೆ ಎರಡೇ ಬೆರಳುಗಳು; ಕೆಲವರ ಬೆರಳುಗಳು ಒಂದರಮೇಲೊಂದು ಸೇರಿರುತ್ತವೆ; ಕೆಲವರ ಹೆಬ್ಬೆರಳುಗಳು ವಕ್ರವಾಗಿರುತ್ತವೆ; ಕೆಲವರಿಗೆ ಉಗುರು ನಟ್ಟು ನೋವಾಗುತ್ತದೆ; ಕೆಲವರ ಪಾದಗಳ ಅಡಿ ಉರಿಯುತ್ತದೆ; ಕೆಲವರು ತಮ್ಮ ಪಾದ ಯಾವಾಗಲೂ ತಣ್ಣಗಿರುತ್ತದೆಂದು ದೂರುತ್ತಾರೆ; ಕೆಲವರು ತಮ್ಮ ಪಾದ ಯಾವಾಗಲೂ ಸೋತಿರುತ್ತದೆಂದು ಕರುಬುತ್ತಾರೆ; ಕೆಲವರಿಗೆ ಪಾದದಲ್ಲಿ ಬೊಕ್ಕೆಯೆದ್ದಿರುತ್ತದೆ, ಕೆಲವರಿಗೆ ಅಲ್ಲಲ್ಲಿ ಜಡ್ಡು ಗಂಟುಗಳೇಳುತ್ತವೆ, ಕೆಲವರಿಗೆ ಪಾದ ತಳದಲ್ಲಿ ಆಣಿಗಳಾಗಿರುತ್ತವೆ. ಇನ್ನೂ ಎಷ್ಟೋ ಪಾದಕ್ಲೇಶಗಳ ಲೆಕ್ಕ ಹೇಳಬಹುದಾಗಿದೆ.

ಇವುಗಳಲ್ಲಿ ಹಲ ಕೆಲವು ಕ್ಷುಲ್ಲಕ ಪೀಡೆಗಳು. ಆದರೆ ಕೆಲ ನಿಜವಾದ ಕಷ್ಟಗಳಿಗೆ ಅವು ಕಾರಣವಾಗಬಲ್ಲವು. ಒಬ್ಬನ ಪಾದಗಳಿಗೆ ನೆಮ್ಮದಿಯಿಲ್ಲದಿದ್ದರೆ ಅವನು ನೋವನ್ನು ಆದಷ್ಟು ಕಡಿಮೆಮಾಡಿಕೊಳ್ಳಬೇಕೆಂದು ಬೇರೆ ನಿಲುವಿನಲ್ಲಿ ನಿಲ್ಲುತ್ತಾನೆ, ಕೂಡ್ರುತ್ತಾನೆ. ಈ ಹೊಸ ನಿಲುವು ಚಟವಾಗಿ ಹೋದರೆ ಅದರಿಂದ ದೇಹದ ಬೇರಾವದಾದರೂ ಅವಯುವದ ಮೇಲೆ ಭಾರ ಬಿದ್ದು ಅದು ವಿಕಾರಹೊಂದಬಹುದಾಗಿದೆ.

ಪಾದದ ಕ್ಲೇಶದಿಂದ ತಲೆನೋವು, ಬೆನ್ನುನೋವು, ಸಂಧಿವಾತ, ತಲೆಮುಖಗಳ ನರಗಳ ವೇದನೆ ಮೊದಲಾದವುಂಟಾಗಬಹುದು. ಕೆಲವೇಳೆ ಪಾದದ ಅವಸ್ಥೆಯು ಹೃದಯರೋಗ, ರಕ್ತಸಂಚಾರದ ಕೊರತೆಗಳು, ಮಧುಮೇಹ, ಮೂತ್ರಪಿಂಡದ ಬೇನೆ ಇವುಗಳ ಪೂರ್ವಸೂಚನೆಯಾಗಿರುತ್ತದೆ.

ವೈದ್ಯಕೀಯ ಜನರಷ್ಟೇ ಅಲ್ಲ, ಪಾದಪೀಡೆಯುಳ್ಳವರೂ ಅದು ತೀರ ವಿಕಟವಾಗಿದ್ದ ಹೊರತು ಅದನ್ನು ಲೆಕ್ಕಿಸುವುದಿಲ್ಲ. ಒತ್ತುವುದು, ಕಾಯಿಸುವುದು, ಕಾಲನ್ನು ತಲೆಗಿಂತ ಎತ್ತರದಲ್ಲಿ ಇರಿಸಿ ಪಾದಕ್ಕೆ ವಿಶ್ರಾಂತಿ ಕೊಡುವುದು, ಉಗುರು ನಟ್ಟು ಬುದ್ಧಿಬಂದ ಮೇಲೆ ಉಗುರನ್ನು ದುಂಡಾಗಿ ಕತ್ತರಿಸುವದನ್ನು ಬಿಟ್ಟು ನೀಟಾಗಿ ಕತ್ತರಿಸುವುದು ಇತ್ಯಾದಿಮನೆವೈದ್ಯಗಿರಿಯಿಂದಲೇ ಅವರು 'ಕಾಲಕಷ್ಟ'ಕ್ಕೆ ಉತ್ತರ ಹೇಳಲು ಯತ್ನಿಸುತ್ತಾರೆ.

ಈ ತಾಂತ್ರಿಕ ಯುಗದಲ್ಲಿ 'ಕಾಲಗತಿ'ಯನ್ನು ಸುಧಾರಿಸಲು ಅಮೇರಿಕದಂಥ ದೇಶಗಳಲ್ಲಿ ಹಲವು ಸಲಕರಣೆಗಳು ತಲೆಯೆತ್ತಿವೆ. ವಿಶಿಷ್ಟ ಸಾಬೂನುಗಳು, ಪೌಡರುಗಳು, ದ್ರಾವಕಗಳು, ಪ್ಲಾಸ್ಟರುಗಳು, 'ತೆಕ್ಕೆ'ಗಳು, ಆಧಾರಗಳು ಮತ್ತು ವಿಶಿಷ್ಟ ಪಾದರಕ್ಷೆಗಳು ಕೂಡ ಹುಟ್ಟಿಕೊಂಡಿವೆ. ಅವುಗಳ ತಯಾರಕರಿಗೆ ಕೋಟ್ಯಂತರ ರೂಪಾಯಿ ವ್ಯವಹಾರ ದೊರೆಯತೊಡಗಿದೆ. ನ್ಯೂಯಾರ್ಕಿನ ಅಲನ್ ಮುರೆ ಎಂಬಾತನು ಪಾದಗಳ ಕಷ್ಟ ನಿವಾರಣೆಗೆ ಕ್ರಾಂತಿಕಾರಿ ಮಾದರಿಯ ಹೊಸ ಬೂಟುಗಳನ್ನು ತಯಾರಿಸಿ

ಜೋಡಿಗೆ ೨೫೦ ರೂಪಾಯಿಯಂತೆ ಮಾರುತ್ತಿದ್ದಾನೆ.

ಮನುಷ್ಯ ಶಾಸ್ತ್ರಜ್ಞರು ಪಾದದ ಇತಿಹಾಸವನ್ನು ಹೀಗೆ ರೇಖಿಸುತ್ತಾರೆ: ವಾನರ ಸ್ಥಿತಿಯಲ್ಲಿದ್ದ ಮಾನವನ ಪೂರ್ವಜರು ವೃಕ್ಷಗಳಿಂದ ಭೂಮಿಗಿಳಿದು ವಾಸಿಸತೊಡಗಿ ಎರಡು ಮೂರು ಕೋಟಿ ವರ್ಷಗಳು ಕಳೆದಿವೆ. ವಾನರಾವಸ್ಥೆಯಲ್ಲಿ ನಾಲ್ಕೂ ಕಾಲುಗಳು ಟೊಂಗೆಗಳನ್ನು ಹಿಡಿದು ಜೋತಾಡುವ ಸಲುವಾಗಿ ಇದ್ದವು. ಆದಿ ಮನುಷ್ಯನ ಪಿತಾಮಹನು ಹಿಂಗಾಲುಗಳಿಂದ ನೆಲದ ಮೇಲೆ ನಡೆಯಲು ತೊಡಗಿದ ನಂತರ ಅದಕ್ಕೆ ಉಪಯುಕ್ತವಾಗುವಂತೆ ಸಾವಕಾಶವಾಗಿ ಪಾದಗಳು ರೂಪಾಂತರಗೊಳ್ಳತೊಡಗಿದವು. ಇಡೀ ದೇಹದ ಭಾರವನ್ನು ಸಮತೋಲವಾಗಿ ತಾಳುವ ದಾರ್ಢ್ಯವೂ ಸಂಚಾರಕ್ಕೆ ಬೇಕಾದ ಚಪಲತನವೂ ಅವನ ಪಾದಗಳಿಗೆ ಬಂದವು.

ಮುಂಚೆ ಹೆಚ್ಚು ಕಡಿಮೆ ಕೈಯಂತೆಯೇ ಇದ್ದ ಕಾಲಿನ ಪಾದಕ್ಕೆ ಈಗ ದೊಡ್ಡ ಹಿಮ್ಮಡಿ ಉಂಟಾಯಿತು. ಭಾರ ಹೊರಲು ಅನುಕೂಲವಾಗುವಂತೆ ಅವನ ಪಾದದ ಮಧ್ಯ ಉಬ್ಬಿ ಅದಕ್ಕೆ ಕಮಾನಿನ ರೂಪು ಬಂತು (ಈ ಕಮಾನು ಸ್ಪ್ರಿಂಗಿನ ಕೆಲಸ ಮಾಡುತ್ತದೆ). ಕಾಲಿನ ಉಂಗುಟಕ್ಕೆ ಈಗ ಹಿಡಿದುಕೊಳ್ಳುವ ಕೆಲಸ ಉಳಿಯಲಿಲ್ಲ. ಆದ್ದರಿಂದ ಕೈಯ ಹೆಬ್ಬೆಟ್ಟಿನಂತಿದ್ದ ಕಾಲುಂಗುಟ ಈಗ ಸರಳ ಆಕಾರಕ್ಕೆ ಬದಲಾಗಿ ಬಲಿಷ್ಠವೂ ದಪ್ಪವೂ ಆಯಿತು ಉಳಿದ ನಾಲ್ಕು ಬೆರಳುಗಳಿಗೆ ವಿಶೇಷ ಕೆಲಸವೇ ಇಲ್ಲದ್ದರಿಂದ ಅವು ಕುಳ್ಳಗಾಗುತ್ತ ಹೋದವು.

ಹೀಗೆ ರೂಪಾಂತರ ಹೊಂದಿದ ಇತಿಹಾಸಪೂರ್ವದ ಮಾನವಪಾದವು ಎಲ್ಲಕ್ಕೂ ಸಿದ್ಧವಾದ ಅವಯವವಾಗಿತ್ತು. ಆಗಿನ ಮಾನವನು ಎತ್ತರ ತಗ್ಗು ಭೂಮಿಯಲ್ಲಿ ದೀರ್ಘ ಪ್ರವಾಸ ಮಾಡಬೇಕಾಗುತ್ತಿದ್ದುದರಿಂದ ಅವನು ಪ್ರತಿ ಹೆಜ್ಜೆಯಿಟ್ಟಾಗಲೂ ಹೊಸ ಅನುಭವ ಅವನ ಪಾದಕ್ಕೆ ಬರುತ್ತಿತ್ತು. ಒಂದೇ ಬಗೆಯಾದ ಭಾರ ಅದಕ್ಕೆ ಬೀಳುತ್ತಿರಲಿಲ್ಲ. ಹಿಮ್ಮಡಿಗೂ ಮುಮ್ಮಡಿಗೂ ಸರಿಯಾಗಿಯೇ ಭಾರ ಹಂಚಿ ಹೋಗುತ್ತಿತ್ತು.

ಆದರೆ ಇಂದಿನ ನಾಗರಿಕ ಮಾನವನು ಬಹುತರವಾಗಿ ಸಮತಟ್ಟಾದ ಭೂಮಿಯಲ್ಲಿ ತಿರುಗು



ಪಾದಗಳು ಹೀಗಿದ್ದವು; ಹೀಗಾಗಲಿವೆ !

ತ್ತಾನೆ. ಅದರಿಂದ ಅವನ ಹೆಜ್ಜೆಗಳು ಒಂದೇ ಬಗೆಯ ನಡಿಗೆಯನ್ನು ಅನುಭವಿಸುತ್ತವೆ. ಏಕ ರೂಪ ಹೆಜ್ಜೆಗಳ ದೆಸೆಯಿಂದ ಭಾರವು ನಿರಂತರ ವಾಗಿ ಪಾದದ ಕೆಲವೊಂದು ಅಂಶದ ಮೇಲೆ ಬೀಳುತ್ತದೆ. ನಾಗರಿಕ ಮನುಷ್ಯನ 'ಕಾಲಕಷ್ಟ'-ದ ಮೂಲ ಇಲ್ಲಿದೆ.

ಅನಾಗರಿಕ ಜನಾಂಗಗಳ ಪಾದಗಳನ್ನು ನೋಡಿದರೆ ಇದರ ಸತ್ಯತ್ವ ವ್ಯಕ್ತವಾಗುತ್ತದೆ. ಪಾದರಕ್ಷೆಯನ್ನರಿಯದ ಅನಾಗರಿಕ ಜನರ ಪಾದ-ಗಳು ನೋವು ಅಥವಾ ಇತರ ಕ್ಲೇಶಗಳಿಂದ ಬಳಲುವುದು ತೀರ ಕ್ವಚಿತ್ತಾಗಿ ಎಂದು ಪರಿಶೀಲನೆಗಳಲ್ಲಿ ಸ್ಪಷ್ಟವಾಗಿದೆ ಅವರ ಪಾದದ ತಳಗಳು ಗಟ್ಟಿಯಾಗಿಯೂ ದಪ್ಪವಾಗಿಯೂ ಇರುತ್ತವೆ. ಬೆರಳುಗಳಿಗೆ ಜಡ್ಡು ಬೆಳೆದಿರುವುದಿಲ್ಲ.

ನಾಗರಿಕ ಮಾನವನ ಪಾದಗಳ ಇಂದಿನ ಅನೇಕ ಕಷ್ಟಗಳಿಗೆ ಅವನ ಪಾದರಕ್ಷೆಗಳೇ ಕಾರಣವೆಂದು ಹೊಸ ಬೂಟಿನ ಅಧ್ವರ್ಯುವಾದ ಮುರೇ ಹೇಳುವುದು ತೀರ ಸುಳ್ಳಲ್ಲ. ವಿಶೇಷವಾಗಿ ಬೂಟುಗಳು ಮನುಷ್ಯನ ಪಾದಗಳನ್ನು ಅನಂತ ಪೀಡೆಗಳಿಗೆ ಒಳಪಡಿಸುವೆ. ಒಬ್ಬೊಬ್ಬ ಮನುಷ್ಯನ ಪಾದದ ಆಕೃತಿ-ವಿಕೃತಿ ಒಂದೊಂದು ಬಗೆಯಾಗಿರುತ್ತದೆ. ಆದರೆ ಅದಕ್ಕೆ ಅನುಗುಣವಾದ ಬೂಟುಗಳನ್ನು ತಯಾರಿಸಿ ಉಪಯೋಗಿಸಲಾಗುವುದಿಲ್ಲ. ಕಳೆದ ಶತಮಾನದಲ್ಲಿ ಎರಡೂ ಪಾದಗಳಿಗೆ ಒಂದೇ ರೂಪದ—ಅಂದರೆ ಎಡ-ಬಲ ಭೇದವಿಲ್ಲದ—ಬೂಟುಗಳನ್ನು ಯುರೋ-ಪಿನ ಜನ ಧರಿಸುತ್ತಿದ್ದರಂತೆ. ಅಗಲ ಪಾದ, ಸೀರುಪಾದಗಳ ಭೇದವನ್ನಂತೂ ತಯಾರಿ ಬೂಟುಗಳೂ ಪಾದರಕ್ಷೆಗಳೂ ಗಮನಿಸುವುದೇ ಇಲ್ಲ. ಇದರಿಂದ ಬೂಟು ಅದಕ್ಕೆ ಹೊಂದಿಕೆಯಾಗದ ಪಾದಗಳ ಬೇರೆ ಬೇರೆ ಭಾಗಗಳಿಗೆ ತಿಕ್ಕಿ, ಅಣೆದು, ಬೆರಳುಗಳನ್ನು ಮುದುಡಿಸಿ ಕ್ಲೇಶಕೊಡುತ್ತದೆ. ನಮಗೆ ಒಳಗೆ ಧಾರಾಳ ಸ್ಥಳವಿರುವ ಬೂಟುಗಳು ಬೇಕೆಂದು ಮುರೆಯ ಹೇಳಿಕೆ.

ಪಾದವನ್ನು ಕೀಳೆಂದು ಬಗೆದರೂ ಭಾರತೀಯರು ಪಾದಗಳಿಗೆ ಮಾಡಿದ ಅನ್ಯಾಯ ಇತರ ಜನಾಂಗಗಳಿಗಿಂತ ಬಹಳ ಕಡಿಮೆ ಎನ್ನಬೇಕು. ಭಾರತೀಯ ವೈದ್ಯರು ಪಾದಗಳ ಮಹತ್ವವನ್ನರಿತಿದ್ದರೆಂಬುದಕ್ಕೆ, ಕಣ್ಣಿನ ರೋಗವನ್ನು ಉಂಗುಟಕ್ಕೆ ಔಷಧಿ ಹಚ್ಚಿ ಗುಣಪಡಿಸುತ್ತಿದ್ದರು ಎಂಬಿತ್ಯಾದಿ ಐತಿಹ್ಯಗಳು ಸಾಕ್ಷಿಯಾಗಿವೆ. ತಯಾರಿ ಚಪ್ಪಲಿ, ಬೂಟು, ಹೆಂಗಸರ ಎತ್ತರ ಹಿಮ್ಮಡದ ಪಾದರಕ್ಷೆ ಇತ್ಯಾದಿ ಫ್ಯಾಶನ್ನುಗಳು ಇಲ್ಲಿಗೂ ಬಂದು ನಮ್ಮ ಪಾದಗಳನ್ನು ಈಗ ಹಸ ಗೆಡಿಸತೊಡಗಿವೆ.

ಇತರ ದೇಶಗಳಲ್ಲಿ ನಾಗರಿಕತೆ ಪ್ರಾರಂಭವಾದಂದಿನಿಂದಲೂ ಪಾದಗಳಿಗೆ ಆದ ಅನ್ಯಾಯಗಳನ್ನು ಕೇಳಿದರೆ ನೀವು ದಂಗಾಗುವಿರಿ. ಇದರಲ್ಲಿ ಹೆಚ್ಚಿನ ಅನ್ಯಾಯದ ಭಾರ ಹೆಂಗಸಿನ ಮೇಲೆಯೇ ಬಿದ್ದಿದೆ. ಹೆಣ್ಣಿನ ಪಾದ ಸಣ್ಣಗಿದ್ದರೆ ಚಂದ ಎಂಬ ನಂಬಿಕೆಯೊಂದು ಚೀನ ಮತ್ತು ಪಶ್ಚಿಮ ಏಶಿಯದಲ್ಲಿ ಹೇಗೋ ಹುಟ್ಟಿಬಿಟ್ಟಿತು. ತಾಯ್ತನವೇ ಹೆಣ್ಣಿನ ಪ್ರಧಾನಕರ್ತವ್ಯವಾದ ಮೇಲೆ, ಪಾತಿವ್ರತ್ಯದ ವಿಶಿಷ್ಟ ಕಲ್ಪನೆ ಹುಟ್ಟಿದ ಮೇಲೆ ಹೆಣ್ಣು ಮನೆ ಬಿಟ್ಟು ದೂರ ಹೋಗದಿರುವುದು ಸುಶೀಲವೆಂಬ ನಂಬಿಕೆ ಬೆಳೆದಿರಬೇಕು. ಅದಕ್ಕಾಗಿ ಮಧ್ಯಪೂರ್ವ ದೇಶಗಳಲ್ಲಿ ಕಾಲಿನ ಶೃಂಗಾರದ ಹೆಸರಲ್ಲಿ ಭಾರವಾದ ಕಡಗ, ಕೆಲವೇಳೆ ಪಾದದಿಂದ ಪಾದಕ್ಕೆ (ಬೆಲೆ ಬಾಳುವ ಲೋಹದ್ದೇ ಇರಲೊಲ್ಲದೇಕೆ) ಸರಪಳಿ, ವೇಗವಾಗಿ ನಡೆಯಲು ಆತಂಕವಾಗುವ ಎತ್ತರ ಹಿಮ್ಮಡದ ಪಾದರಕ್ಷೆ ಇವು "ಫ್ಯಾಶನ್ನು"ಗಳಾಗಿ ತಲೆಯೆತ್ತಿದವಂತೆ.

ಹೆಂಗಸರ ಪಾದ ಚಿಕ್ಕದಿದ್ದರೆ ಚಂದ ಎಂಬುದೂ ಪಾತಿವ್ರತ್ಯ ಕಲ್ಪನೆಯ ಶಾಖೆಯೇ. ಚಿಕ್ಕ ಪಾದವಿದ್ದರೆ ದೂರ ನಡೆಯಲು ಬಾರದು ತಾನೇ ! ಪುರಾತನ ಇಜಿಪ್ತದಲ್ಲಿಯೇ ಈ ಚಿಕ್ಕ ಪಾದದ ಫ್ಯಾಶನ್ ಇತ್ತು. ಕ್ರಿ. ಪೂ. ೭ ನೇ ಶತಮಾನದಲ್ಲಿ ಒಂದು ಹದ್ದು ಇಜಿಪ್ತದಲ್ಲಿ ಆಕಾಶದಿಂದ ಒಂದು ಚಿಕ್ಕ ಪಾದರಕ್ಷೆಯನ್ನು

ಭೂಮಿಗೆ ಕೆಡವಿತಂತೆ. ಫೇರೋ ಪ್ಸಮೇತಿಕಸನೆಂಬ ಅರಸು ಅದನ್ನು ಕಂಡು ಈ ಪಾದರಕ್ಷೆ ಯಾರ ಪಾದಕ್ಕೆ ಸರಿಹೋಗುವುದೋ ಅವಳನ್ನೇ ಮದುವೆಯಾಗುವೆನೆಂದು ಪಣತೊಟ್ಟ. ಅದರೊಳಗೆ ಹೋಗುವ ಪಾದವುಳ್ಳ ಸುಂದರಿ ಅವನಿಗೆ ಸಿಗಲಿಲ್ಲ. ಕೊನೆಗೆ ಒಬ್ಬ ಗುಲಾಮ ಹೆಣ್ಣಿನ ಪಾದ ಅದಕ್ಕೆ ಹೊಂದಿತು. ಫಾರೋ ಅವಳನ್ನೇ ಮಾಡಿಕೊಂಡ.

ಚಿಕ್ಕ ಪಾದಗಳ ಈ ಫ್ಯಾಶನ್ ಚೀನದಲ್ಲಿ ಹುಚ್ಚಾಟಕ್ಕೆ ಮುಟ್ಟಿದಂತೆ ಮತ್ತೆಲ್ಲಿಯೂ ಮುಟ್ಟಿರಲಾರದು. ಅಲ್ಲಿ ೧೦ ನೇ ಶತಮಾನದಿಂದ ೧೯೧೨ ರ ವರೆಗೂ ಹೆಂಗಸರ ಪಾದಗಳನ್ನು ಪುಟ್ಟವಾಗಿ ಮಾಡುವಸಲುವಾಗಿ ವಿಕೃತಗೊಳಿಸಲಾಗುತ್ತಿತ್ತು. ಹೆಣ್ಣು ಮಗು ಹುಟ್ಟಿದ ಕೆಲ ದಿನಗಳಲ್ಲಿಯೇ ಅದರ ಉಂಗುಟವನ್ನು ಬಿಟ್ಟು ಉಳಿದ ನಾಲ್ಕು ಬೆರಳುಗಳನ್ನು ಬಗ್ಗಿಸಿ ಪಾದದ ತಳಕ್ಕೆ ತಗಲಿಸಿ ಕಟ್ಟಿಬಿಡುತ್ತಿದ್ದರು. ಈ ಅವಸ್ಥೆಯಲ್ಲಿ ಬೆರಳುಗಳು ಪೂರ್ತಿ ಬಗ್ಗಿ ವಿಕೃತವಾದ ಬಳಿಕ ಸೌಂದರ್ಯಸೈರಂಧ್ರಿಯರು ಮಗುವಿನ ಹಿಮ್ಮಡಗಳನ್ನು ಒತ್ತಿ ಅವು ಮುಂದಣ ಬೆರಳುಗಳನ್ನು ತಗಲುವ ವರೆಗೂ ಬಗ್ಗಿಸಿ ಕಟ್ಟುತ್ತಿದ್ದರು. ಹೀಗೆ ಪಾದವನ್ನು ಮಡಚಿ ಮುದ್ದೆ ಮಾಡಿದಂತಾಗುತ್ತಿತ್ತು. ಇದಕ್ಕೆ "ಪುಷ್ಪಪಾದ" ಎಂಬ ಚಂದದ ಹೆಸರಿತ್ತು! ಈ ವಿಕೃತ ಪಾದದಿಂದ ಸರಿಯಾಗಿ ನಡೆಯಲಾಗುತ್ತಿದ್ದಿಲ್ಲ; ಬರಿ ಬಳುಕಿ ಮುಗ್ಗರಿಸಲಾಗುತ್ತಿತ್ತು, ಮಾತ್ರ. ಆದರೆ ಅದು ಚಹಾದ ಕಪ್ಪಿನಷ್ಟು ಗಾತ್ರದ ರೇಶ್ಮೆ ಬೂಟಿನಲ್ಲಿ ಪ್ರವೇಶಿಸುವಷ್ಟು ಚಿಕ್ಕದಾಗುತ್ತಿತ್ತು. ಈ ಪಾದವೇ ಚಂದ, ಆ ನಡಿಗೆಯೇ ಮೋಹಕ ಎಂಬ ತಿಳಿವಳಿಕೆ ಆ ಕಾಲದ ಚೀನಿ ಜನರಲ್ಲಿ, ವಿಶೇಷವಾಗಿ ಶ್ರೀಮಂತರಲ್ಲಿ ಮತ್ತು ಅರಮನೆಗಳಲ್ಲಿ ಪ್ರಚುರವಾಗಿತ್ತು. ೧೯೧೧ ರ ಕ್ರಾಂತಿಯಲ್ಲಿ ಚೀನದ ಸ್ತ್ರೀವಿಮೋಚನೆ ಹೊಂದಿದ ಮೇಲೆಯೇ ಈ ಫ್ಯಾಶನ್ ಹೋಯಿತು.

೧೫ ರಿಂದ ೧೭ ನೇ ಶತಮಾನಗಳ ವರೆಗೆ ಯುರೋಪಿನಲ್ಲಿ "ಚೋಪೀನ" ಎಂಬ ನಾಲ್ಕು ಗೇಣೆತ್ತರದ ಪಾದರಕ್ಷೆಯ ಫ್ಯಾಶನ್ ಹಬ್ಬಿತ್ತು. ಇದನ್ನು ಧರಿಸಿದ ನಾರಿಯರು ಯಾವನೊಬ್ಬನ ಕೈಯಾಸರೆಯಿಲ್ಲದೆ ಹೆಜ್ಜೆಯಿಕ್ಕುವುದೇ ಅಶಕ್ಯವಾಗಿತ್ತು. ಈ ಪಾದರಕ್ಷೆ ನಿಜವಾಗಿ ಅವಳನ್ನು ಬಳುಕುವ ಅಬಲೆಯೇ ಆಗಿಸಿತ್ತು. ಅದೇ ಫ್ಯಾಶನ್ ಎಂದು ಸ್ತ್ರೀಯರು ನೆಚ್ಚಿಕೊಂಡಿದ್ದರು.

ಆದರೆ ಬರಿ ಪಾದರಕ್ಷೆಗಳನ್ನೇ ದೂರಿ ಫಲವಿಲ್ಲ. ಮರದಿಂದಿಳಿದು ವಾನರ ನರನಾದ ಮೇಲೆ ಅವನ ಪಾದ ತನ್ನ ಹೊಸ ಕೆಲಸಕ್ಕೆ ಇನ್ನೂ ಹೊಂದಿಕೊಂಡಿಲ್ಲವೆಂದು ಪಾದತಜ್ಞರ ಹೇಳಿಕೆ. ಮಾರ್ಟನ್ ಎಂಬ ತಜ್ಞರ ಪ್ರಕಾರ, ಮನುಷ್ಯರಲ್ಲಿ ಹತ್ತಕ್ಕೆ ನಾಲ್ಕು ಜನರ ಕಾಲಿನ ಹೆಬ್ಬೆಟ್ಟಿನ ಹಿಂದಿನ ಎಲುಬು (First Metatarsal) ಎರಡನೇ ಬೆರಳಿನ ತತ್ಸಮಾನ ಎಲುಬಿಗಿಂತ ಗಿಡ್ಡವಾಗಿದೆ. ಇದರಿಂದ ಹೆಬ್ಬೆಟ್ಟಿನ ಬುಡದ ಮೇಲೆ ಬೀಳಬೇಕಾದ ಭಾರ ದುರ್ಬಲವಾದ ಎರಡನೇ ಬೆರಳಿನ ಬುಡಕ್ಕೆ ಬಿದ್ದು ಪಾದಗಳು ಕಾಲಾಂತರದಲ್ಲಿ ವಿಕೃತಹೊಂದಿ ತೊಂದರೆ ಕೊಡುತ್ತವೆ.

ಪಾದದ ಕಷ್ಟಗಳ ಮೂಲ ಕಾರಣಗಳ ಬಗ್ಗೆ ತಜ್ಞರಲ್ಲಿ ಸಹಮತವಿಲ್ಲ. ಸರಿಯಾದ ನಿಲುವಿನಲ್ಲಿ ನಿಲ್ಲುವುದು, ಪಾದಗಳನ್ನು ಬೆಚ್ಚಗಿಡುವುದು, ಆಣಿಗಳನ್ನು ಶಸ್ತ್ರಕ್ರಿಯೆಯಿಂದ ತೆಗೆಸುವುದು ಮೊದಲಾದ ಪರಿಹಾರಗಳನ್ನು ಅವರು ಉಪಯೋಗಿಸುತ್ತಿದ್ದಾರೆ.

ಅತ್ತ ನಿಸರ್ಗವೇ ಮನುಷ್ಯನ ಪಾದವನ್ನು ಬದಲಿಸುತ್ತಿದೆ. ಮನುಷ್ಯ ಶಾಸ್ತ್ರಜ್ಞರ ಮತದಲ್ಲಿ ಮನುಷ್ಯ ಪಾದಕ್ಕೆ ಬೇಗನೆ ನಾಲ್ಕೇ ಬೆರಳುಗಳು ಉಳಿಯುವವು. ಈಗಾಗಲೆ ಐದನೇ ಬೆರಳು ಹೊರಟು ನಿಂತಿದೆಯಂತೆ. ಅದರಿಂದ ಅವನ 'ಕಾಲಕಷ್ಟ' ದೂರವಾದೀತೆಂದು ಹಾರೈಸೋಣ.

ಈ ನಡುವೆ ನಾವು ಭಾರತೀಯರು, ವಿಶೇಷವಾಗಿ ಫ್ಯಾಶನ್‌ರಮಣಿಯರು, ಪಾಶ್ಚಾತ್ಯ ಪಾದರಕ್ಷೆಗಳ ಮೋಹಕ್ಕೆ ಬೀಳುವ ಮೊದಲು ಸ್ವಲ್ಪ ವಿಚಾರಿಸಿಕೊಂಡರೆ ಒಳಿತು.

# ಇದುವೆ ಜೀವ, ಇದು ಜೀವನ

ಮೈಸೂರು ದಸರಾ ಉತ್ಸವಕ್ಕೆ ಹೊರಟ ನಾವು ಹಾನಗಲ್ಲಿನಲ್ಲಿ ಬಸ್ ನಿಂತಾಗ ವಿಶ್ರಮಿಸಲು ಕೆಳಗಿಳಿದೆವು. ಅಷ್ಟರಲ್ಲಿ ಒಬ್ಬ ಗೃಹಸ್ಥರು ಹತ್ತಿ ನಮ್ಮಲ್ಲೊಬ್ಬರ ಸೀಟಿನಲ್ಲಿ ಕುಳಿತರು. ಹತ್ತಿರ ಇದ್ದವರು, "ಇಲ್ಲಿ ಮಂದಿ ಕುಳಿತಿದ್ದಾರೆ" ಎಂದು ಹೇಳಿದ್ದಕ್ಕೆ ಆ ಗೃಹಸ್ಥರು "ನಾನೂ ಕುಳಿತಿದ್ದೇನಲ್ಲ'' ಎಂದು ಮೊರಟು ಮಾತಾಡಿ ಗಟ್ಟಿಯಾಗಿ ಕುಳಿತೇಬಿಟ್ಟರು.

ಕೆಳಗೆ ನಿಂತಿದ್ದ ನಾನು ಅವರ ಲಕ್ಷ್ಯ ಸೆಳೆಯಲು, "ಶ್ಚು . . . ಶ್ಚು . . . '' ಎಂದು, "ನಾವು ಅಲ್ಲಿ ಕುಳಿತಿದ್ದೇವೆ'' ಎಂದೆ.

ಆ ಮನುಷ್ಯ "ಏನು ಶ್ಚು ಶ್ಚು ಅನ್ನಲು ನಾನೇನು ನಾಯಿ ಅಂತಾ ತಿಳಿದಿದ್ದೀರಾ ?'' ಎಂದು ಜಗಳಕ್ಕೇ ಬಂದ.

ನನಗೂ ರೇಗಿತು. "ಇಲ್ಲ ಸ್ವಾಮಿ, ನಮ್ಮ ಕಡೆಗೆ ನಾಯಿಗೆ ಶ್ಚು ಶ್ಚು ಅನ್ನುವದಿಲ್ಲ, ಕತ್ತೆಗೆ ಅನ್ನುತ್ತೇವೆ'' ಎಂದೆ. ಮನುಷ್ಯ ಸುಮ್ಮನಾದ.

ಬಸ್ಸು ಮುಂದೆ ಸಾಗಿತು. ಸ್ವಲ್ಪ ಹೊತ್ತಿನ ಮೇಲೆ ಅದೇ ಮನುಷ್ಯ ತನ್ನ ಎದುರು ಸೀಟಿನಲ್ಲಿ ಕುಳಿತು ಪೇಪರೋದುತ್ತಿದ್ದವರಿಗೆ "ಶ್ಚು ಶ್ಚು...ಸ್ವಲ್ಪ ಪೇಪರು ಇತ್ತಲಾಗಿ ಕೊಡಿ'' ಎಂದ.

ಪೇಪರು ಓದುತ್ತಿದ್ದವರು ಪೇಪರಿನಿಂದ ಮುಖ ಎತ್ತಿ ನಸುನಗುತ್ತ ಹೇಳಿದರು : "ನೀವು ತಪ್ಪು ತಿಳಿದುಕೊಂಡಿರಿ ಸ್ವಾಮಿ. ನಮ್ಮಿತ್ತಕಡೆ ಮನುಷ್ಯರು ಕತ್ತೆಗಳನ್ನು ಕರೆಯುವಾಗ ಶ್ಚು ಶ್ಚು ಅನ್ನುತ್ತಾರಲ್ಲದೆ ಕತ್ತೆಗಳು ಮನುಷ್ಯರನ್ನು ಹಾಗೆ ಕರೆಯುವದಿಲ್ಲ.''

—ಅನಂತ ಪಂಡಿತ, ಶಿರ್ಶಿ

ಕೆಲ ದಿನಗಳ ಹಿಂದೆ ಮುಂಬಯಿಯಲ್ಲಿ ಒಂದೆಡೆ ಜನ ಸೇರಿ ಬೆರಗಾಗಿ ಏನನ್ನೊ ನೋಡುತ್ತಿರುವದನ್ನು ನಾನು ಕಂಡೆ. ಹಣಿಕಿ ನೋಡಿದಾಗ ಒಂದು ಟ್ಯಾಕ್ಸಿಯನ್ನು ಏರುವ ಹವ್ಯಾಸದಲ್ಲಿ ಭಾರೀ ಸುತ್ತಳತೆಯ ಮಹಿಳೆಯೊಬ್ಬಳು ಬಾಗಿಲಲ್ಲಿ ಸಿಕ್ಕಿಕೊಂಡಿದ್ದಳು.

ಟ್ಯಾಕ್ಸಿಯವ ಅವಳನ್ನು ಹೇಗಾದರೂ ಬಿಡಿಸಲು ಯತ್ನಿಸುತ್ತಿದ್ದ. ಅವಳು ಇಕ್ಕಟ್ಟಿನಿಂದ ತಪ್ಪಿಸಿಕೊಳ್ಳಲು ಒದ್ದಾಡುತ್ತ, "ಯಾವಾಗಲೂ ಅಡ್ಡಲಾಗಿ ಹತ್ತುವವಳು ಈವೊತ್ತು ಎದುರಾಗಿ ಹತ್ತಿ ಕೆಟ್ಟೆನಪ್ಪಾ'' ಎನ್ನುತ್ತಿದ್ದಳು.

ಕಂಗಾಲಾದ ಟ್ಯಾಕ್ಸಿವಾಲಾಗೆ ಒಬ್ಬ ಸಣ್ಣ ಹುಡುಗ, "ನಾನು ಬಿಡಿಸಿಕೊಡುವೆ ಹೆದರಬೇಡ'' ಎಂದ. ಅವನು ಟ್ಯಾಕ್ಸಿಯ ಆ ಬದಿಗೆ ಹೋಗಿ ಏನನ್ನೊ ಒಳಗೆ ಒಗೆದ.

ಹೆಂಗಸು ಚಿಟ್ಟನೆ ಚೀರಿದಳು. ಸಂಗಡಲೆ ಅವಳು ಬಾಟಲಿಯಿಂದ ಕಾರ್ಕು ಹಾರುವ ಹಾಗೆ ಟ್ಯಾಕ್ಸಿಯ ಬಾಗಿಲಿನಿಂದ ನೆಗೆದು ಹೊರಬಿದ್ದಳು.

ಹುಡುಗ ಒಗೆದದ್ದು ಆಟದ ಯಾಂತ್ರಿಕ ಹಾವಾಗಿತ್ತು.

—ಶ್ರೀ. ಬಾ. ಕೃ., ಮುಂಬಯಿ

• ವಿಮಾನ ದಳದಲ್ಲಿ ದೊಡ್ಡ ಹುದ್ದೆಯಲ್ಲಿರುವ ಯುವಕ ಮಿತ್ರರೊಬ್ಬರು ಮೊನ್ನೆ ಕಲ್ಕತ್ತಾದಿಂದ ಬಂದಿದ್ದರು. ಇಬ್ಬರೂ ಕುಳಿತು ಹರಟೆ ಹೊಡೆಯುತ್ತಿರುವಾಗ ರಾಷ್ಟ್ರಭಾಷೆಯ ಪ್ರಸ್ತಾಪ ಬಂತು. "ಇತ್ತೀಚೆಗೆ ಬಡತಿಗಾಗಿ ನಾನೊಂದು ಹಿಂದೀ ಪರೀಕ್ಷೆಗೆ ಕೂಡಬೇಕಾಯಿತು, ಕಾಣಯ್ಯ''—ಎಂದರು ಗೆಳೆಯರು.

ಅವರ ಹಿಂದೀ ಜ್ಞಾನ ಅಷ್ಟಕಷ್ಟೆ. ಅಂದಮೇಲೆ ಪರೀಕ್ಷೆಯಲ್ಲಿ ಏನು ಮಾಡಿದಿರಪ್ಪ ಎಂದು ಕೇಳಿದೆ. "ಬರೆಯಲಿಕ್ಕೇನೂ ಇದ್ದಿಲ್ಲ. ಮೇಲಧಿಕಾರಿಗಳು ನಮ್ಮನ್ನು ನಿಲ್ಲಿಸಿಕೊಂಡು ಬಾಯಲ್ಲೇ ಕೆಲವು ಪ್ರಶ್ನೆಗಳನ್ನು ಕೇಳಿದರು. ಮೊದಲನೆ ಪ್ರಶ್ನೆ, ಆತ ಕೇಳಿದ್ದು, ಇದು—'ಒಂದು ಕುದುರೆಯು ಈ ಹಜಾರದ ಈ ಮೂಲೆಯಿಂದ ಆ ಮೂಲೆಗೆ ಓಡಾಡಿತು—ಎಂಬುದನ್ನು ಹಿಂದಿಯಲ್ಲಿ ಹೇಳು.'

"ಏನು ಹೇಳಬೇಕೆಂದು ನನಗೆ ತೋಚಲಿಲ್ಲ. ಥಟ್ಟನೆ ಕೋಣೆಯ ಒಂದು ಮೂಲೆಗೆ ಓಡಿದೆ. ಅಲ್ಲಿ ನಿಂತು 'ಇದರ್ ಆವ್ ಘೋಡಾ' (ಕುದುರೆ, ಇಲ್ಲಿ ಬಾ) ಎಂದೆ. ಅನಂತರ ಸರಕ್ಕನೆ ಎದುರಿನ ಮೂಲೆಗೆ ಓಡಿದೆ. ಅಲ್ಲಿ ನಿಂತು ಮತ್ತೆ 'ಘೋಡಾ, ಇದರ್ ಆವ್' ಮಾಡಿದೆ. ಕುದುರೆ ಓಡಾಡಿದ್ದನ್ನು ಹೇಗೊ ಹಿಂದಿಯಲ್ಲಿ ವ್ಯಕ್ತಪಡಿಸಿದೆ. ಅಷ್ಟರಲ್ಲಿ ಪರೀಕ್ಷಾರ್ಥಿಗಳೂ ಪರೀಕ್ಷಕರೂ ಎಲ್ಲ ಶಿಸ್ತನ್ನು ಬದಿಗಿಟ್ಟು 'ಹೋ' ಎಂದು ಗುಲ್ಲೆಬ್ಬಿಸಿಬಿಟ್ಟಿದ್ದರು. ನನಗೆ ಎರಡನೆಯ ಪ್ರಶ್ನೆಯನ್ನೂ ಕೇಳಲಿಲ್ಲ. ಮಾತ್ರವಲ್ಲದೆ 'ನೀನು ಪಾಸ್' ಎಂದು ಕೂಡ ಹೇಳಿದರು!

—ಎ. ಎಸ್. ರಾಮಕೃಷ್ಣ

ಕಳೆದ ಮಹಾಯುದ್ಧದ ಕಾಲದಲ್ಲಿ ಕಾಗದದ ಅಭಾವದಿಂದಾಗಿ ಒಂದು ಮಗ್ಗಲಿನಲ್ಲಿ ಏನಾದರೂ ಬರೆದಿದ್ದ ಕಾಗದಗಳನ್ನು ಸಹ ಅರ್ಜಿ, ಕೈಫಿಯತ್ತು ವಗೈರೆ ಬರೆಯಲು ಉಪಯೋಗಿಸಬಹುದೆಂದು ಸವಲತ್ತು ಇತ್ತು.

ಈ ಪರಿಸ್ಥಿತಿಯಲ್ಲಿ ಬಂಧಿತರಾದ ಕೆಲವು ಆರೋಪಿತರ ಪರವಾಗಿ ಜಾಮೀನು ಅರ್ಜಿಯನ್ನು ಬಂಟವಾಳದ ಎರಡನೇ ಕ್ಲಾಸ ಮ್ಯಾಜಿಸ್ಟ್ರೇಟರಲ್ಲಿ ದಾಖಲ ಮಾಡಿದೆನು. ಅದು ಅಂತಹ ಒಂದು ಕಾಗದದ ಮೇಲೆ ಬರೆದಿತ್ತು. ಮ್ಯಾಜಿಸ್ಟ್ರೇಟರು ಆರೋಪಿತರನ್ನು ಜಾಮೀನಿನಲ್ಲಿ ಬಿಡುವ ಹುಕುಮು ಮಾಡಿದರು. ಬಿಡುಗಡೆಯೂ ಆಯಿತು.

ಎರಡು ದಿನಗಳ ನಂತರ ನನಗೆ ಟಪಾಲಿನಲ್ಲಿ ಅದೇ ಮ್ಯಾಜಿಸ್ಟ್ರೇಟರ ಹುಕುಮು ಒಂದು ಬಂತು: "ನೀವು ಸಿ. ಸಿ. ೧೨೪/೪೪ ನೇ ಮುಕದಮೆಯಲ್ಲಿ ರಾಮಪ್ಪ ಪೂಜಾರಿ ವಗೈರೆಯವರ ಪರವಾಗಿ ಕೊಟ್ಟ ಜಾಮೀನು ಅರ್ಜಿಯನ್ನು ತಳ್ಳಿಹಾಕಿದೆ. ಯಾಕೆಂದರೆ ಅದರ ಹಿಂಬದಿಯಲ್ಲಿ ಅಕ್ಷೇಪಾರ್ಹ ಘೋಷಣೆ ಇದೆ."

ನೋಡಿ ಅವಾಕ್ಕಾದೆ. ಅರ್ಥವೇ ಹೊಳೆಯಲಿಲ್ಲ. ಈ ಹುಕುಮಿನ ಪರಿಣಾಮವಾಗಿ ರಾಮಪ್ಪ ಪೂಜಾರಿಯು ಪುನಃ ಬಂಧಿಸಲ್ಪಡಬಹುದೆಂದು ಅಂಜಿ ಬಂಟವಾಳಕ್ಕೆ ಓಡಿದೆ.

ಅಲ್ಲಿ ಕೋರ್ಟಿಗೆ ಹೋದೊಡನೆ ಮ್ಯಾಜಿಸ್ಟ್ರೇಟರು "ನಿಮ್ಮ ಜಾಮೀನ ಅರ್ಜಿಯ ಹಿಂಬದಿ ಆಕ್ಷೇಪಾರ್ಹ ಘೋಷಣೆ ಇದೆ. ಮೊದಲು ಹುಕುಮು ಮಾಡುವಾಗ ನಾನು ಅದನ್ನು ನೋಡಲಿಲ್ಲ. ನಂತರ ಶಿರಸ್ತೆದಾರರು ನಮ್ಮ ನಜರಿಗೆ ಅದನ್ನು ತಂದರು. ಆಕ್ಷೇಪಾರ್ಹ ಘೋಷಣೆಗಳಿದ್ದ ಅರ್ಜಿಗಳಿಗೆ ಯಾವದೇ ಪುರಸ್ಕಾರ ಕೊಡುವದು ಸಾಧ್ಯವಿಲ್ಲ. ಅದ್ದರಿಂದ, ನಿಮ್ಮ ಅರ್ಜಿಯನ್ನು ತಳ್ಳಿ ಹಾಕಬೇಕಾಯಿತು" ಎಂದರು.

ಆಕ್ಷೇಪಾರ್ಹ ಘೋಷಣೆ ಎಂಬುದಾದರೂ ಏನೆಂದು ಆ ಅರ್ಜಿಯನ್ನು ತಗೊಂಡು ನೋಡಿದೆ. ಆ ಅರ್ಜಿಯು ಮದರಾಸಿನ "ಕಾಮ್ರೇಡ" ಮೋಹನಕುಮಾರ ಮಂಗಲಂ ಅವರು ಅಮರ ಕೈಯೂರ ಮೊಕದ್ದಮೆಯಲ್ಲಿ ಪ್ರೀವಿ ಕೌನ್ಸಿಲಿಗೆ ಅಪೀಲು ಮಾಡುವ ಕುರಿತು ಬರೆದ ಪತ್ರದ ಇನ್ನೊಂದು ಮಗ್ಗುಲಲ್ಲಿತ್ತು.

ಅವರ ಪತ್ರದ ಮೇಲೆ "ಕ್ರಾಂತಿಯು ಚಿರಾಯುವಾಗಲಿ" ಎಂಬ ಮುದ್ರಿತ ಅಕ್ಷರಗಳಿದ್ದವು.

—[illegible]

# ನೆಹರೂ ಕೂಡ ನಡೆಯುಬಲ್ಲರು !

ಪಂಜಾಬಿನ ನೆರೆಹಾವಳಿಗೊಳಗಾದ ಪ್ರದೇಶವನ್ನು ಪರಿಶೀಲಿಸಿ ಪ್ರಧಾನಿ ನೆಹರೂ ದಿಲ್ಲಿಗೆ ಹಿಂತಿರುಗುತ್ತಿದ್ದರು. ಎರಡು ಗಂಟೆಗಳ ಪ್ರಯಾಣಮಾಡಿ ಅವರ ವಿಮಾನ ಪಾಲಂ ನಿಲ್ದಾಣಕ್ಕೆ ಬಂದರೂ ಕೆಳಗೆ ಇಳಿಯದೆ ನಗರದ ಮೇಲೆ ಸುತ್ತು ಹಾಕ ತೊಡಗಿತು.

ವಿಮಾನ ಹೀಗೇಕೆ ಸುತ್ತುಹಾಕುತ್ತದೆಂದು ನೆಹರೂರಿಗೆ ಗೊತ್ತಾಗಲಿಲ್ಲ.

ನಿಲ್ದಾಣವು ಶಾಂತವಾಗಿತ್ತು. ಬಾನಿನಲ್ಲಿ ಬೇರೆ ಯಾವ ವಿಮಾನವೂ ಆಗ ಹಾರಾಡುತ್ತಿರಲಿಲ್ಲ. ವಾತಾವರಣ ಕೂಡ ಅನುಕೂಲವಾಗಿತ್ತು. ಇಷ್ಟಾದರೂ ವಿಮಾನ ಇಳಿಯುವ ಚಿಹ್ನೆ ಕಾಣದೆ ಆಶ್ಚರ್ಯತಾಳಿದ ನೆಹರೂ ಕ್ಯಾಬಿನ್ನಿಗೆ ಬಂದರು.

ವಿಮಾನ ಚಾಲಕರು ನೆಹರೂರಿಗೆ ಅಭಿವಾದನೆ ಸಲ್ಲಿಸುತ್ತಿದ್ದಂತೆಯೇ ನೆಹರೂ ವಿಮಾನ ಇಳಿಸದಿರುವ ಕಾರಣವನ್ನು ಕೇಳಿದರು.

ವಿಮಾನಚಾಲಕ ರೇಡಿಯೋ ಸಂದೇಶವಾಹಕನನ್ನು ತೋರಿಸುತ್ತ ಹೇಳಿದ : " ನಿಲ್ದಾಣಕ್ಕೆ ಪ್ರಧಾನಿಯ ಕಾರು ಇನ್ನೂ ಬಂದಿಲ್ಲವಾದ್ದರಿಂದ ವಿಮಾನವನ್ನು ಕೆಳಗಿಳಿಸಬಾರದೆಂದು ನಮಗೆ ಆದೇಶ ಬಂದಿದೆ.''

ನೆಹರೂ ಮುಖ ಮತ್ತಷ್ಟು ಕೆಂಪಾಯಿತು ; ಅವರ ತುಟಿಗಳು ಅದುರತೊಡಗಿದವು. " ನನಗೆ ನಡೆಯುಬರುವುದಿಲ್ಲವೆಂದು ನಿಮ್ಮ ಭಾವನೆಯೋ?'' ಎಂದವರು ಗುಡುಗಿದರು.

ವಿಮಾನ ಕೆಳಗಿಳಿಯಿತು. ಪಾಲಂನಿಂದ ೧೦ ಮೈಲು ದೂರವಿರುವ ತಮ್ಮನಿವಾಸಕ್ಕೆ ನೆಹರೂ ಕಾಲ್ನಡೆಯಲ್ಲಿ ಬಡಬಡನೆ ಹೊರಟರು. ಬೇರೆ ಹಲವು ವಾಹನಗಳು ಅಲ್ಲಿ ಕಾದಿದ್ದರೂ ಅವರು ಅವನ್ನು ಏರಲಿಲ್ಲ. ಅದರ ಹಿಂದೆ ಅಧಿಕಾರೀ ವರ್ಗದವರೂ ನಡೆಯತೊಡಗಿದರು.

ಅಷ್ಟರಲ್ಲಿ ಪ್ರಧಾನಿಗಳ ಕಾರ್ಯದರ್ಶಿಯೊಂದಿಗೆ ಕಾರೂ ಪರಿವಾರವೂ ಬಂದವು. ನೆಹರೂ ಒಡನೆಯೇ ಕಾರನ್ನು ಏರ್ ಮಾರ್ಶಲ್ ಮುಖರ್ಜಿಯವರ ಬಂಗಲೆಗೆ ಒಯ್ಯುವಂತೆ ಆಜ್ಞಾಪಿಸಿದರು.

ಏರ್ ಮಾರ್ಶಲ್ ಮುಖರ್ಜಿಯವರು ಆಗ ಪತ್ರಿಕೆ ಓದುತ್ತಲಿದ್ದರು. ನೆಹರೂ ಬರುತ್ತಿರುವುದನ್ನು ನೋಡಿ ತಮ್ಮ ಪತ್ನಿಯೊಂದಿಗೆ ಅವಾಕ್ಕಾಗಿ ಹೊರಗೆಬಂದರು. ಒಡನೆಯೇ ಕೆಂಪುಮುಖದ ನೆಹರೂ " ನಿಮ್ಮ ವೈಮಾನಿಕರು ತಮ್ಮ ಕೆಲಸವನ್ನು ಸರಿಯಾಗಿ ಮಾಡುವುದಿಲ್ಲ " ವೆಂದು ಅವರಿಗೆ ದೂರಿತ್ತರು. ಆಗ ಅವರ ಸಿಟ್ಟು ಇಳಿದು ಹೋಗಿತ್ತು. ತಮ್ಮ ವಿಮಾನವು ನಿಲ್ದಾಣದ ಮೇಲೆಯೇ ಸುತ್ತುಹಾಕಿದ ವಿಷಯವನ್ನು ತಿಳಿಸುತ್ತಾ, " ನಾನೂ ನಡೆಯುಬಲ್ಲೆ '' ಎಂದು ನಕ್ಕುಬಿಟ್ಟರು !

—ಸೈನಿಕ ಎಂ. ಆರ್. ಜೂಗನವರ

**ಭಯವಿಲ್ಲದೆ ಬಾಳಿಲ್ಲ ; ಆದರೆ ಅದು ಹದ ತಪ್ಪಿದರೆ ಸರ್ವನಾಶ.**

# ಭಯ : ಮಿತ್ರ ಮತ್ತು ಶತ್ರು

ಬಾಪು ಶಿರಹಟ್ಟಿ

ಪ್ರಾಣಿಜಾತಕ್ಕೆಲ್ಲ ಸಾಮಾನ್ಯವಾಗಿರುವ ಭಯವು ಜೀವನದಲ್ಲಿ ಮಹತ್ವದ ಪಾತ್ರವನ್ನೇ ಆಡುತ್ತದೆ ಎಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಅವರ ದೃಷ್ಟಿಯಲ್ಲಿ ಮನುಷ್ಯನು ದಿನದಿಂದ ದಿನಕ್ಕೆ ಸುರಕ್ಷಿತತೆಯ ಸಂಶೋಧನೆ ನಡೆಸುವುದಾದರೂ ಭಯದ ಕಾರಣದಿಂದಲೇ. ಭಯವು ಮಾನವನನ್ನು ಪ್ರಯತ್ನವಾದಿಯನ್ನಾಗಿ ಮಾಡುತ್ತದೆ; ಸಂಘಟಿಸುತ್ತದೆ; ಕೊನೆಗೆ ದುರ್ಭೇದ್ಯನನ್ನಾಗಿಯೂ ಮಾಡುತ್ತದೆ ಎಂದವರು ವಾದಿಸುತ್ತಾರೆ.

'ಹಚಾ' ಎನ್ನಿ, ಒಮ್ಮೆಲೇ ನಾಯಿ ದೂರ ಓಡುವುದು. 'ಉಶ್ಯಾ' ಎನ್ನಿ, ಬೆಕ್ಕು ಹಿಂದೆ ಸರಿಯುವುದು. ಸಣ್ಣ 'ಅಟಂ ಬಾಂಬ'ನ್ನು ಸಿಡಿಸಿ, ಮನುಷ್ಯ ಮೆಟ್ಟಿ ಬೀಳುವನು. ಇವೆಲ್ಲ ಭಯದ ಕೆಲಸ; ವ್ಯಕ್ತಿಯನ್ನು ಅಪಾಯದಿಂದ ದೂರು ಮಾಡಿ ಸುರಕ್ಷಿತವಾಗಿರಿಸಲು ಭಯ ಮಾಡಿದ ಸಹಾಯ.

ಭಯವಿಲ್ಲದಿದ್ದರೆ ಮನುಷ್ಯ ಸಮಾಜಜೀವಿಯಾಗುತ್ತಲೇ ಇರಲಿಲ್ಲ. ಕ್ರೂರ ಪ್ರಾಣಿಗಳನ್ನು ಎದುರಿಸಿ ಪೂರ್ವಕಾಲದ ಒಬ್ಬನೇ ಮನುಷ್ಯ ಹೋರಾಡಲು ಶಕ್ಯವಿದ್ದಿಲ್ಲ. ಅವನಿಗೆ ನೈಸರ್ಗಿಕವಾದ ಆಯುಧವಾದರೂ ಏನಿತ್ತು ? ಈ ಸಂಕಟಕಾಲದಲ್ಲಿ ಅವನು ಗುಂಪುಕಟ್ಟಿ ಸಾಂಘಿಕ ಶಕ್ತಿಯಿಂದ ಹೋರಾಡಿದ. ಮನುಷ್ಯನ ಜೀವನಕ್ರಮದಲ್ಲಿ ಎಷ್ಟೋ ಸುಧಾರಣೆಗಳಾಗಿದ್ದರೂ ಇಂದಿಗೂ ಅವನ ಜೀವನಕ್ಕೆ ಗಂಡಾಂತರವಿಲ್ಲದಿಲ್ಲ. ಅದಕ್ಕೆಂದೇ ಇಂದಿಗೂ ಸಂಘ ಸಂಸ್ಥೆಗಳು ಬಾಳಿವೆ.

ಸಂಘ ಅಥವಾ ಸಂಸ್ಥೆಯೆಂದರೆ ಯಾವುದಾದರೂ ಉದ್ದೇಶಕ್ಕಾಗಿ ಕೂಡಿಸಲಾದ ಗುಂಪು. ರಾಷ್ಟ್ರ, ಸಹಕಾರೀ ಸಂಘ, ವಿದ್ಯಾಸಂಸ್ಥೆ ಇವು ಒಂದೊಂದು ತರದ ಸಂಘಗಳೇ ಆಗಿವೆ.

ರಾಷ್ಟ್ರವೆಂಬ ಸಂಸ್ಥೆಯು ಒಳಗಿನ ಅಥವಾ ಹೊರಗಿನ ವೈರಿಗಳಿಂದ ಪ್ರಜೆಗಳನ್ನು ರಕ್ಷಿಸುವ ಉದ್ದೇಶವುಳ್ಳದ್ದಾಗಿದೆ. ನಮಗೆ ಬೇರೆಯವರಿಂದ ಅಪಾಯವಿದೆ ಎಂಬ ಹೆದರಿಕೆಯೇ ಕೋಶ, ದುರ್ಗ, ವಿವಿಧ ಬಲ ಇವುಗಳ ಸಹಾಯದಿಂದ ರಾಷ್ಟ್ರವನ್ನು ಸಂಘಟಿಸಲು ಕಾರಣವಾಯಿತು. ಪರಪೀಡನೆಯ ಭೀತಿಯನ್ನು ನಿವಾರಿಸಿಕೊಳ್ಳಲೆಂದು ಜಗತ್ತಿನ ಜನಾಂಗಗಳೆಲ್ಲ ತಮ್ಮ ತಮ್ಮ ಸಂಘಟಿತ ಸಂಸ್ಥೆಗಳನ್ನು ಕಟ್ಟಿಕೊಂಡಿವೆ. ಅದರಿಂದಲೇ ಅನೇಕ ರಾಷ್ಟ್ರಗಳು ಹುಟ್ಟಿಕೊಂಡಿವೆ. ಈ ರಾಷ್ಟ್ರಗಳು ಇಲ್ಲದಿರುತ್ತಿದ್ದರೆ ಮನುಷ್ಯ ಜೀವನವೆಲ್ಲ ಅವ್ಯವಸ್ಥಿತವಾಗುತ್ತಿತ್ತು. ಪ್ರತಿಯೊಬ್ಬನ ಪ್ರಾಣ-ಧನಗಳು ಅರಕ್ಷಿತವಾಗುತ್ತಿದ್ದವು. ಇಲ್ಲದೆ ಮನುಷ್ಯನು ಇಷ್ಟು ಪ್ರಗತಿಯನ್ನು ಸಾಧಿಸಲಾಗುತ್ತಿರಲಿಲ್ಲ.

ಹೀಗೆ ಭಯವು ಮನುಷ್ಯನನ್ನು ರಚನಾತ್ಮಕವಾಗಿ ಪ್ರಗತಿಗೊಳಿಸಿದ್ದರೆ ಇನ್ನೊಂದು ಕಡೆ

ಯಿಂದ ಅದು ವಿನಾಶದತ್ತವೂ ದಾರಿ ತೋರಿಸದೆ ಇಲ್ಲ. ಪರರಾಷ್ಟ್ರಗಳ ಹೆದರಿಕೆ ಹೆಚ್ಚಿದಂತೆ ಸೈನ್ಯ ಶೇಖರಣೆ ಬೆಳೆಯುವುದು. ಸೈನ್ಯವೆಚ್ಚ ಹೆಚ್ಚಿದಂತೆ ತ್ವೇಷವೂ ಮೀರುತ್ತ ಹೋಗುವುದು. ಇದರ ಪರಿಣಾಮ ವೈರಿರಾಷ್ಟ್ರದೊಡನೆ ಯುದ್ಧ; ಯುದ್ಧದಿಂದ ಹಾನಿ—ಎಂದರೆ ವಿನಾಶ. ಇದು ಮಾನವನಿಗೆ ಭಯವು ತೋರಿಸಿದ ಎರಡನೆಯ ದಾರಿ. ಇಂದು ಇಜಿಪ್ತದಲ್ಲಿ ನಡೆಯುತ್ತಿರುವುದು ಭಯ ತೋರಿದ ಈ ದಾರಿಯಲ್ಲಿ ಸಾಗಿದ ಫಲ.

ವ್ಯಾಪಾರೀ ಸ್ಪರ್ಧೆಯ ಭಯದಿಂದ ಸಹಕಾರೀ ಸಂಘ ಹುಟ್ಟಿತು. ವ್ಯಾಪಾರಸ್ಥರು ಹೆಚ್ಚು ಲಾಭ ತೆಗೆದುಕೊಳ್ಳುವುದರಿಂದ ವಸ್ತುಗಳನ್ನು ತಯಾರಿಸುವವರು ಮತ್ತು ಉಪಯೋಗಿಸುವವರಿಗೆ ಹೆಚ್ಚು ನಷ್ಟವಾಗುತ್ತದೆ. ಆ ಪ್ರಯೋಜನವನ್ನು ಮಧ್ಯವರ್ತಿಯೊಬ್ಬ—ವ್ಯಾಪಾರಿ ಪಡೆಯಬಾರದೆಂದು ಸಹಕಾರೀ ಸಂಘಟನೆಗಳಾಗುವವು. ಈ ಅಂಜಿಕೆಯು ಹೆಚ್ಚಾದರೆ ವಿಘಾತಕವಾಗದಿರದು.

ಅಜ್ಞಾನದ ಅಪ್ರಿಯ ಪರಿಣಾಮಗಳ ಹೆದರಿಕೆಯಿಂದ ವಿದ್ಯಾಸಂಸ್ಥೆಗಳು ಹುಟ್ಟಿದವು. ಈ ಹೆದರಿಕೆ ಹೆಚ್ಚಿತಾದರೆ "ನಾವು ಹೇಳುವದೇ ಜ್ಞಾನ ಇತರರು ಹೇಳುವುದು ಅಜ್ಞಾನ" ಎಂಬ ಭಾವನೆ ಮೂಡುವುದು. ಇಂಥ ಕಾರಣದಿಂದ ವಿದ್ಯಾಸಂಸ್ಥೆಗಳಲ್ಲಿ ಅನಾರೋಗ್ಯಕರವಾದ ಸ್ಪರ್ಧೆಗಳೇಳುವದನ್ನು ಎಷ್ಟೋ ಸಲ ನೋಡುತ್ತೇವೆ.

ಭಯವು ವ್ಯಕ್ತಿಜೀವನಕ್ಕೆ ರಚನಾತ್ಮಕವಾಗಿ ಮಾರ್ಗದರ್ಶನ ಮಾಡಿದರೆ ವ್ಯಕ್ತಿಯು ಸಮಾಜದ ಅಂಗವಾಗಿ ಸುಗಮ ಜೀವನದ ಕಲೆಯನ್ನು ಅಭ್ಯಾಸ ಮಾಡುವನು; ವಿನಾಶದತ್ತ ದಾರಿ ತೋರಿದರೆ ಬಡಿದಾಡಲು ಕಲಿಯುವನು. ಭಯವಿಲ್ಲದಿದ್ದರೆ ನಾವು ನಮ್ಮ ಜೀವನವನ್ನೇ ಅಪಾಯದ ದವಡೆಗೆ ತಳ್ಳುತ್ತಿದ್ದೆವು. ಹುಲಿ ಬಂದಾಗ ಓಡಲು ಪ್ರೇರಿಪಿಸುವುದು ಭಯ; ಓಡದಿದ್ದರೆ ಅಪಾಯ. ಮೋಟರು ಬರುವಾಗ ಬದಿಗೆ ಸರಿಸುವುದು ಭಯ; ಬದಿಗೆ ಸರಿಯದಿದ್ದರೆ ಅಪಾಯ. ಪೂರ ಬಂದಾಗ ಅಡ್ಡ ಹಾಯದಂತೆ ಮಾಡುವುದು ಭಯ; ಅಡ್ಡ ಹಾಯುವುದು ಅಪಾಯ.

ಹೆದರಿಕೆಯಾದಾಗ ಮಲಮೂತ್ರ ವಿಸರ್ಜನೆಯಾಗುವ ಪ್ರಸಂಗವಿದ್ದರೆ ಅದೂ ವ್ಯಕ್ತಿಯ ಸುರಕ್ಷಿತತೆಗೆ ಅನುಕೂಲವಾಗಿಯೇ ಸರಿ. ಅಂಥ ಸಂದರ್ಭಗಳಲ್ಲಿ ಓಡಿಹೋಗದೆ ಬೇರೆ ರಕ್ಷಣೋಪಾಯ ಇಲ್ಲ. ದೇಹಭಾರ ಅದಕ್ಕೆ ಆತಂಕ. ಮಲಮೂತ್ರ ವಿಸರ್ಜನೆ ಈ ಆತಂಕವನ್ನು ನಿವಾರಿಸುವದು. ಆದಿ ಮಾನವನಿಗೆ ಈ ಅನು

## ಸಪ್ತ ಸಾಮಾಜಿಕ ಸೂತ್ರಗಳು

೧. ಹಟವಾದಿಯೊಡನೆ ಹೆಚ್ಚು ಚರ್ಚಿಸಿ ಉಪಯೋಗವಿಲ್ಲ. ಅದರಿಂದ ಮಾತಿನ ವಿಷಯ ಬದಲಾಯಿಸುವುದೊಳ್ಳೆಯದು.

೨. ಬೇರೆ ಬೇರೆ ಜನರ ವಿಚಾರಗಳು ಬೇರೆ ಬೇರೆಯಾಗಿರುತ್ತವೆಂದು ನಾವು ಸದಾ ನೆನಪಿನಲ್ಲಿಡಬೇಕು.

೩. ನಾವು ತಪ್ಪುಮಾಡಿದಾಗ ನಮ್ಮ ತಪ್ಪನ್ನು ಒಪ್ಪಲು ಹಿಂಜರಿಯಬಾರದು.

೪. ಸ್ವಂತ ವಿಷಯಗಳನ್ನು ವಿನೋದ ದೃಷ್ಟಿಯಿಂದ ನೋಡುವ ಮನೋಭಾವ ಬೇಕು.

೫. ಚಿಂತೆಯಲ್ಲಿದ್ದಾಗ, ಅಸ್ವಸ್ಥರಿದ್ದಾಗ ಭಾವನೆಯ ಒತ್ತಡವನ್ನು ಸಾಧ್ಯವಾದಷ್ಟು ನಿಗ್ರಹಿಸಬೇಕು.

೬. ಬೇರೆಯವರು ಸಿಟ್ಟಿಗೆದ್ದಾಗ ನಾವು ಕ್ಷಮಿಸಲು ತಯಾರಾಗಬೇಕು. ಸಿಟ್ಟು ಮಾಡುವವನು ಸಿಟ್ಟಿಗೆ ಪಾತ್ರನಾಗಿರದೆ ಕರುಣೆಗೆ ಪಾತ್ರನಿರುವನು.

೭. ಎಲ್ಲರನ್ನೂ ಪ್ರೀತಿಸಲು ಸಾಧ್ಯವಾಗದಿದ್ದರೂ ಅವರ ಬಗ್ಗೆ ಆಸ್ಥೆ ವಹಿಸಲು ಪ್ರಯತ್ನಿಸಬೇಕು.

ಕೊಲತೆಯಿಂದ ಸಾಕಷ್ಟು ಪ್ರಯೋಜನ ಇತ್ತು ಎಂದು ಪ್ರಾಣಿಶಾಸ್ತ್ರಿಗಳು ಹೇಳುವರು.

ನಮ್ಮನಿಮ್ಮ ನಡತೆ ಒಳ್ಳೆಯದಾಗಿರಲು ಏನು ಕಾರಣ? ನೀವು ಒಳ್ಳೆ ಬಟ್ಟೆ ಉಟ್ಟು ಸುಂದರ ವೇಷಭೂಷಣ ಧರಿಸಲು ಕಾರಣವಾದರೂ ಏನು? ಜನರು ಏನಂದಾರು ಎಂಬ ಭಯ ವಲ್ಲವೇ? ನಿಮಗಾಗದವನನ್ನು ಭೆಟ್ಟಿಯಾದರೆ, ಎಷ್ಟೋ ವಿನಾಶಕಾರಿ ವಿಚಾರಗಳು ನಿಮ್ಮ ಮನಃಪಟಲದ ಮೇಲೆ ಹಾಯ್ದುಹೋಗುವುವು. ಆದರೂ ನೀವು ಅವನ್ನು ಅದುಮಿ ಹಿಡಿದು ಕೊಂಡು ಅವರೊಡನೆ ಮೃದುವಾಗಿ ಮಾತನಾಡುತ್ತೀರಿ, ಏಕೆ? ನಿಮ್ಮ ವಿಚಾರಗಳ ಪ್ರಕಟಣೆಯಿಂದ ಆಗುವ ಪರಿಣಾಮದ ಬಗೆಗೆ ನಿಮಗಿರುವ ಹೆದರಿಕೆಯೇ ಇದಕ್ಕೆ ಕಾರಣವಲ್ಲವೆ?

ಕೆಲವು ವ್ಯಕ್ತಿಗಳ ಜೀವನದ ಆರಂಭ ದೆಸೆಯಿಂದಲೇ ಅವರಲ್ಲಿ ಭಯದ ಮೊಳಕೆಯಾಗಿರುವುದು; ಬಿತ್ತಿದವರು ತಾಯಿ, ತಂದೆ, ಅಥವಾ ನೆರೆಯುವರಿರಬಹುದು. ಹೀಗೆ ಭಯದ ಬೆಳೆಯ ಹೊಲವಾದ ವ್ಯಕ್ತಿ ಸಮಾಜದೊಡನೆ ಕೂಡಿ ಬಾಳುವುದು ಕಠಿಣವಾಗುವುದು. ತನ್ನ ಮುಂದೆ ಕಾಣಸಿಗುವವರೆಲ್ಲರೂ ತನಗೆ ಆಗದವರು—ಕೇಡು ಬಯಸುವವರು ಎಂದು ಅಂಥವರು ತಿಳಿಯುವರು. ಉಳಿದವರ ಬಗೆಗೆ ಅಸೂಯೆ, ಸಿಟ್ಟು ಮುಂತಾದವು ಅವರ ಸ್ವಭಾವದಲ್ಲಿ ಬೆರೆಯುವವು.

ಅಸೂಯೆ ಮತ್ತು ಸಿಟ್ಟು ಇವು ಭಯದ ವಿಫಲ ಆಯುಧಗಳು. ಇವುಗಳ ಸಹಾಯದಿಂದ ಹೋರಾಡಿ ಭಯನಿವಾರಣೆಯಂತೂ ಶಕ್ಯವಿಲ್ಲ; ಅಲ್ಲದೆ ಭಯಕಾರಣವೇ ಹೆಚ್ಚುವುದು.

ಪೂರ್ಣ ನಿರ್ಭೀತನಾಗಿರುವಾತನು ಸಮಾಜ ಜೀವಿಯಾಗಲಾರ. ಭಯ ಬೇಕೇಬೇಕು. ಅದು ವಿನಾಶದ ದಾರಿಗೆ ನಮನಿಮಗೆ ದೀಪವಾಗಿರದೆ ರಚನಾತ್ಮಕ ಹಾದಿಯಲ್ಲಷ್ಟೇಬೆಳಕು ಬೀರಬೇಕು. ಏಕೆಂದರೆ ಈ ಬೆಳಕು ಇಂದು ಮಾನವನ ಸುಸ್ಥಿತಿಗೆ ಕಾರಣವಾಗಿದೆ.



## ಅಳುಬುರುಕರಿಗೆ ಆಹ್ವಾನ

ತನ್ನ ಮಗಳು ಸಾಮಾನ್ಯನೊಬ್ಬನೊಡನೆ ನೃತ್ಯ ಮಾಡುತ್ತಿರುವುದನ್ನು ನೋಡಿ ವರ್ನೆ ಪೆಂಡಸ್ಕಿಗೆ ಸಹಿಸಲಾಗಲಿಲ್ಲ. ಅವನು ಕಣ್ಣೀರು ಹಾಕಿ ಅಳತೊಡಗಿದ. ಹತ್ತು ನಿಮಿಷ ಕಳೆದರೂ ಅವನ ಅಳು ನಿಲ್ಲಲಿಲ್ಲ. ತಲೆಗೆ ನೀರು ಹಾಕಿ ತಟ್ಟಿ ಅವನನ್ನು ಸಮಾಧಾನ ಪಡಿಸುವ ಪ್ರಯತ್ನವೂ ವಿಫಲವಾಯಿತು.

ಒಂದು ಗಂಟೆಯಾದ ಮೇಲೆ ಡಾಕ್ಟರರನ್ನುಕರೆಯಲಾಯಿತು. ಆದರೂ ವರ್ನೆಯ ಅಳು ನಿಲ್ಲಲಿಲ್ಲ; ಮತ್ತು ಅವನ ಕಣ್ಣುಗಳಿಂದ ನೀರು ಪಟಪಟನೆ ಉದುರುತ್ತಿದ್ದವು. ಮೂರು ಗಂಟೆ ಕಳೆದ ಮೇಲೆ ಅವನ ಅಶ್ರುಧಾರಾವರ್ಷ ತಟಪಟ ಹನಿಯುಪ್ಪನಾಗುವಲ್ಲಿಗೆ ಬಂದಿತ್ತು. ಹೀಗೆ ಅಳುತ್ತ ವರ್ನೆ ೩ ಚಟಾಕು ಕಂಬನಿ ಸುರಿಸಿ ಅಳುವುದರಲ್ಲಿ ವಿಶ್ವವಿಖ್ಯಾತನಾದನು. ಇನ್ನೂ ಹೆಚ್ಚು ಕಾಲ ಅತ್ತು ಈ ವಿಶ್ವಖ್ಯಾತಿಯನ್ನು ಯಾರು ಅಪಹರಿಸಬಲ್ಲರು? ಅಂಥ ಅಳುಬುರುಕರಿಗೆ ಇದೊಂದು ಆಹ್ವಾನ!

—"ಯುವರ್ ಹೆಲ್ತ್"



# ಬೆರಳಿನ ಗುರುತಿಗೆ ಅಪೀಲಿಲ್ಲ!

ಆಕ್ಸಫರ್ಡ ಬಳಿ ಇರುವ ಡಾರ್ಚೆಸ್ಟರ ದಲ್ಲಿದ್ದ ನಮ್ಮ ಮನೆಯಲ್ಲಿ ಈಗ ೪೩ ವರ್ಷ ಗಳ ಹಿಂದೆ ಒಂದು ರಾತ್ರಿ ನಾವೆಲ್ಲ ಅಗ್ಗಿಷ್ಟಿಕೆಯ ಮುಂದೆ ಕುಳಿತಿದ್ದೆವು. ಹೊರಗೆ ಗಾಳಿ-ಮಳೆಗಳ ಅಟ್ಟಹಾಸ ನಡೆದಿತ್ತು.

ನಾನು ಪತ್ತೇದಾರಿ ಪುಸ್ತಕವೊಂದನ್ನು ಓದುವದರಲ್ಲಿ ತಲ್ಲೀನನಾಗಿದ್ದೆ. ಅಂಥ ಭೀಕರ ಮಳೆ ಗಾಳಿಯ ರಾತ್ರಿಯಲ್ಲಿ ಯಾರೂ ಮನೆಯಿಂದ ಹೊರಬೀಳುವದು ಅಸಾಧ್ಯವಾಗಿತ್ತು. ಆದರೆ ಅಂಥ ಹೊತ್ತಿನಲ್ಲಿ ಕೂಡ ಯಾರೋ ನಮ್ಮ ಮನೆಯ ಬಾಗಿಲು ತಟ್ಟಿದರು. ನಾನೆದ್ದು ಬಾಗಿಲು ತೆರೆದೆ.

ಬಂದವಳು ನಮ್ಮೂರ ಗಿರಣಿ ಮಾಲಕನ ಹೆಂಡತಿಯಾಗಿದ್ದಳು. ಅವಳು ನನ್ನ ತಂದೆಯನ್ನು ಕುರಿತು '' ನನ್ನ ಗಂಡ ೧೫ ದಿನಗಳಿಂದಲೂ ಹಾಸಿಗೆ ಹಿಡಿದು ಮಲಗಿದ್ದಾನೆ. ಬಹಳಷ್ಟು ಕಾಳನ್ನು ಬೀಸಿಕೊಡಬೇಕಾಗಿದೆ. ಜನರ ತಗಾದೆ ಹೆಚ್ಚಿದೆ. ನಿಮ್ಮ ಹತ್ತರ ಬಂದರೆ ಕೆಲಸವಾದೀತು ಎಂದು ಗಂಡ ಹೇಳಿದ್ದರಿಂದ ಬಂದಿದ್ದೇನೆ. ನಿಮ್ಮನ್ನು ಬಿಟ್ಟರೆ ನನಗೆ ಸಹಾಯ ಮಾಡುವವರು ಯಾರೂ ಇಲ್ಲ '' ಎಂದಳು.

ನನ್ನ ತಂದೆ ತಟ್ಟನೆ ಎದ್ದು ನಿಂತು " ಫ್ರೆಡ್, ಏಳು ಹೋಗೋಣ " ಎಂದರು.

ನಾವಿಬ್ಬರೂ ಹೊರಟೆವು. ನಾಲ್ಕು ಮಾರು ಹೋಗುವದರೊಳಗೆ ನಮ್ಮ ಮೈಯೆಲ್ಲ ತೊಯ್ದು ಹೋಯಿತು. ಗಾಳಿಯ ರಭಸಕ್ಕೆ ನಾವೆಲ್ಲಿ ಹಾರಿಹೋಗುತ್ತೇವೋ ಎನಿಸುತ್ತಿತ್ತು.

ತಂದೆ ಗಿರಣಿಯನ್ನು ಚಾಲು ಮಾಡಿದರು.

ಗಿರಣಿಯ ನೆಲಕ್ಕೆ ಹಾಸಿದ ಒಂದು ಮರದ ಹಲಗೆಯನ್ನು ತಂದೆ ಎತ್ತಿದರು. ಅದರ ಬುಡದಲ್ಲಿ ಬಾವಿಯೊಂದಿತ್ತು. "ಇದರಲ್ಲಿ ಹಾವುಮೀನುಗಳು ಬಂದಿರಬೇಕು. ಕೆಲವನ್ನು ಹಿಡಿದು ಮನೆಗೊಯ್ಯೋಣ. ಒಳ್ಳೆಯ ಅಡಿಗೆಯಾದೀತು " ಎನ್ನುತ್ತ ತಂದೆ ಬಾವಿಯನ್ನು ಒಂದು ಸಲಾಕೆಯಿಂದ ಕದಡಿದರು. ಮತ್ತೆ ಮರುಕ್ಷಣದಲ್ಲಿ ಒಂದು ಹಾವುಮೀನನ್ನು ನನ್ನ ಕಾಲ ಬಳಿ ಎಸೆಯುತ್ತ '' ಹಿಡಿ ಅದನ್ನು, ಒಂದು ಚೀಲದಲ್ಲಿ ತುಂಬು '' ಎಂದರು.

ತಂದೆ ಎಸೆಯುತ್ತಿದ್ದ ಹಾವುಮೀನುಗಳನ್ನು ಹಿಡಿದು ನಾನು ಚೀಲದಲ್ಲಿ ತುಂಬುತ್ತಿದ್ದಂತೆ ನನ್ನ ಕೈಗಳೆಲ್ಲ ಜಿಗುಟಾದವು.

ಅಷ್ಟರಲ್ಲಿ ಒಮ್ಮಿಂದೊಮ್ಮೆ ಗುಡುಗಿನ ಆರ್ಭಟ ವಾಯಿತು. ಗಿರಣಿಯ ಕಟ್ಟಡವೇ ಕುಸಿದು ಬೀಳುತ್ತಿರುವಂತೆ ಅನಿಸಿತು. ನಾನು ಗಾಬರಿ ಯಾಗಿ ಸಮೀಪದಲ್ಲಿದ್ದ ಕಟ್ಟಿಗೆಯ ಹಲಗೆ

ಫ್ರೆಡ್ ಚೆರಿಲ್ ಅವರ ಪುಸ್ತಕದಿಂದ

ಯನ್ನು ಹಿಡಿದುಕೊಂಡೆ.

ನನ್ನ ತಂದೆ ಏನೋ ಹೇಳಿದರು. ಆದರೆ ನನಗದು ಸ್ಪಷ್ಟವಾಗಲಿಲ್ಲ. ಕಟ್ಟಿಗೆಯ ಹಲಗೆಯ ಮೇಲೆ ಮೂಡಿದ್ದ ನನ್ನ ಬೆರಳುಮುದ್ರೆಗಳನ್ನು ನಾನು ಆಶ್ಚರ್ಯಾತಿರೇಕದಿಂದ ನೋಡುವದರಲ್ಲಿ ಮಗ್ನನಾಗಿಹೋಗಿದ್ದೆ.

ನಾನು ಕಂದೀಲಿನ ಬೆಳಕಿನಲ್ಲಿ ಆ ಮುದ್ರೆಗಳನ್ನು ನಿರೀಕ್ಷಿಸಿದೆ. ಅವುಗಳ ಬಗೆಯನ್ನು, ವಿವರವನ್ನೂ ಪರೀಕ್ಷಿಸಿದೆ.

ನಾನೇನು ಮಾಡುತ್ತಿದ್ದೇನೆಂದು ನೋಡಲು ಬಂದ ನನ್ನ ತಂದೆಗೆ, ''ಬೆರಳು ಮುದ್ರೆಗಳು-ನನ್ನವು,'' ಎಂದೆ.

ಅವರು ನೋಡಿದರು. ಎರಡು ನಿಮಿಷ ಸುಮ್ಮನಿದ್ದು ತುಸು ಗಂಭೀರ, ತುಸು ಹಾಸ್ಯಭಾವದಿಂದ, "ಹಾ! ಇದು ನಿನಗೊಂದು ಶುಭಶಕುನ. ನೀನೊಬ್ಬ ಪತ್ತೇದಾರನಾಗುವಿ. ನೀನು ಕೂಡಾ ಶೆರ್ಲಕ್ ಹೋಮ್ಸನೋ, ಸೆಕ್ಸಟನ್ ಬ್ಲೇಕನೋ ಆಗುವಿ," ಎಂದರು.

* * * *

ಮುಂದೆ ನಾನು ಆಕ್ಸಫರ್ಡ್‌ಕ್ಕೆ ತೆರಳಿ ಅಲ್ಲಿ ಕಲಾಶಾಲೆಯೊಂದರಲ್ಲಿ ಕಲಿಯಲಾರಂಭಿಸಿದೆ. ಆದರೆ ನಾನು ಪತ್ತೇದಾರನಾಗಬೇಕೆಂಬ ಹಂಬಲ ನನ್ನ ಮನಸ್ಸಿನಲ್ಲಿ ಸದಾ ಕೊರೆಯುತ್ತಿತ್ತು.

ಈ ಸಮಯದಲ್ಲಿ ನನ್ನ ಆರೋಗ್ಯ ಕೆಟ್ಟಿತು. ಶಸ್ತ್ರ ಚಿಕಿತ್ಸೆಗಾಗಿ ನನ್ನನ್ನು ಆಸ್ಪತ್ರೆಗೆ ಕಳಿಸಿದರು. ಅಲ್ಲಿ ನಾನಿದ್ದಾಗ ನನ್ನ ಮಗ್ಗಲಿನ ಹಾಸಿಗೆಗೆ ಬಂದ ಓರ್ವನು ಲಂಡನ್ನಿನಲ್ಲಿ ಮೊದಲು ಪೋಲೀಸನಾಗಿದ್ದನು. ಆತ ನನಗೆ ಪೋಲೀಸ ಜೀವನದ ಅದ್ಭುತರಮ್ಯತೆಯನ್ನು ವರ್ಣಿಸಿ ಹೇಳಿದನು.

ಅವನ ಮಾತುಗಳಿಂದ ಪೋಲೀಸ ಪಡೆಯನ್ನು ಸೇರಬೇಕೆಂಬ ನನ್ನ ಆಕಾಂಕ್ಷೆ ಇನ್ನಿಷ್ಟು ಪ್ರಬಲವಾಯಿತು.

ನಾನು ನಿರ್ಧಾರ ಮಾಡಿದೆ, ನಾನು ಗುಪ್ತ ಪೋಲೀಸನಾಗಲೇಬೇಕೆಂದು. ಇಷ್ಟೇ ಅಲ್ಲ, ಪೋಲೀಸನಾದ ಬಳಿಕ ಸ್ಕಾಟಲಂಡಯಾರ್ಡಿನ ಬೆರಳುಮುದ್ರೆ ನಿರೀಕ್ಷಕರ ತಂಡಕ್ಕೆ ಸೇರಿಕೊಳ್ಳಬೇಕು ಎಂದೂ ನಿರ್ಧರಿಸಿದೆ.

"ನಾನು ನನ್ನನ್ನು ಕಾಣಲು ಬರುತ್ತಿದ್ದ ಓರ್ವ ಮಿತ್ರನನ್ನು ಕಾಡಿ ಅವನಿಂದ ಸರ್ ಎಡ್ವರ್ಡ ಹೆನ್ರಿಯವರ "ಬೆರಳುಮುದ್ರೆಗಳ ವರ್ಗೀಕರಣ ಮತ್ತು ಉಪಯೋಗ'' ಎಂಬ ಪುಸ್ತಕವನು ತರಿಸಿಕೊಂಡೆ.

ಪುಸ್ತಕ ಸಿಕ್ಕ ಬಳಿಕ ಅದರ ಅಭ್ಯಾಸದಲ್ಲಿ ಮಗ್ನನಾದೆ. ಅದರಲ್ಲಿಯ ಸೂಕ್ಷ್ಮಗಳೆಲ್ಲ ನನಗೆ ಪೂರ್ಣ ಅರ್ಥವಾಗದಿದ್ದರೂ ಪುಸ್ತಕವು ಕಂಠಪಾಠವಾಗುವ ವರೆಗೂ ನಾನು ಅದನ್ನು ಓದಿದೆ.

ಪೂರ್ತಿ ನೆಟ್ಟಗಾದ ಬಳಿಕ ೧೯೧೪ ರಲ್ಲಿ ನಾನು ಪೋಲೀಸ ಕಾನಸ್ಟೇಬಲನಾದೆ.

೧೯೨೦ ರಲ್ಲಿ ನನಗೆ ನನ್ನ ಆಕಾಂಕ್ಷೆಯನ್ನು ಈಡೇರಿಸಿಕೊಳ್ಳಲು ಸಹಾಯಕವಾದ ಎರಡು ಅವಕಾಶಗಳು ದೊರೆತವು. ನನ್ನನ್ನು ಅಪರಾಧ ಸಂಶೋಧನೆಯ ಶಾಖೆಗೆ ಆರಿಸಿದರು. ಅದೇ ವೇಳೆಗೆ ಬೆರಳು ಮುದ್ರೆ ಕಾರ್ಯಾಲಯದಲ್ಲೂ ಒಂದು ಸ್ಥಳ ಖಾಲಿಯಾಯಿತು. ಯಾವುದನ್ನು ಸೇರಿಕೊಳ್ಳಬೇಕು ಎಂದು ಗೊಂದಲದಲ್ಲಿ ಬಿದ್ದೆ. ಕೊನೆಗೆ ಬೆರಳುಮುದ್ರೆ ಕಾರ್ಯಾಲಯದ ಕೆಲಸವನ್ನೇ ಒಪ್ಪಿಕೊಂಡೆ.

* * * *

೧೯೨೮ರ ವರೆಗೂ ನಾನು ಪತ್ತೇದಾರಿ ಸಾರ್ಜಂಟನಾಗಿಯೆ ಇದ್ದೆ. ಆ ವರ್ಷ ಮೆಂಚೆಸ್ಟರದಲ್ಲಿ ಒಂದೇ ಸವನೆ ಹಲವಾರು ಕಚೇರಿಗಳಲ್ಲಿ ಕಳವಿನ ಪ್ರಕರಣ ಸಂಭವಿಸಿದವು.

ಮೆಂಚೆಸ್ಟರಿನ ಒಂದು ಬೀದಿಯಲ್ಲಿಯ ಒಂದು ಅಂಗಡಿಯಲ್ಲಿ ಕಳ್ಳನು ನೀರಿನ ಕೊಳವೆಯನ್ನು ಏರಿ ಮಾಡಿನ ಮೇಲೆ ಹೋಗಿ ಕಿಡಕಿಯನ್ನು ಮುರಿದು ಒಳ ಹೊಕ್ಕಿದ್ದನು. ಪೋಲೀಸರು ಹೋದಾಗ ಅಂಗಡಿಯ ಸಾಮಾನುಗಳೆಲ್ಲ ಚಲ್ಲಾಪಿಲ್ಲಿಯಾಗಿದ್ದವು. ಆದರೆ ಕಿಡಕಿಯ ಒಡೆದ ಕನ್ನಡಿಗಳ ಚೂರುಗಳಲ್ಲಿ ಒಂದರ ಮೇಲೆ ಓರ್ವ ಗುಪ್ತ ಪೋಲೀಸನಿಗೆ ಬೆರಳು ಮುದ್ರೆಗಳು ಕಂಡು ಬಂದವು. ಮತ್ತೆ ಅದೇ ಸುಮಾರಿಗೆ ಇನ್ನೂ

ಮೂರು ಸ್ಥಳಗಳಲ್ಲಿ ಕಳವುಗಳು ಸಂಭವಿಸಿದ್ದವು. ಈ ಎಲ್ಲ ಸ್ಥಳಗಳಲ್ಲೂ ಕಿಡಕಿಯ ಕನ್ನಡಿಗಳ ಚೂರಿನ ಮೇಲೆ ಬೆರಳು ಮುದ್ರೆಗಳು ಕಂಡುಬಂದವು.

ಈ ಬೆರಳು ಮುದ್ರೆಗಳನ್ನು ಪರೀಕ್ಷಿಸುವ ಕಾರ್ಯ ನನಗೊಪ್ಪಿಸಲ್ಪಟ್ಟಿತು. ಮೊದಲಿನ ಮೂರು ಸ್ಥಳಗಳ ಕಿಡಿಕಿಗಳ ಕನ್ನಡಿ ಚೂರುಗಳ ಮೇಲೆ ಒಂದು ಬೆರಳಿನ ಮುದ್ರೆ ಏಕಪ್ರಕಾರವಾಗಿದ್ದುದು ನನಗೆ ಕಂಡುಬಂತು. ನಾನು ನಮ್ಮ ಕಚೇರಿಯಲ್ಲಿದ್ದ ಬೆರಳು ಮುದ್ರೆ ಪುಸ್ತಕವನ್ನು ತೆರೆದು ಹುಡುಕಿದೆ. ಕನ್ನಡಿ ಚೂರಿನ ಮೇಲಿನ ಬೆರಳು ಮುದ್ರೆಯಂತೆಯೆ ಇದ್ದ ಮುದ್ರೆಯೊಂದು ನನಗೆ ಪುಸ್ತಕದಲ್ಲಿ ಸಿಕ್ಕಿತು.

ಈ ಮುದ್ರೆ ವಿಲಿಯಂ ವೆಗಸ್ಟಾಫ ಎಂಬಾತನದಾಗಿತ್ತು. ಈತ ಪ್ರಖ್ಯಾತ ಕಳ್ಳನಾಗಿದ್ದ. ಆದರೆ ಸದ್ಯದ ಅಪರಾಧಗಳ ಬಗ್ಗೆ ಅವನ ಮೇಲೆ ಯಾರೂ ಸಂಶಯ ತೆಗೆದುಕೊಂಡಿರಲಿಲ್ಲ. ಏಕೆಂದರೆ ಆಗ ಆತ ಲಂಡನ್ನಿನಲ್ಲಿದ್ದು ಪ್ರತಿನಿತ್ಯ ಪೋಲೀಸ ಕಚೇರಿಗೆ ಹಾಜರಿ ಕೊಡುತ್ತಿದ್ದ.

ಆದರೆ ಬೆರಳು ಮುದ್ರೆಯ ಸಾಕ್ಷಿಯಿಂದ ವೆಗಸ್ಟಾಫನ ಅಪರಾಧ ಸಿದ್ಧವಾಯಿತು. ಆತ ಸಂಜೆ ಮ್ಯಾಂಚೆಸ್ಟರಕ್ಕೆ ಬಂದು ಕನ್ನ ಹೊಡೆದು ಮರುದಿನ ಬೆಳಗಾಗುವದರೊಳಗಾಗಿ ಲಂಡನ್ನಿಗೆ ಮರಳಿ ಪೋಲೀಸ ಕಚೇರಿಗೆ ಹೋಗಿ ಹಾಜರಿ ಕೊಟ್ಟು ಬರುತ್ತಿದ್ದ. ಹೀಗಾಗಿ ಅವನ ಮೇಲೆ ಸಂಶಯವೇ ಬಂದಿರಲಿಲ್ಲ.

ಈ ಪ್ರಕರಣದ ಬಗ್ಗೆ ನಾನು ಯಾವಾಗಲೂ ಹೆಮ್ಮೆಪಟ್ಟುಕೊಂಡಿದ್ದೇನೆ. ಏಕೆಂದರೆ ನನ್ನ ಕಾರ್ಯಕ್ಕಾಗಿ ನನಗೆ ಮೊಟ್ಟಮೊದಲು ಪ್ರಶಂಸ ದೊರೆತದ್ದು ಈ ಪ್ರಕರಣದಲ್ಲಿಯೇ.

ಬೆರಳು ಮುದ್ರೆಯ ಗುರುತಿನ ಬಲದಿಂದ ಮಿಡಲ್‌ಟನ್ ಎಂಬಾತನನ್ನು ಒಂದು ಕಳವಿನ ಪ್ರಕರಣದಲ್ಲಿ ವಿಚಾರಣೆಗೆ ಗುರಿಪಡಿಸಿದಾಗ ಆತ ನನಗೆ ಪ್ರಶ್ನೆ ಹಾಕಿದ :

"ಹತ್ತು ಲಕ್ಷ ಬೆರಳು ಮುದ್ರೆಗಳಲ್ಲಿ ಒಂದೇ ಬಗೆಯವು ಎಷ್ಟು ಇರುತ್ತವೆ?''

''ಬೇರೆ ಬೇರೆ ಬೆರಳುಗಳ ಮುದ್ರೆಗಳನ್ನು ತೆಗೆದುಕೊಂಡಿದ್ದರೆ ಒಂದೇ ಬಗೆಯ ಮುದ್ರೆಗಳು ಕಂಡುಬರುವದೇ ಇಲ್ಲ.''

"ಪ್ರಪಂಚದಲ್ಲಿ ಒಂದೇ ತರದ ಎರಡು ಬೆರಳು ಮುದ್ರೆಗಳಿಲ್ಲವೇ ಇಲ್ಲ?"

"ಇಲ್ಲ. ಒಬ್ಬನ ಬೆರಳು ಮುದ್ರೆಯಂತೆ ಇನ್ನೊಬ್ಬನದು ಪ್ರಪಂಚದಲ್ಲಿ ಎಂದೂ ಇರುವದಿಲ್ಲ"

''ಕಾಗದದಲ್ಲಿ ತೆಗೆದುಕೊಂಡ ಬೆರಳುಮುದ್ರೆಯನ್ನು ಕಿಡಿಕಿಯ ಮೇಲೆ ಅಚ್ಚೊತ್ತಲು ಬರುವದಿಲ್ಲವೆ?"

''ಅಸಾಧ್ಯ.''

ಆರೋಪಿಗಳಾಗಲಿ, ಅವರ ವಕೀಲರಾಗಲಿ ಇಂಥ ಪ್ರಶ್ನೆಗಳನ್ನು ಹಾಕುವದು ಸ್ವಾಭಾವಿಕವಾದರೂ ಅವುಗಳಿಂದ ಹೆಚ್ಚು ಪ್ರಯೋಜನವಾಗುವದಿಲ್ಲ. ಗುರುತು ಹಿಡಿಯುವ ಸಾಧನಗಳಲ್ಲಿ ಬೆರಳುಮುದ್ರೆಯಷ್ಟು ಖಂಡಿತವಾಗಿ ಗುರುತು ಕೊಡುವ ಸಾಧನ ಇನ್ನಾವುದೂ ಇಲ್ಲ.

ಅವಳಿಜವಳಿ ಮಕ್ಕಳ ಬೆರಳು ಮುದ್ರೆಗಳಲ್ಲಿ ವ್ಯತ್ಯಾಸವಿರುವದೆ?

ಹೌದು.

ನಾನು ನಾನಾ ವಯಸ್ಸಿನ ಅನೇಕ ಅವಳಿ ಮಕ್ಕಳ ಬೆರಳುಮುದ್ರೆಗಳನ್ನು ಪರೀಕ್ಷಿಸಿ ನೋಡಿದ್ದೇನೆ. ರೂಪ, ಸ್ವಭಾವ ಮುಂತಾದ್ದರಲ್ಲಿ ಒಬ್ಬರಿಂದೊಬ್ಬರನ್ನು ಪ್ರತ್ಯೇಕಿಸಲು ಸಾಧ್ಯವಿರದ ಏಕರೂಪ ಅವಳಿ ಮಕ್ಕಳಲ್ಲಿ ಕೂಡ ಬೆರಳು ಮುದ್ರೆಗಳು ಮಾತ್ರ ಒಂದೇ ಬಗೆಯಾಗಿರುವದಿಲ್ಲ.

ಬೆರಳು ಮುದ್ರೆಗಳು ಎಷ್ಟೋ ಸಲ ನಿರಪರಾಧಿಗಳನ್ನು ಸಂಶಯದಿಂದ ಮುಕ್ತಮಾಡುತ್ತವೆ.

ಒಮ್ಮೆ ಲಂಡನ್ ಹಳೇ ಬೇಲಿಕೋರ್ಟಿನಿಂದ ನನಗೆ ಕರೆ ಬಂತು. ಅಲ್ಲಿ ಒಂದು ಸ್ತ್ರೀಮಾನಭಂಗದ ಪ್ರಕರಣದ ವಿಚಾರಣೆ ನಡೆದಿತ್ತು. ಆರೋಪಿಯ ವಕೀಲರು ಫಿರ್ಯಾದಿಗೆ ಹಿಂದೊಮ್ಮೆ ಒಂದು ಉಂಗುರ ಕಳವಿನ ಬಗ್ಗೆ ನಾಲ್ಕು ವರ್ಷ ಶಿಕ್ಷೆಯಾಗಿತ್ತೆಂದು ಒಂದು ಮುದ್ದೆ ಎತ್ತಿದರು.

ಆರೋಪಿ ಅದನ್ನು ನಿರಾಕರಿಸಿದಳು. ಆಧಾರ ೧೯೨೭ ರಲ್ಲಿ ಆ ಪ್ರಕರಣ ಪತ್ತೆ ಹಚ್ಚಿದ ಪೋಲಿ

ಸನೂ ಆ ಕಾಲದಲ್ಲಿ ಉಂಗುರ ಕಳವಿಗಾಗಿ ಸಿಕ್ಕಿ ಬಿದ್ದವಳ ಯಜಮಾನಳಾಗಿದ್ದವಳೂ ಇವಳೇ ಆ ಕಳ್ಳಿಯೆಂದು ಸಾಕ್ಷಿ ಹೇಳಿದರು. ಅವಳ ಹೆಸರೂ ಅದೇ ಇತ್ತು. ಇದರ ನಿರ್ಣಯಕ್ಕಾಗಿ ನನ್ನನ್ನು ಕರೆಸಲಾಗಿತ್ತು.

ನಾನು ಅವಳ ಬೆರಳಿನಮುದ್ರೆ ತೆಗೆದುಕೊಂಡೆ. ನಮ್ಮ ಪುಸ್ತಕ ನೋಡಿದಾಗ ೧೯೨೭ ರ ಉಂಗುರ ಕಳ್ಳಿಯ ಬೆರಳ ಗುರುತಿಗೂ ಇವಳದಕ್ಕೂ ಬಹಳ ಅಂತರವಿತ್ತು. ನಾನು ಕೋರ್ಟಿಗೆ ವರದಿ ಮಾಡಿದೆ.

ಈ ಪ್ರಕಾರ ರೂಪಸಾಮ್ಯ, ನಾಮಸಾಮ್ಯಗಳಿಂದ ಇಬ್ಬರು ವಿಶ್ವಸನೀಯ ವ್ಯಕ್ತಿಗಳು ತಪ್ಪು ಸಾಕ್ಷಿ ಹೇಳುವಂತಾದರೂ ಬೆರಳಿನ ಗುರುತು ಈ ನಿರಪರಾಧಿನಿಯನ್ನು ದೋಷಮುಕ್ತಳಾಗಿ ಮಾಡಿತು.

ಒಮ್ಮೆ ಡಾರ್ಕಿಂಗದ ಬಳಿಯಲ್ಲಿ ಇಟಲಿಯ ಸರ್ವಾಧಿಕಾರಿ ಮುಸೋಲಿನಿಯನ್ನು ಹೋಲುತ್ತಿದ್ದ ಮನುಷ್ಯನೊಬ್ಬನು ಮುಗ್ಗರಿಸುತ್ತ ನಡೆದಿದ್ದು ಕಂಡುಬಂದಿತು. ಅವನನ್ನು ಕೂಡಲೆ ಆಸ್ಪತ್ರೆಗೆ ಸಾಗಿಸಿದರು. ಆತ ಉರುಲು ಹಾಕಿಕೊಂಡು ಸಾಯಲು ಪ್ರಯತ್ನಿಸಿದ್ದನೆಂಬುದು ಅವನ ಕುತ್ತಿಗೆಯ ಮೇಲಿನ ಹಗ್ಗದ ಗುರುತುಗಳಿಂದ ಕಾಣುತ್ತಿತ್ತು. ಅವನ ಕಿಸೆಯಲ್ಲಿ ಒಂದು ಹಗ್ಗವೂ ಇತ್ತು.

ಆ ಮನುಷ್ಯನ ಹತ್ತಿರ ಅವನ ಹೆಸರು, ಊರು ತಿಳಿಸುವ ಯಾವ ವಸ್ತುವೂ ಇರಲಿಲ್ಲ. ಆತ ಕೂಡ ತನ್ನ ಬಗ್ಗೆ ಏನೂ ಹೇಳಲಿಲ್ಲ. ಅವನ ಬೆರಳು ಮುದ್ರೆಗಳನ್ನು ತೆಗೆದುಕೊಳ್ಳಲಾಯಿತು. ಆದರೆ ನಮ್ಮ ಪುಸ್ತಕದಲ್ಲಿ ಅವನ ಬೆರಳು ಮುದ್ರೆಗಳಿರಲಿಲ್ಲ. ಆ ಮನುಷ್ಯ ಅಜ್ಞಾತನಾಗಿ ಸತ್ತ. ಅವನ ಹೆಣವನ್ನು ಒಯ್ಯಲು ಕೂಡ ಯಾರೂ ಬರಲಿಲ್ಲ.

ಅನೇಕ ದಿನಗಳ ವರೆಗೆ ಪತ್ರಿಕೆಗಳಲ್ಲಿ ಅವನ ವರ್ಣನೆ ಕೊಟ್ಟದ್ದಾಯಿತು. ಏನೂ ಪತ್ತೆಯಾಗಲಿಲ್ಲ.

ಆರು ವಾರಗಳು ಕಳೆದವು. ಪೆಕ್‌ಹ್ಯಾಮದಲ್ಲಿ ವಾಸಿಸುತ್ತಿದ್ದ ಮೇರಿ ಗಾಲಬ್ರೇಥ ಎಂಬಾಕೆ ಈ ಅವಧಿಯಲ್ಲಿ ತನ್ನ ಗಂಡ ಮನೆಗೇಕೆ ಬರಲಿಲ್ಲ ಎಂದು ಚಿಂತಾತುರಳಾಗಿದ್ದಳು.

ಅವಳು ಪೋಲೀಸರಿಗೆ ತಿಳಿಸಿದಳು. ಪೋಲೀಸರು ಪತ್ರಿಕೆಗಳಲ್ಲಿ ಪ್ರಕಟನೆ ಕೊಟ್ಟರು.

ಒಬ್ಬ ಪೋಲೀಸನಿಗೆ ಈ ಮನುಷ್ಯನ ವರ್ಣನೆ ಮತ್ತು ಡಾರ್ಕಿಂಗ ಆಸ್ಪತ್ರೆಯಲ್ಲಿ ಸತ್ತ ಅಜ್ಞಾತ ಮನುಷ್ಯನ ವರ್ಣನೆಯಲ್ಲಿ ಸಾದೃಶ್ಯ ಕಂಡಿತು.

ಕೊನೆಯ ಪ್ರಯತ್ನವೆಂದು ಪೋಲೀಸರು ನನ್ನ ಬಳಿಗೆ ಬಂದರು. ನನ್ನ ಬಳಿ ಮೃತನ ಬೆರಳು ಮುದ್ರೆಗಳಿದ್ದವು.

ನಾನು ಮೇರಿ ಗಾಲಬ್ರೇಥಳ ಮನೆಗೆ ಹೋದೆ. ಆದರೆ ಆ ಮನೆ ಅತ್ಯಂತ ಸ್ವಚ್ಛವಾಗಿಡಲ್ಪಟ್ಟಿತ್ತಾದ್ದರಿಂದ ಅಲ್ಲಿ ಬೆರಳು ಮುದ್ರೆಗಳು ಕಾಣಸಿಗುವ ಸಂಭವವೇ ಇರಲಿಲ್ಲ.

ನಾನೆಷ್ಟು ಹುಡುಕಿದರೂ ಮೇರಿಯ ಗಂಡನ ಬೆರಳು ಮುದ್ರೆ ಯಾವ ವಸ್ತುವಿನ ಮೇಲೆಯೂ ಕಾಣಲಿಲ್ಲ.

ನಾನು ನಿರಾಶನಾಗಿ ಹಿಂತಿರುಗಬೇಕೆಂದಿದ್ದಾಗ ಗೋಡೆಗೆ ಆತು ನಿಂತಿದ್ದ ಕಪಾಟಿನ ಹಿಂದುಗಡೆ ಒಂದು ಕಟ್ಟಿಗೆಯ ತುಂಡು ಕಾಣಿಸಿತು. ಮೇರಿಯ ಗಂಡನಿಗೆ ಬಡಿಗತನದ ಹವ್ಯಾಸವಿದ್ದಿತು. ನಾನು ಆ ಕಟ್ಟಿಗೆ ತುಂಡನ್ನು ಎತ್ತಿದಾಗ ಅದು ಬಡಿಗರು ಉಪಯೋಗಿಸುವ ಒಂದು ಅಳತೆಗೋಲು ಎಂದು ತಿಳಿಯಿತು. ಮೇರಿಯ ಕಣ್ಣಿಗೆ ಅದು ಬಿದ್ದಿರಲಿಲ್ಲವಾದ್ದರಿಂದ ಅದು ಹಾಗೆಯೇ ಉಳಿದಿತ್ತು. ಆ ಕಟ್ಟಿಗೆಯ ತುಂಡಿನ ಮೇಲೆ ಒಂದೇ ಒಂದು ಬೆರಳು ಮುದ್ರೆಯಿತ್ತು.

ಡಾರ್ಕಿಂಗದಲ್ಲಿ ಸತ್ತ ಮನುಷ್ಯನ ಎಡಗೈ ಹೆಬ್ಬೆಟ್ಟಿನ ಗುರುತೂ ಈ ಕಟ್ಟಿಗೆಯ ತುಂಡಿನ ಮೇಲಿನ ಬೆರಳಿನ ಗುರುತೂ ಒಂದೇ ಎಂಬುದು ಪರೀಕ್ಷೆಯ ನಂತರ ಖಚಿತವಾಯಿತು.

ನಾನು ಇದರಿಂದ ಏಕಕಾಲಕ್ಕೆ ಎರಡು ರಹಸ್ಯಗಳನ್ನು ಭೇದಿಸಿದಂತಾಯಿತು. ಡಾರ್ಕಿಂಗದಲ್ಲಿ ಸತ್ತ ಅಜ್ಞಾತ ಮನುಷ್ಯ ಮತ್ತು ಮೇರಿಯ ಕಣ್ಮರೆಯಾದ ಗಂಡ ಒಬ್ಬನೇ ಎಂಬುದು ಗೊತ್ತಾಯಿತು.

ಆದರೆ ಆ ಮನೆಯಿಂದ ಹೊರಡುವಾಗ ಮೇರಿಯ ದುಃಖವನ್ನು ಕಂಡು, ಅವಳ ಕರುಣಾಜನಕ ಸ್ಥಿತಿಯನ್ನು ಕಂಡು ಈ ಬೆರಳು ಮುದ್ರೆ ಸಿಕ್ಕಿರದಿದ್ದರೆ ಚೆನ್ನಾಗಿತ್ತು ಎಂದು ನನಗನಿಸದೆ ಇರಲಿಲ್ಲ.

ನನ್ನ ಈ ಜೀವನದ ಅವಧಿಯಲ್ಲಿ ನನ್ನ ಅನುಭವಕ್ಕೆ ಬಂದ ಇಂಥ ನೂರಾರು ಉದಾಹರಣೆಗಳನ್ನು ಹೇಳಬಲ್ಲೆ. ನಿಜವಾದ ಅಪರಾಧಿಗಳ ಗಿದ್ದೂ ಇತರ ಬಗೆಯ ಪುರಾವೆಯ ಅಭಾ ದಿಂದ ಪಾರಾಗಿ ಹೋಗುವಂತಿದ್ದ ಅನೇಕರ ಬೆರಳು ಮುದ್ರೆಗಳ ಸಹಾಯದಿಂದ ಅಪರಾಧ ಪ್ರಾಯಶ್ಚಿತ್ತ ಹೊಂದಿದ್ದಾರೆ. ಸಾಂದರ್ಭಿ ಪುರಾವೆಗಳ ಮೂಲಕ ಅನ್ಯಾಯವಾಗಿ ಶಿಕ್ಷೆ ಗುರಿಯಾಗುವಂತಿದ್ದವರು ಬೆರಳು ಮುದ್ರೆಗಳ ಪ್ರಭಾವದಿಂದ ಉಳಿದುಕೊಂಡಿದ್ದಾರೆ.



## ಕಣ್ಣಿನ ಅರ್ಥ

ನಾನು ಕನ್ನಡ ಲೇಖಕನೂ ಅಲ್ಲ, ಕನ್ನಡಕ್ಕಾಗಿ ಮೈಮುರಿದು ದುಡಿದವನೂ ಅಲ್ಲ. ನನ್ನ ಯೋಗ್ಯತೆ ಇಷ್ಟೆ, ನಾನು ಕರ್ನಾಟಕ ಪ್ರಾಂತದವನು, ಕರ್ನಾಟಕ ಸೀಮೆಯ ಸೆರಗಿನಲ್ಲಿ ನಿರಾಲಂಬವಾಗಿದ್ದರೂ ನಿರ್ಬಂಧವಿಲ್ಲದೆ ನಿಂತಿರುವ ಕನ್ನಡ ಜಿಲ್ಲೆಯವನು, ಜಿಲ್ಲೆಯ ಹೆಸರು ಕನ್ನಡವಿದ್ದರೂ ಹೆಚ್ಚಿನ ಜನರ ಮನೆಯ ಮಾತು ಕನ್ನಡವಲ್ಲ, ತುಳು ಕೊಂಕಣಿಗಳು. ಈ ಅರೆಭಾಷೆಗಳು ಬರೆಹಗಳಲ್ಲಿ ವ್ಯಕ್ತವಾಗದೆ ಗ್ರಂಥಗಳಲ್ಲಿ ಸ್ಥಿರಪಡದೆ ಇನ್ನೂ ಬಾಯಿ ಮಾತುಗಳಾಗಿ ಉಳಿದಿವೆ. ಕೊಂಕಣಿ ಮಾತಿನ ನಾಲಗೆಯಿಂದ ಅಂದ-ಚೆಂದದ ಕನ್ನಡದ ನುಡಿಗಳು ಸರಿಯಾಗಿ ಬರಲಾರವು. "ಕನ್ನಡಂ ಕತ್ತುರಿಯಲ್ತೆ" "ಕನ್ನಡ ಭಾಷೆ ಕನ್ನಡಿಗನ ಭಾಗ್ಯ" "ಸಿರಿಗನ್ನಡಂ ಗೆಲ್ಗೆ" ಎಂಬೀ ಹೆಮ್ಮಾತುಗಳು ಹುಟ್ಟು ಕನ್ನಡಿಗನಷ್ಟು ನನ್ನ ಹೃದಯವನ್ನು ಸ್ಫುರಿಸಲಾರವು. ಆದರೆ ಅವುಗಳ ನಿಜಾರ್ಥವು ಕನ್ನಡಿಗನಲ್ಲದ ನನ್ನ ಮನಸ್ಸಿನ ಆಳಕ್ಕೆ ಇಳಿಯುವಷ್ಟು ಜಾತಿ ಕನ್ನಡಿಗನ ಬುದ್ಧಿಗೆ ಸ್ಪಷ್ಟವಾಗದು. ಕಣ್ಣಿನ ಅರ್ಥ ಕಣ್ಣಿದ್ದವನಿಗಿಂತ ಇಲ್ಲದವನಿಗೆ ಚೆನ್ನಾಗಿ ತಿಳಿಯುತ್ತದೆ.

— ಪಂಜೆಯವರು

## ಆತ್ಮಕಥೆ

ತನ್ನ ವಕೀಲಿ ತಾನೇ ಮಾಡುವುದು, ತನ್ನನ್ನು ತಾನೇ ಮೆರುಗು ಕೊಟ್ಟು ಪ್ರದರ್ಶಿಸುವುದೇ ಆತ್ಮಕಥೆ ಬರೆವುದರ ಅರ್ಥ. ಜನರ ದೃಷ್ಟಿಯಲ್ಲಿ ನಾವು ಅಸಾಮಾನ್ಯರಾಗಿ ನಮ್ಮ ಕೃತಿಗಳು ಅಸಾಧಾರಣವಾಗಿ ಕಾಣಲೆಂದು ಅಂಥ ಕ್ರಿಯೆಗಳ ಮೇಲೆಯೆ ಆತ್ಮಕಥೆಯಲ್ಲಿ ಬೆಳಕು ಬೀರಲಾಗುತ್ತದೆ.

— ಗಿರೀಶಚಂದ್ರ ಘೋಷ



# ನಾನು ಓದಿ ಮೆಚ್ಚಿದ್ದು

ಡಿ. ವಿ. ಜಿ. ಯವರ " ಜೀವನ ಸೌಂದರ್ಯ ಮತ್ತು ಸಾಹಿತ್ಯ" ದಿಂದ

ಮಾಯೆಯೋ, ಮಹಿಮೆಯೋ, ಅದೆಂತಾದರೂ ಬಾಳು ನಮಗಾಗಿ ಕಾದುಕೊಂಡಿದೆ. ಎಷ್ಟೋ ವೇಳೆ ಅದು ನಮಗೆ ಬೇಕೆನ್ನಿಸಿಯೂ ಇದೆ. ಗಿಡ ಚಿಗುರಿದಾಗ, ಮೊಗ್ಗು ತಲೆಯೆತ್ತಿದಾಗ, ಮಗು ಹೊಸ ಹೊಸ ನೂತನಾಡಿ ಹೊಸ ಹೊಸ ಜಾಣತನಗಳನ್ನು ತೋರಿದಾಗ, ನೆರೆಹೊರೆಯುವರು ನಮ್ಮನ್ನು ಮೆಚ್ಚಿಕೊಂಡಾಗ, ಪ್ರೀತಿಯ ಕುಡಿನೋಟದೊಡನೆ ಪ್ರೀತಿಯ ಪಡಿನೋಟ ಬೆರೆತಾಗ, ಒಬ್ಬರ ಕಷ್ಟದಲ್ಲಿ ಇನ್ನೊಬ್ಬರು ಮರುಗಿದಾಗ, ಬಹುದಿನದ ಬಯಕೆ ಕೈಗೂಡಿದಾಗ ಒಂದು ಮಹಾಸಂಭ್ರಮವು ಎಲ್ಲರನ್ನೂ ಆವರಿಸಿದಾಗ — " ಬಾಳು ಒಳ್ಳೆಯದು, ಬಾಳೋಣ, " ಎಂದು ಯಾರಿಗೆ ಅನ್ನಿಸಿಲ್ಲ ? ದಿನದಿನವೂ ಬಾಳಿಗೊಂದು ಹೊಸ ಚೆಂದವನ್ನು ತರಬೇಕು; ದಿನದಿನವೂ ಅದನ್ನು ಹೊಸದೆಂದೆನ್ನಿಸಬೇಕು. ಇದಕ್ಕನುವಾಗುವದು ಕಲೆ. ಜೀವನವು ಹಳಸದಂತೆ ಅದನ್ನು ಕಾಪಾಡುತ್ತ ಅದಕ್ಕೊಂದು ಕಾಂತಿಯನ್ನೂ ಶಕ್ತಿಯನ್ನೂ ಕೊಟ್ಟು ಸಾರ್ಥಕಪಡಿಸುವದು ಕಲೆ. ಇರುವ ಸೌಂದರ್ಯವನ್ನು ನಮ್ಮ ಅನುಭವಕ್ಕೆ ತಂದು ತೋರಿಸಿ, ಇನ್ನೂ ಇರಲಾಗುವ ಸೌಂದರ್ಯಕ್ಕಾಗಿ ನಮ್ಮನ್ನು ಉಜ್ಜುಗಗೊಳಿಸುವದು ಕಲೆ. ಕಲೆಯು ಹೀಗೆ ಪ್ರೇರಣೆಗೊಳಿಸುತ್ತಿರುವುದರಿಂದಲೇ ವಿಜ್ಞಾನ ಶಾಸ್ತ್ರಗಳೂ ಆಧ್ಯಾತ್ಮಿಕ ಶಾಸ್ತ್ರಗಳೂ ಸಹ ತಮ್ಮ ತಮ್ಮ ದಾರಿಗಳಲ್ಲಿ ಮಾನವೋಪಕಾರಿಗಳಾಗಲು ದುಡಿಯುತ್ತಿರುವುದು. ಹೀಗೆ ಜೀವನ ಸೌಂದರ್ಯದ ಪರಿಪೋಷಣೆಗೆ ಒದಗುವ ವಾಗಮೃತಧಾರೆಯೇ ಸಾಹಿತ್ಯ.

ಆಯ್ದವರು : ರಘುಪತಿ ಹೆಗಡೆ, ಕಡವೆ

ತ. ರಾ. ಸು. ಅವರ " ಸಾಕುಮಗಳು " ಇಂದ

ಎಷ್ಟು ವಿಚಿತ್ರ, ಎಷ್ಟು ವಿಚಿತ್ರ ವಿಧಿಲೀಲೆ. ತಮ್ಮ ಹುಟ್ಟಿನೊಂದಿಗೆ ಹುಟ್ಟಿ ಬರಲಿಲ್ಲ, ತಮ್ಮ ಬಾಳಿನೊಂದಿಗೆ ಬಾಳಿಬರಲಿಲ್ಲ. ಆದರೂ ನಡುಗಾಲದಲ್ಲಿ, ಎಲ್ಲಿಯೋ ಹುಟ್ಟಿ ಬೆಳೆದು, ತಮ್ಮ ಬಾಳನ್ನು ಸೇರಿದ ಹೆಣ್ಣಿನಲ್ಲಿ ಈ ಜೀವವಾಹಿನಿ ಲೀನವಾಗುತ್ತದೆ; ಅದೇ ನಾನು ಎನ್ನುವಷ್ಟು ಐಕ್ಯವಾಗುತ್ತದೆ; ಆ ಸುಖದಲ್ಲಿ ಲೋಕವನ್ನೇ ಮರೆತು. ಜಗತ್ತು ಆನಂದದ ಅಮೃತವಾಹಿನಿ ಎಂದು ಭಾವಿಸುತ್ತದೆ. ಎರಡು ಆನಂದಗಳ ಸಮ್ಮಿಲನದಲ್ಲಿ, ಉಳಿದೆರಡು ಆನಂದಗಳಿಗಿಂತಲೂ ಮಿಗಿಲಾದ ಆನಂದವೆಂಬಂತೆ, ಮೂರನೆಯ ಆನಂದವೊಂದು ಜನ್ಮತಾಳುತ್ತದೆ. ಆ ಆನಂದ-ಅದು ಆನಂದವೇ ? ಸುಖದ ಮೊಗ್ಗು ಅರಳಿ ಹೂವಾದಾಗ ಅದು ಸಂತೋಷದ ಪರಿಮಳ

ವನ್ನು ಬೀರದೆ, ದುಃಖ, ಚಿಂತೆಗೆ ಕಾರಣವಾಗುತ್ತದೆ. ಆ ದುಃಖ-ಒಬ್ಬನಿಗೆ ದುಃಖ ವಾಗಿ ಮತ್ತೊಬ್ಬನಿಗೆ ಸಂತೋಷವಾಗಿ, ವಿಚಿತ್ರವಾಗಿ ಕವಲು ಒಡೆಯುತ್ತದೆ. ಲೋಕ ಮೂಡಿದಂದಿನಿಂದ ಇಂದಿನವರೆಗೂ ಅವ್ಯಾಹತವಾಗಿ ನಡೆಯುತ್ತಾ ಬಂದಿದೆ ಈ ನೆರಳು ಬೆಳಕಿನ ನಾಟಕ. ಸುಖದ ಆಲಿಂಗನದಲ್ಲೆ ದುಃಖದ ಅವತಾರವಾಗುವುದು ಯಾರೂ ಅರಿಯದ ವಿಷಯವೇನಲ್ಲ. ಆದರೂ, ಅದನ್ನು ತಿಳಿತಿಳಿದೂ ಮನುಷ್ಯ ಸುಖದ ಈ ಕಾಂಚನಮೃಗದ ಬೇಟೆಯಾಟ ಬಯಸುತ್ತಾನೆ; ಬಯಸಿ ಬಯಸಿ, ಸುಖರೂಪದ ದುಃಖವನ್ನು ಕೈಯಾರ ಆಹ್ವಾನಿಸುತ್ತಾನೆ. ಅದೇ ಸ್ವರ್ಗವೆಂದು ಭ್ರಮಿಸುತ್ತಾನೆ; ಅದಿಲ್ಲದ ತನ್ನ ಬಾಳೇ ಅಪೂರ್ಣವೆಂದು ಮಮ್ಮಲ ಮರುಗಿ ಹಂಬ ಲಿಸುತ್ತಾನೆ. ಹೀಗೆ ನಡೆದಿದೆ ಲೋಕನಾಟಕ. ಕೋಟ್ಯನುಕೋಟಿ-ಜೀವಿಗಳ ಬಾಳಿನಲ್ಲಿ ಅದೇ ಜೀವನ.

ಜೀವನ, ಜೀವನ-ಇದೇನೇ ಜೀವನ?

ಆಯ್ದವರು: ಜಿ. ಕೆ. ಕುಲಕರ್ಣಿ, ಧಾರವಾಡ

ಶ್ರೀನಿವಾಸರ "ಸುಬ್ಬಣ್ಣ" ದಿಂದ

. . . . . . ನನಗೆ ಯೋಗ್ಯತೆ ಇದ್ದರೆ ಇಲ್ಲಿ ಲಲಿತಮ್ಮನನ್ನು ವರ್ಣಿಸಬೇಕು. ಅವಳ ಮನಸ್ಸಿನ ಭಾವಗಳನ್ನು ವಿವರಿಸಿ ಹೇಳಬೇಕು. ನನಗೆ ಆ ಯೋಗ್ಯತೆ ಇಲ್ಲ. ಅಲ್ಲದೆ ಲಲಿತಮ್ಮನ ಆಕಾರ ಹೇಗಿತ್ತೆಂದು ನಾನು ಕಾಣೆ. ಮತ್ತೆ ಯೋಚಿಸುವದರಲ್ಲಿ ಒಂದು ಸಂದೇಹ ಬರುತ್ತದೆ. ಈ ಆಕಾರವನ್ನು ಕಾಣದ್ದರಿಂದ ನಾನೇನು ವ್ಯಥೆ ಪಡ ಬೇಕಾಗಿಲ್ಲ. ಕಂಡಿದ್ದರೆ ತಾನೆ ವರ್ಣಿಸುತ್ತಿದ್ದೆನೆ? ಕವಿಗಳು ಸ್ತ್ರೀ ವಿಷಯದಲ್ಲಿ ಬರೆ ಯುವ ವರ್ಣನೆ ಪ್ರಾಯಶಃ ಮಾನವನು ಸ್ತ್ರೀಯರ ವಿಷಯದಲ್ಲಿ ತೋರಬೇಕಾದ ಮರ್ಯಾದೆಯನ್ನು ಮೀರುತ್ತದೆಂದು ನನ್ನ ಭಾವನೆ. ಅಯ್ಯಾ ಕವಿ! ಯಾವುದನ್ನು ಕೇವಲ ಒಂದು ಶೃಂಗಾರದ ಆವಾಸವೆಂದು ಕಾಮುಕಾವಸ್ಥೆಯಲ್ಲಿ ನೀನು ಭ್ರಮಿಸಿ ನಿನ್ನಂಥ ಕಾಮುಕರಿಗೆ ವರ್ಣಿಸಿ ಹೇಳುವೆಯೋ, ಆ ಸ್ತನಯುಗ್ಮವನ್ನು ಲೋಕಮಾತೆ ನನ್ನ ನಿನ್ನಂಥ ಸಾವಿರ ಕ್ಷುದ್ರ ಜೀವಿಗಳ ಪಾಲನೆಗಾಗಿ ಧರಿಸಿರುವಳು. ಇದನ್ನು ವಿಟ ಪುರುಷನಂತೆ ವರ್ಣಿಸುವುದಕ್ಕೆ ನಿನ್ನ ಧೃಷ್ಟತನವೆಷ್ಟಿರಬೇಕು? ಸ್ತ್ರೀಯು ಪ್ರೇಯಸಿಯು ಹೇಗೋ ಅದಕ್ಕಿಂತ ಹೆಚ್ಚಾಗಿ ಮಾತೆಯಾಗಿರುವಳು. ನೀನು ಯಾರನ್ನು ನಿನ್ನ ಪತ್ನಿ ಯೆಂದು ಕರೆಯುವಿಯೋ ಅವಳು ಕೂಡ ನಿನ್ನ ಸಂಸ್ಕಾರಕ್ಕಾಗಿ ಒಂದು ಸಮಯದಲ್ಲಿ ಪತ್ನಿಯಂತೆ ನಡೆದುಕೊಂಡರೂ ಸದಾ ಹೃದಯದಲ್ಲಿ ನಿನ್ನನ್ನೂ ಒಂದು ಮಗುವಿ ನಂತೆ ನೋಡುವಳು. ನಾನು ಕವಿಯಲ್ಲ. ಲಲಿತಮ್ಮನನ್ನು ನೋಡಿದ್ದರೂ ಅವಳ ಮುಖ ಹೀಗಿತ್ತು, ಕಣ್ಣು ಹಾಗಿತ್ತು, ತುಟಿ ಇನ್ನು ಹೇಗಿತ್ತು, ಎಂದು ವರ್ಣಿಸುವುದಕ್ಕೆ ನನ್ನ ಮನಸ್ಸು ಒಪ್ಪುತ್ತಿರಲಿಲ್ಲ. ಅವಳು ಸುಂದರಿಯಾಗಿದ್ದಳು ಎಂದು ಮಾತ್ರ ಹೇಳು ತ್ತಿದ್ದೆನು. ಅಲ್ಲದೆ ನಾವು ನಮ್ಮ ಗೃಹಿಣಿಯರಲ್ಲಿ ಮೆಚ್ಚುವುದು ಏನನ್ನು? ಕಣ್ಣು, ಮೂಗು, ತುಟಿಗಳನ್ನೇ? ಅಪರಿಚಿತಳಾದ ಸ್ತ್ರೀಯರನ್ನು ನೋಡಿದಾಗ ಅವರ ಆಕಾರದ ವಿಷಯದಲ್ಲಿ ಮನಸ್ಸು ಸ್ವಲ್ಪ ಹಾಗೆ ವರ್ತಿಸಬಹುದು. ಮನೆಯ ಹೆಂಗ

ಸರ ವಿಷಯದಲ್ಲಿ ಹಾಗೆ ಪ್ರವರ್ತಿಸುವದಿಲ್ಲ. ಯಾವ ಸ್ತ್ರೀಯ ವಿಷಯದಲ್ಲೇ ಆಗಲಿ ಆಕಾರದ ಸೊಗಸು ಸ್ವಲ್ಪ ಕಾಲ ಮಾತ್ರ ಪ್ರಮುಖವಾಗಿರಬಹುದು. ಆಮೇಲೆ ನಮಗೆ ತೋರುವುದು ಆ ಅವರ್ಣನೀಯವಾದ ಸ್ತ್ರೀವ್ಯಕ್ತಿತ್ವ, ಸಾವಿರ ಸಂದರ್ಭದಲ್ಲಿ ನಾವು ನೋಡಿರುವ ಆ ಪ್ರೇಮ, ಆ ದಯ, ಆ ಕನಿಕರ, ಆ ವಿಭ್ರಮ, ಆ ಲಾಲಿತ್ಯ, ಆ ಸೌಕುಮಾರ್ಯ; ಆ ಸ್ತ್ರೀತ್ವ, ವರ್ಣಿಸುವುದಾದರೆ ಲಲಿತೆಯನ್ನು ಕುರಿತು ಇದನ್ನು ವರ್ಣಿಸಬೇಕು. ಆದರೆ ಇದನ್ನು ವರ್ಣಿಸುವ ಶಕ್ತಿ ನನಗಿಲ್ಲ.

ಆಯ್ದವರು: ಆರ್. ಎಸ್. ಕುಲಕರ್ಣಿ, ಧಾರವಾಡ

ಬೀಚಿಯವರ "ಸತೀ ಸೂಳೆ" ಕಾದಂಬರಿಯಿಂದ

"ಅರೆ ಹೊಟ್ಟೆ ಉಂಡವರು" ಎಂದು ಕಾಗದದ ತುಂಡುಗಳಲ್ಲಿ ಬರೆದು ಕೊಂಡು ಅಂಗಿಗಳಿಗೆ ಹಚ್ಚಿಕೊಂಡರು, ಯಾರಾದರೂ ಇವರ ಮುಖವನ್ನು ಕಂಡು ಅಷ್ಟೊ ಉಣ್ಣದವರು ಎಂದಾರೆಂಬ ಭಯದಿಂದ.

ಇಷ್ಟೇ ಸಂತೋಷ, ಆಶಾವಾದದ ದನಿ ಇತ್ತು ಇವರು ಹೇಳುತ್ತಿದ್ದ ಆತ್ಮಕಥೆ ಯಲ್ಲಿ. ಅರೆ ಹೊಟ್ಟೆ ತುಂಬಿದೆ ಎನ್ನುವವ ಆಶಾವಾದಿ, ಅರೆ ಹೊಟ್ಟೆ ಬರಿದಿದೆ ಎನ್ನುವವ ನಿರಾಶಾವಾದಿ. ಒಂದು ಕಣ್ಣು ಕಾಣುತ್ತಿದೆ ಎನ್ನುವವ ಆಶಾವಾದಿ, ಒಂದು ಕಣ್ಣು ಕಾಣುವದಿಲ್ಲ ಎನ್ನುವವ ನಿರಾಶಾವಾದಿ. ಖರ್ಚಿನ ಬಾಬು ಬಂದಾಗ ಅದೆಲ್ಲಿಂದಲೋ ಹಣ ಬಂದುಬಿಡುತ್ತದೆ ಎಂದುಕೊಳ್ಳುವವ ಆಶಾವಾದಿ, ಹಣವು ಬಂದಾಗಲೆಲ್ಲ ಇದೆಲ್ಲಿಂದಲೋ ಖರ್ಚಿನ ಬಾಬು ಬಂದು ಬಿಡುತ್ತದೆ ಎನ್ನುವವ ನಿರಾಶಾ ವಾದಿ. ಹೆಂಡತಿ ಸತ್ತಾದರೂ ಮಗು ಉಳಿಯಿತು ಎನ್ನುವವ ಆಶಾವಾದಿ, ಮಗುವು ಮಾತ್ರ ಉಳಿಯಿತು ಹೆಂಡತಿ ಸತ್ತುಹೋದಳು ಎನ್ನುವವ ನಿರಾಶಾವಾದಿ. ಬಳ್ಳಾರಿ ಯಲ್ಲಿ ಹಗಲೆಲ್ಲವೂ ಬರೀ ಬಿಸಿಲು ಎನ್ನುವವ ಪರಮ ನಿರಾಶಾವಾದಿ, ಬಳ್ಳಾರಿಯಲ್ಲಿ ರಾತ್ರಿ ಬಿಸಿಲೇ ಇಲ್ಲ ಎನ್ನುವವ ಅನುಪಮ ಆಶಾವಾದಿ. ಈರ್ವರದೂ ಅದೇ ಅದೇ ಅನುಭವ, ಅದೇ ಮಾತು, ಅದೇ ಅರ್ಥ, ದನಿಯಲ್ಲಿ ಮಾತ್ರವೇ ಭೇದ. ಈ ಭೇದದ ಕಲ್ಪನೆಯೇ ಸುಖ ದುಃಖಗಳ ಮೂಲ.

ಪ್ರತಿಯೊಬ್ಬನೂ ತಾನೇ ತನ್ನ ನರಕ ಸ್ವರ್ಗಗಳ ಬ್ರಹ್ಮ. ತೆರೆದ ಬಾಗಿಲಿಗೆ ಬೆನ್ನುಮಾಡಿ ಕುಳಿತು ಇಕ್ಕದ ಕದವನ್ನು ಕಂಡು ಬಿಕ್ಕಿ ಬಿಕ್ಕಿ ಅಳುವ ಶತಮೂರ್ಖರ ಉದ್ಧಾರವನ್ನು ಯಾವ ದೇವರೂ ಮಾಡಲಾರ. ಹತ್ತಿಪ್ಪತ್ತು ಅವತಾರಗಳನ್ನು ಎತ್ತುವ ಅಪರಾಧಗಳಿಂದ ವೃಥಾ ಕಾಲಹರಣ ಮಾಡಿಕೊಳ್ಳುತ್ತಿದ್ದಾನೆ, ಪಾಪ ! ಆ ಪರಮಾತ್ಮ ಎಂದುಕೊಳ್ಳುತ್ತಿದ್ದಾಗ ದೇವನಿಗಾಗಿ ಉಮೇಶನ ಮನಸ್ಸಿನಲ್ಲಿ ಕನಿಕರ ಹುಟ್ಟಿತು. ಈ ಹೇಡಿಗಳ ದೇವನನ್ನು ಯಾವ ಮಾನವನು ತಾನೆ ಕಾಪಾಡಲು ಸಾಧ್ಯ?

— ಡಿ. ಎಸ್. ಗಂಗಾಧರ ಶೆಟ್ಟಿ.



ಕಾರ್ಲ ಲಿಚಿ ಬಣ್ಣಿಸಿದ ನರ ಭಕ್ಷಕ ವೃಕ್ಷದ ಕಾಲ್ಪನಿಕ ಚಿತ್ರ.

**ನರಭಕ್ಷಕ ವೃಕ್ಷಗಳಿಲ್ಲ ; ಆದರೆ ಚಿಕ್ಕ ಪ್ರಾಣಿಗಳನ್ನು ಬೇಟೆಯಾಡುವ ೪೫೦ ಸಸ್ಯಜಾತಿಗಳಿವೆ.**

# ನರಭಕ್ಷಕ ವೃಕ್ಷಗಳಿವೆಯೆ ?

ಆ ಗಿಡ ದೈತ್ಯಾಕಾರದ ಅನಾನಾಸಿನಂತಿತ್ತು. ಅದರ ಕಾಂಡ ಹತ್ತು ಫೂಟೆತ್ತರದ ಕೊಳಗದಂತಿತ್ತು. ಅದರ ತುದಿಗೆ ಹತ್ತುಹನ್ನೆರಡು ಫೂಟುದ್ದ, ಒಂದು ಫೂಟು ಅಗಲದ, ಸೂಜಿಯಂತೆ ತುದಿ ಚೂಪಾದ, ಎಂಟು ಪ್ರಕಾಂಡ ಎಲೆಗಳು. ಅವುಗಳ ಮೇಲೆಲ್ಲ ನಂಜಿನ ಮುಳ್ಳುಗಳು.

ಮದಗಾಸ್ಕರ ದ್ವೀಪದ ಮೂಲನಿವಾಸಿಗಳಿಗೆ ಈ ವೃಕ್ಷ ದೇವತೆಯಾಗಿತ್ತು. "ಒಂದು ರಾತ್ರಿ ಅದರ ಪೂಜೆ ನೋಡಲು ನನ್ನನ್ನು ಕರೆದೊಯ್ದರು. ಎಳೆವಯೆಯದ ಹುಡುಗಿಯೊಬ್ಬಳನ್ನು ತಂದು ಆ ಮರ ಹತ್ತುವಂತೆ, ಅದರ ತುದಿಯಲ್ಲಿರುವ ರಸವನ್ನು ಕುಡಿಯುವಂತೆ ನಿರ್ಬಂಧಿಸಿದರು.

"ಅವಳು ಮೇಲೆ ಹತ್ತಿದ ನಂತರ ನಡೆದದ್ದನ್ನು ನೋಡಿ ನಾನು ಭಯದಿಂದ ನಿಶ್ಚೇಷ್ಟಿತನಾ
ಒಂದು ಕ್ಷಣಕ್ಕೆ ಮೊದಲು ನಿಶ್ಚಲವಾಗಿದ್ದ
ಮರದ ಕೊಂಬೆಗಳು ಹಾವುಗಳಂತೆ ಮ
ಮಣಿದು ಸುತ್ತಿಕೊಳ್ಳತೊಡಗಿದವು. ಆ ಭೀ
ದೃಶ್ಯವನ್ನು ನಾನೆಂದೂ ಮರೆಯಲಾರೆ. ಹುಡ
ಚಡಪಡಿಸುತ್ತಿದ್ದಂತೆ ಆ ಮಹಾ ಎಲೆಗ
ಮೆಲ್ಲನೆ ಎದ್ದು ತನ್ನ ಮುಳ್ಳುಗಳೊಡನೆ ಅ
ಮೇಲೆ ಮುಗಿಬಿದ್ದು ಹೈಡ್ರಾಲಿಕ ಪ್ರೆಸ್ಸಿನ
ಅವಳನ್ನು ಹಿಂಡತೊಡಗಿದವು . . . ."

ಈ "ಪ್ರತ್ಯಕ್ಷ ಕಂಡ" ಘಟನೆಯ
೧೮೭೮ ರಲ್ಲಿ ಡಾ. ಕಾರ್ಲ ಲಿಚಿ ಎಂಬಾತ
ವರ್ಣಿಸಿ ಬರೆದ ಲೇಖ ಹಲವು ಪತ್ರಿಕೆಗಳ
ಪ್ರಕಟವಾಗಿತ್ತು.

ನರಭಕ್ಷಕ ವೃಕ್ಷಗಳ ಸಮಾಚಾರ ಪ್ರಕಟ
ದದ್ದು ಇದೇ ಮೊದಲನೆಯದಲ್ಲ. ೧೮೫೧
ಕ್ಯಾಪ್ಟನ್ ಆರ್ಕರೈಟನೆಂಬವನು ದಕ್ಷಿಣ ಶಾ

'ಡಿಸ್ಕವರಿ' ಯ ಆಧಾರದಿಂದ

ಸಾಗರದಲ್ಲಿರುವ ಎಲ್ ಬನೂರ ದ್ವೀಪದಲ್ಲಿ (ಮೃತ್ಯುದ್ವೀಪ) ತಾನೊಂದು ದೈತ್ಯ ಪುಷ್ಪವನ್ನು ಕಂಡವ್ನಾಗಿಯೂ ಅದರ ಅಮೋಘವಾದ ಸುವಾಸನೆಗೆ ಮರುಳಾಗಿ ಅದರ "ಪರಿಮಳದ ಗುಹೆ" ಯನ್ನು ಯಾರಾದರೂ ಪ್ರವೇಶಿಸಿದರೆ ಅದು ಅವನ್ನು ಹಿಂಡಿ ನುಂಗಿ ಜೀರ್ಣಿಸಿಕೊಂಡುಬಿಡುತ್ತಿತ್ತೆಂದೂ ಬರೆದಿದ್ದನು. ನಿಕರಾಗುವದಲ್ಲಿ ಇನ್ನೊಂದು ಮಾಂಸಾಹಾರಿ ಬಳ್ಳಿ ತನ್ನ ನಾಯಿಯನ್ನು ತಿಂದು ಜೀರ್ಣಿಸಿಕೊಂಡಿತೆಂದು ಡನ್ ಸ್ಟನ್ನನೆಂಬಾತನು ಪ್ರಕಟಿಸಿದ್ದನು.

ಆದರೆ ವಿಜ್ಞಾನಿಗಳು ನಡೆಸಿದ ಶೋಧಗಳಲ್ಲಿ ಇಂಥ ಕತೆಗಳ ಸತ್ಯಾಂಶ ಸಿದ್ಧವಾಗಲಿಲ್ಲ. ಅಂದ ಮಾತ್ರಕ್ಕೆ ಮಾಂಸಾಹಾರಿ ಸಸ್ಯಗಳೇ ಇಲ್ಲೆಂದು ಅರ್ಥವಲ್ಲ. ಅಂಥ ಸುಮಾರು ೪೫೦ ಜಾತಿಯ ಸಸ್ಯಗಳು ಇವೆ. ಆದರೆ ಅವುಗಳಲ್ಲಿ ಅತಿ ಭಯಂಕರವಾದದ್ದು ಕೂಡ ಚಿಕ್ಕ ಹಕ್ಕಿಗಳು, ಓತಿಗಳು, ಕಪ್ಪೆಗಳಿಗಿಂತ ದೊಡ್ಡ ಪ್ರಾಣಿಗಳನ್ನು ಹಿಡಿಯುವುದಿಲ್ಲ.

ಹೀಗಿದ್ದರೂ ಅವು ತಮ್ಮ ಆಹಾರವನ್ನು "ಬೇಟೆಯಾಡುವ" ರೀತಿಗಳನ್ನು ನೋಡಿದರೆ ದಂಗುಬಡಿಯುವಂತಿದೆ.

ಮಾಂಸಾಹಾರಿ ಸಸ್ಯಗಳು ಹೆಚ್ಚಾಗಿ ನೀರಲ್ಲಿ, ಅಥವಾ ಜವುಳು ಭೂಮಿಯಲ್ಲಿರುತ್ತವೆ. ಪ್ರಾಣಿಗಳನ್ನು "ತಿನ್ನದೆ" ಅವು ಬಾಳಬಲ್ಲವಾದರೂ ಮಾಂಸಾಹಾರ ಸಿಕ್ಕಿದರೆ ಅವು ಚೆನ್ನಾಗಿ ಬೆಳೆಯುವವೆಂದು ತಿಳಿಯಬಂದಿದೆ. ಮಾಂಸಾಹಾರದಿಂದ ಅವು ತಮಗೆ ಬೇಕಾದ ಸಾರಜನಕ (ನೈಟ್ರೊಜಿನ್) ವನ್ನು ಪಡೆಯುತ್ತವೆ.

ಎಲ್ಲ ಮಾಂಸಾಹಾರಿ ಸಸ್ಯಗಳು ಕೊಳ್ಳೆಯನ್ನು ಹಿಡಿಯಲು ಬಳಸುವ ಸಾಧನಗಳು ಒಂದೇ ವಿಧವಾಗಿಲ್ಲ. ಕೆಲವು ಹೂಜಿ (Pitcher) ಯಂಥ ಅವಯವಗಳನ್ನು ಉಪಯೋಗಿಸುತ್ತವೆ. ಇವುಗಳಲ್ಲಿ ಯಾವ ಚಲನೆಯೂ ಇರುವುದಿಲ್ಲ. ಅವು ವಾಸನೆ, ಮಧು ಅಥವಾ ಬಣ್ಣದಿಂದ ಕೀಟಗಳನ್ನು ಆಕರ್ಷಿಸಿ ತಮ್ಮ ಹೂಜಿಯಲ್ಲಿ ಬಂದು ಸಿಕ್ಕಿಕೊಳ್ಳುವಂತೆ ಮಾಡುತ್ತವೆ. ಒಮ್ಮೆ ಅದರಲ್ಲಿ ಬಂದಿಳಿದ ಜಂತುಗಳು ತಿರುಗಿ ಹೋಗಲಾರದಂತೆ ಕೆಳಮುಖವಾದ ಕೇಶಗಳೂ ಜಾರುವ ಬದಿಗಳೂ ಅವಕ್ಕಿರುತ್ತವೆ. ಸಿಕ್ಕಿಕೊಂಡ ಜೀವಿಯನ್ನು ಅವು ಪ್ರಾಣಿಗಳ ಜಠರದಂತಿರುವ ಕೋಶಗಳ ಮೂಲಕ ಜೀರ್ಣಿಸಿಕೊಂಡುಬಿಡುತ್ತವೆ.

ದಕ್ಷಿಣ ಅಮೇರಿಕದಲ್ಲಿ ಮಳೆ ಹೆಚ್ಚಾಗಿರುವ ಪ್ರದೇಶದಲ್ಲಿರುವ **ಹೆಲಿಯಾಂಫೋರಾ** ಎಂಬ ಮಾಂಸಹಾರಿ ಸಸ್ಯ ಇಂಥದು. ಕೆಲವಿಂಚು ಉದ್ದವಾದ ಅದರ ಹೂಜಿ ಸುಂದರವಾಗಿದ್ದು ಅದರ ಬಾಯಿಗೊಂದು ಮುಚ್ಚಳವೂ ಇರುತ್ತದೆ. ಕೀಟಗಳು ಬಣ್ಣದಿಂದ ಆಕರ್ಷಣೆಗೊಂಡು ಅದರೊಳಗೆ ಹೊಕ್ಕರೆ ಒಳಗಿರುವ ನೀರಿನಲ್ಲಿ ಮುಳುಗಿ ಸಾಯುತ್ತವೆ. ಆ ಮೇಲೆ ಅದನ್ನು ಜೀರ್ಣಿಸಲಾಗುತ್ತದೆ.

ಉತ್ತರ ಅಮೇರಿಕದಲ್ಲಿರುವ **ಸರಸೀನಿಯ** ಎಂಬ ಸಸ್ಯವು ತನ್ನ ಹೂಜಿಯ ಬಾಗಿಲ ವರೆಗೆ ಮಧುಸವರಿದ ಮಾರ್ಗವನ್ನು ರಚಿಸಿಕೊಂಡು ಕೀಟಗಳನ್ನು ಆಕರ್ಷಿಸುತ್ತದೆ. ಹೂಜಿಯೊಳಗೆ ಹೊಕ್ಕ ಮೇಲೆ ಅದರಲ್ಲಿರುವ ಕೂದಲುಗಳು ಕೀಟವನ್ನು ಹಿಂದೆ ಸರಿಯಲಾರದಂತೆ ಮಾಡಿದರೆ, ಮಧುರವಾದ ರಸವು ಅದನ್ನು ಮುಂದೆ ಮುಂದೆ ಎಳೆದುಕೊಂಡು ಹೋಗುತ್ತದೆ. ಕೊನೆಗೆ ಕೀಟ ಸತ್ತು ಜೀರ್ಣವಾಗುತ್ತದೆ.

ಉಷ್ಣವಲಯದಲ್ಲಿ ಬೆಳೆಯುವ **ನೆಪೆಂಥೀಸ** ಎಂಬ ಬಳ್ಳಿ ಅತಿ ಸಾಮಾನ್ಯವಾದುದು. ಅದಕ್ಕೆ ಹೀರೇ ಬಳ್ಳಿಗಳಿಗಿರುವಂತೆ ತಂತು (tendril) ಗಳಿರುತ್ತವೆ. ಆದರೆ ಈ ತಂತು ಎಲೆಯ ತುದಿಗೇ ಇರುತ್ತದೆ. ಅವುಗಳ ಸಹಾಯದಿಂದ ಅದು ದೊಡ್ಡ ದೊಡ್ಡ ಮರಗಿಡಗಳನ್ನೇರುತ್ತದೆ. ಪ್ರತಿ ತಂತುವಿನ ತುದಿಗೆ ಹೂಜಿಯಿರುತ್ತದೆ. ಅವುಗಳೊಳಗೆ ಅಸಂಖ್ಯ ಪಚನಗ್ರಂಥಿಗಳಿವೆ ಹೂಜಿಯಲ್ಲಿರುವ ಮಂಗಳೂರು ಹಂಚುಗಳಂತೆ ಒಂದರ ಮೇಲೊಂದು ಇಳಿಜಾರಾಗಿರುವ ರಚನೆಗಳ ಸಹಾಯದಿಂದ ಕೊಳ್ಳೆ ಪಾರಾಗದಂತೆ ನೋಡಿಕೊಳ್ಳುತ್ತದೆ. ಹೂಜಿಯು ಆಕರ್ಷಕ ಬಣ್ಣಕ್ಕೆ



**ನೆಪೆಂಥೀಸ ಬಳ್ಳಿ.** ಬೋರ್ನಿಯೊ, ಮಡಗಾಸ್ಕರ, ಸಿಂಹಳ, ಆಸ್ಟ್ರೇಲಿಯಾಗಳಲ್ಲಿ ಇದರ ಪ್ರಸಾರ ಹೆಚ್ಚು. ಭಾರತದ ಖಾಸಿ ಹಾಗು ಗಾರೋ ಗುಡ್ಡಗಾಡುಗಳಲ್ಲಿಯೂ ಇದನ್ನು ಕಾಣಬಹುದು.

ಮುಗ್ಧವಾಗಿ ಕೀಟಗಳು ಬರುತ್ತವೆ. ಜೀರುಂಡೆ, ಜೊಂಡಿಗ, ಪಾತರಗಿತ್ತಿ, ಚೇಳು ಮುಂತಾದ ಪ್ರಾಣಿಗಳ ಅವಶೇಷಗಳು ಈ ಬಳ್ಳಿಯ "ಜಠರ" ದಲ್ಲಿ ಸಿಕ್ಕುತ್ತವೆ.

ಪೋರ್ತುಗಾಲ ಸ್ಪೇನ್, ಮೊರೊಕೊಗಳಲ್ಲಿರುವ **ಡ್ರೋಸೋಫಿಲಂ** ಅಥವಾ "ನೊಣ ಹಿಡಿಯುವ" ಸಸ್ಯದ ಎಲೆಗಳ ಮೇಲೆ ಅಂಟಾದ ರಸದ ಬಿಂದುಗಳು ಇರುತ್ತವೆ. ನೊಣ ಮೊದಲಾದವು ಅದರಲ್ಲಿ ಸಿಕ್ಕಿಕೊಂಡು ಮುಳುಗಿ ಸಾಯುತ್ತವೆ. ಒಡನೇ ಎಲೆಗಳಲ್ಲೇ ಇರುವ ಪಾಚಕ ಗ್ರಂಥಿಗಳು ಪಾಚಕ ರಸಗಳನ್ನು ಸ್ರವಿಸಿ ೨೪ ತಾಸುಗಳೊಳಗೆ ಕೀಟವನ್ನು ಜೀರ್ಣಿಸಿಬಿಡುತ್ತವೆ.

ಆದರೆ ಇಲಿ ಕತ್ತರಿಗಳಂಥ ರಚನೆಗಳನ್ನು ಉಪಯೋಗಿಸಿ ಕೊಳ್ಳೆಯನ್ನು "ಬೇಟೆಯಾಡುವ" ಸಸ್ಯಗಳ ಧೂರ್ತತನ ಇನ್ನೂ ಅದ್ಭುತವಾದದ್ದು.

ಡಾರ್ವಿನ್ನನು ಜಗತ್ತಿನಲ್ಲೇ ಅತ್ಯಾಶ್ಚರ್ಯಕ ಸಸ್ಯವೆಂದು ಕರೆದ **ಡಯೋನಿಯಾ** ಅಥ ("ಶುಕ್ರ ಸಸ್ಯ" ವು ಉತ್ತರ ಅಮೇರಿಕದಲ್ಲಿದ ಇದರ ಎಲೆಗಳಿಗೆ ಮಡಚುವ ಬಾಗಿಲುಗಳಿ ವಂತೆ ಎರಡು ಪಡಕು( ಪಡಿ )ಗಳಿದ್ದು ಮೊ (ಇಂಜಸ್ ಅಥವಾ ಬಿಜಾಗ್ರ ) ಯ ರಚನೆಗಳಿಂದ ಅವು ಸಂದುಗೂಡಿರುತ್ತ ಎಲೆಯ ಅಂಚುಗಳಿಗೆ ಬಲವಾದ ಹ ಗಳಿರುತ್ತವೆ( ಚಿತ್ರ ನೋಡಿರಿ ). ಎಲೆಯ ಮೇ ಮೂರು ಬಲು ಸೂಕ್ಷ್ಮವಾದ ಕೇಶಗಳು ಇ ತ್ತವೆ. ಯಾವುದೇ ಜಂತು ಈ ಕೇಶಗಳ ಸೋಕಿದರೆ ಸಾಕು, ಇಲಿ ಕತ್ತರಿಯು ಕ್ಷಣಾ ದಲ್ಲಿ ಮುಚ್ಚಿಕೊಳ್ಳುವಂತೆ ಎಲೆಯು ಮಡ ಕೊಂಡು ಆ ಬಡಪಾಯಿಯನ್ನು ಸೆರೆಹಿಡಿಯ ತ್ತದೆ. ಪ್ರಾಣಿಯು ಪಾರಾಗದಂತೆ ಎಲೆ ಅಂಚುಗಳಲ್ಲಿರುವ ಹಲ್ಲುಗಳು ಕೀಲಿಸಿಕೊಳ ತ್ತವೆ. ಅದು ಚಡಪಡಿಸುತ್ತ ಹೋದಂತೆ ಎ ಯಲ್ಲಿರುವ ಪಾಚಕ ಗ್ರಂಥಿಗಳು ಉತ್ತೇಜ ವಾಗಿ ರಸಗಳು ಸ್ರವಿಸಿ ಪಚನಕ್ರಿಯೆ ನಡೆಯ ತ್ತದೆ. ಕೆಲಸ ಮುಗಿದ ಮೇಲೆ ಎಲೆಗ "ಮುಟ್ಟಲುಮುರುಕ" ದ ಎಲೆಗಳಂತೆ ತಿರು ತೆರೆದುಕೊಳ್ಳುತ್ತವೆ.

ಜಗತಿನಲ್ಲೆಲ್ಲ ಸಿಗುವ **ಯುಟ್ರಿಕ್ಯುಲೇರಿಯ** ಎಂಬ ಜಲಸಸ್ಯವು ಇಲಿಬಲೆಯಂಥ ಉಪಕರ ವನ್ನು ಉಪಯೋಗಿಸುತ್ತದೆ. ಇದು ಅತ್ಯದ್ಭು



**"ಡಯೋನಿಯ"ದ ಇಲಿಕತ್ತರಿಯಂಥ ಎಲೆಯಲ್ಲಿ ಸಿಕ್ಕಿದ ಕೀಟ.**

ಯಾಂತ್ರಿಕ ರಚನೆಯೇ ಸೈ. ಇದರ ತುಂಬೆಲ್ಲ ದೊಡ್ಡಬಾಯಿ ಚೂಪು ತುದಿಯ ನೀರ ಚೀಲ ಗಳಿರುತ್ತವೆ. ಚೀಲದ ಬಾಯಿಗೆ ಒಳಮುಖವಾಗಿ ಪಾತ್ರ ಬಾಗಿಲಿದೆ. ಅಂಟನಂಥ ಒಂದು ಜಿನುಗು ರಸದಿಂದ ಆಕರ್ಷಣೆ ಹೊಂದಿ ಒಂದು ಕೀಟವು ಈ ಬಾಗಿಲಿಗಿರುವ ಕೇಶಗಳನ್ನು ಮುಟ್ಟಿದ ತಕ್ಷಣ ಬಾಗಿಲು ತೆರೆಯುವುದು. ತೆರೆದ ಬಾಗಿಲಿಂದ ನೀರು ಧಾರಾಕಾರವಾಗಿ ಹರಿದು ಕೀಟವನ್ನು ಕೊಚ್ಚಿಕೊಂಡು ಚೀಲದೊಳಗೆ ಒಯ್ದುಬಿಡುತ್ತದೆ. ಅರ್ಧ ಗಂಟೆಯೊಳಗೆ ಆ ಪ್ರಾಣಿಯ ಇತಿಶ್ರೀಯಾಗಿಬಿಡುವುದು.

ಮಾಂಸಾಹಾರಿ ಸಸ್ಯಗಳ ವಿಚಾರ ಸುದೀರ್ಘ ಸಂಶೋಧನೆ ನಡೆದಿದ್ದರೂ ಕುಳಿತಲ್ಲಿ ಬೇಟೆಯಾಡುವ ಈ ಸೃಷ್ಟಿವೈಚಿತ್ರ್ಯದ ರಹಸ್ಯಗಳನ್ನು ಇನ್ನೂ ಪೂರ್ತಿ ಬಿಡಿಸಲು ಸಾಧ್ಯವಾಗಿಲ್ಲ. ವಿಜ್ಞಾನಿಗಳು ಇನ್ನೂ ಶೋಧಿಸುತ್ತಲೇ ಇದ್ದಾರೆ.



# ನಗೆ—ಮಲ್ಲಿಗೆ

## ಏನೂ ಬೇಡ

ರಾಯರು ತಮ್ಮ ಸ್ನೇಹಿತರೆದುರು, ತಮ್ಮ ಹೆಂಡತಿಯ ವರ್ಣನೆ ಮಾಡತೊಡಗಿದ್ದರು: “ ಯಾವ ವಿಷಯವನ್ನೆ ಎತ್ತಿರಿ, ಅದರ ಮೇಲೆ ಅವಳು ತಾಸುಗಟ್ಟಲೆ ಮಾತಾಡಬಲ್ಲಳು ” ಎಂದರವರು.

ರಾಯರ ಸ್ನೇಹಿತರು “ ಇರಬಹುದು. ಆದರೆ ನನ್ನ ಹೆಂಡತಿ ಯಾವ ವಿಷಯವೂ ಇಲ್ಲದೆ ಹಾಗೆ ಮಾಡಬಲ್ಲಳು ! ” ಎಂದರು.

* *

## ರಾಮಬಾಣ

“ ಡಾಕ್ಟರರೇ, ‘ ಒಂದು ತಿಂಗಳಲ್ಲಿ ನೀವು ಎದ್ದು ನಡೆಯುವಂತೆ ಮಾಡುತ್ತೇನೆ ’ ಎಂದು ನನಗೆ ಹೇಳಿದ್ದಿರಲ್ಲ ! ಹಾಗೇ ಆಯಿತು. ”

“ ವ್ಹಾ ! ಈ ಮಾತು ಕೇಳಿ ನನಗೆ ಆನಂದವಾಯಿತು. ”

“ ಹೌದು. ನಿಮ್ಮ ಬಿಲ್ ಬಂದ ಕೂಡಲೆ ನಾನು ನನ್ನ ಸಾಯಕಲ್ ಮಾರಬೇಕಾಯಿತು. ”

* *

## ಲಿಂಗ ಭೇದ

ಗಂಡಸು ಏನಾದರೂ ಮೂರ್ಖತನ ಮಾಡಿದರೆ ಜನರು “ ಎಂಥ ಮೂರ್ಖ ಆತ ! ” ಎನ್ನುತ್ತಾರೆ.

ಹೆಂಗಸು ಏನಾದರೂ ಮೂರ್ಖತನ ಮಾಡಿದರೆ ಜನರು “ ಎಂಥ ಮೂರ್ಖರು ಈ ಸ್ತ್ರೀಯರು ! ” ಎನ್ನುತ್ತಾರೆ.

## ವ್ಯಾಪಾರೀ ಗತ್ತು !

ಕೈಗಾಡಿಯಲ್ಲಿ ಶೇಂಗಾ ತುಂಬಿಕೊಂಡ
ಇಬ್ಬರು ವ್ಯಾಪಾರ ಮಾಡಿ ಉಪಜೀವನ ಸಾ
ಸುತ್ತಿದ್ದರು. ಅವರಲ್ಲಿ ಒಬ್ಬನಿಗೆ ಗಿರಾಕಿಗಳ
ಬಹಳ. ಇನ್ನೊಬ್ಬನಿಗೆ ಕಡಿಮೆ.

ಒಂದು ದಿನ ಮೊದಲನೆಯವ ತನ್ನ ವ್ಯಾಪ
ರದ ರಹಸ್ಯವನ್ನು ತನ್ನ ಮಿತ್ರನಿಗೆ ಹೇಳಿದ :

“ ತಕ್ಕಡಿಯಲ್ಲಿ ತೂಗುವಾಗ ನಾನು ಬೇಕೆ
ದೇ ಕಡಿಮೆ ಶೇಂಗಾ ಹಾಕುತ್ತೇನೆ. ನಂತ
ಸರಿ ತೂಕ ಬರುವವರೆಗೂ ಒಂದೊಂದಾ
ಶೇಂಗಾ ಹಾಕುತ್ತಿರುತ್ತೇನೆ. ಇದರಿಂದ ಗಿರ
ಕಿಗಳಿಗೆ ಹೆಚ್ಚು ಶೇಂಗಾ ಸಿಕ್ಕಿತು ಎಂ
ಸಮಾಧಾನವೂ ಆನಂದವೂ ದೊರೆಯು
ತ್ತದೆ. ”

* *

## ಸಾಹೇಬ - ಕತ್ತೆ

ತನ್ನನ್ನು ಸಾಹೇಬರು ಕ್ಲಬ್ಬಿನಲ್ಲಿ ಕತ
ಯೆಂದು ಕರೆದರೆಂದು ಸಾಹೇಬಳೊಬ್ಬಳ
ಕೋರ್ಟಿನಲ್ಲಿ ದೂರಿದಳು. ಸಾಹೇಬರಿ
ನ್ಯಾಯಾಲಯವು ದಂಡ ವಿಧಿಸಿತು.

ಖಟ್ಲೆ ಮುಗಿದ ನಂತರ ಸಾಹೇಬರ
ನ್ಯಾಯಾಧೀಶರನ್ನು ಕೇಳಿದರು : “ ಇನ
ನಾನು ಈ ಸಾಹೇಬಳನ್ನು ಕತ್ತೆಯೆಂದು ಕ
ಯಲು ಸಾಧ್ಯವಿಲ್ಲವೇ ? ”

ನ್ಯಾಯಾಧೀಶರು : “ ಇಲ್ಲ. ”

ಸಾಹೇಬರು : “ ಆದರೆ ಯಾವುದೇ ಕತ
ಯನ್ನು ಸಾಹೇಬಳೆಂದು ಕರೆಯಲು ಅಡ್ಡಿಯಿ
ಲ್ಲವಷ್ಟೆ ? ”

ನ್ಯಾಯಾಧೀಶರು : “ ಇಲ್ಲ. ”

ಕೂಡಲೇ ಸಾಹೇಬರು ನಗುತ್ತ ಹೇಳಿದರು
“ ಸಾಕು, ಸಾಹೇಬಳೇ ಸಾಕು ; ಧನ್ಯವಾ
ಗಳು. ”

ಪುರಾತನ ಭಾರತದಲ್ಲಿಯೂ ಆಟಗಳಿದ್ದವು

# ಅಂದಿನವರ ಆಟಗಳು

ಆಟ-ಪಾಟಗಳ ಉದ್ದೇಶವು ಮನೋರಂಜನೆ, ಅಂಗಸಾಧನೆ, ಸಾಮೂಹಿಕ ಶಿಸ್ತು ಪಾಲನೆ ಮುಂತಾಗಿ ನಾನಾ ಬಗೆಯದಾಗಿದೆ. ಪಾಶ್ಚಾತ್ಯ ಸಂಪರ್ಕವುಂಟಾದ ಬಳಿಕ ನಮ್ಮ ದೇಶದಲ್ಲಿ, ಕ್ರಿಕೆಟ್, ಟೆನಿಸ್, ಫುಟ್‌ಬಾಲ, ಬ್ಯಾಡಮಿಂಟನ್ ಮುಂತಾದ ಆಟಗಳು ಹೆಚ್ಚು ಜನಪ್ರಿಯವಾಗಿವೆ.

ಆದರೆ ಮೊದಲಿನವರಿಗೆ ಈ ಆಟಗಳ ಪರಿಚಯು ಕೂಡ ಇರಲಿಲ್ಲ. ಹಾಗೆಂದು ಅವರು ಯಾವ ಆಟಗಳನ್ನೂ ಆಡುತ್ತಿರಲಿಲ್ಲವೆಂದೇನೂ ಅಲ್ಲ. ಪ್ರಾಚೀನ ಭಾರತದ ಕ್ರೀಡೆಗಳು ಬೇರೆ ಬಗೆಯವಾಗಿದ್ದವು.

ಆಟಗಳಲ್ಲಿ ಸಾಮಾನ್ಯವಾಗಿ ನಾಲ್ಕು ಬಗೆಗಳನ್ನು ಹೇಳಬಹುದಾಗಿದೆ. ತಮ್ಮ ಮನಸ್ಸನ್ನು ರಮಿಸುವಂಥದು, ಪ್ರೇಕ್ಷಕರ ಮನಸ್ಸನ್ನು ಪ್ರಸನ್ನಗೊಳಿಸುವಂಥದು, ಧರ್ಮೋತ್ಸವಪ್ರಧಾನವಾದುದು ಮತ್ತು ಇವೆಲ್ಲ ಅಂಶಗಳನ್ನೂ ಒಳಗೊಂಡಿರುವಂಥದು ; ಇವೇ ಈ ನಾಲ್ಕು ಪ್ರಕಾರಗಳೆನ್ನಬಹುದು. ಭಾಗವತದಲ್ಲಿ "ಏವಂ ತಾ ಲೋಕಸಿದ್ಧಾಭಿಃ ಕ್ರೀಡಾಭಿಶ್ಚೇರತುರ್ವನೇ" (ಈ ಪ್ರಕಾರ ಅವರು ಲೋಕ ಪ್ರಸಿದ್ಧ ಆಟಗಳನ್ನು ಅಡವಿಯಲ್ಲಿ ಆಡಿದರು) ಎಂದು ಹೇಳಿದೆ.

ಪ್ರಾಚೀನ ಭಾರತದಲ್ಲಿ ಪ್ರಚಲಿತವಿದ್ದ ಕೆಲವು ಆಟಗಳ ಸಂಕ್ಷಿಪ್ತ ಮಾಹಿತಿಯನ್ನು ಈ ಮುಂದೆ ಹೇಳಿದೆ.

**ಕೃತ್ರಿಮ ವೃಷಭ ಕ್ರೀಡೆ —** ಈ ಆಟದಲ್ಲಿ ಮಕ್ಕಳು ಮೈಮೇಲೆ ಅರಿವೆ ಹೊತ್ತುಕೊಂಡು ಎತ್ತಿನಂತೆ ಇಲ್ಲವೆ ಸಿಂಹದಂತೆ ಧ್ವನಿ ಹೊರಡಿಸುತ್ತ ಕಾದಾಡುತ್ತಿದ್ದರು. ಇದರಲ್ಲಿ ಪಶು-ಪಕ್ಷಿಗಳಂತೆ ಕೂಗುವದು ಸಮಾವೇಶವಾಗಿದ್ದಿತು.

**ನಿಲಯನ ಕ್ರೀಡೆ —** (ಅ) ಒರ್ವ ಹುಡುಗ ಅಡಗಿ ಕೂತಾಗ ಇನ್ನೊಬ್ಬ ಹುಡುಗನು ಅವನನ್ನು ಹುಡುಕಿ ತೆಗೆಯುವದು. ಈ ಆಟದಲ್ಲಿ ಕೆಲವರು ಕಳ್ಳರಾಗುತ್ತಿದ್ದರು ಮತ್ತು ಕೆಲವರು ಶಿಪಾಯಿಗಳಾಗಿ ಅವರನ್ನು ಹುಡುಕಿ ಹಿಡಿಯುತ್ತಿದ್ದರು.

(ಬ) ಈ ಆಟದಲ್ಲಿ ಮಕ್ಕಳಲ್ಲಿ ಮೂರು ಗುಂಪುಗಳಾಗುತ್ತಿದ್ದವು. ಒಂದು ಗುಂಪಿಗೆ ಪಶುಪಾಲಕ, ಎರಡನೆಯದಕ್ಕೆ ಪಶುಚೌರ (ಪಶುಗಳ ಕಳ್ಳ) ಮತ್ತು ಮೂರನೆಯದಕ್ಕೆ ಮೇಷ (ಕುರಿ) ಎಂದು ಕರೆಯುತ್ತಿದ್ದರು. ಪಶುಚೌರರು ಮೇಷ ಗುಂಪಿನವರನ್ನು ಅಪಹರಿಸಿಕೊಂಡು ಹೋಗುತ್ತಿದ್ದರು ಮತ್ತು ಪಶುಪಾಲಕರು ಅವರನ್ನು ಹುಡುಕುತ್ತಿದ್ದರು. ಶ್ರೀಕೃಷ್ಣನು ಈ ಆಟವನ್ನು ಪ್ರಾರಂಭಿಸಿದನು ಎಂದು ಭಾಗವತದಲ್ಲಿ ಉಲ್ಲೇಖವಿದೆ.

**ಮರ್ಕಟೋತ್ಪ್ಲವನ ಕ್ರೀಡೆ—** ಈ ಆಟದಲ್ಲಿ ಮಕ್ಕಳು ಮಂಗಗಳಂತೆ ಅನೇಕ ಗಿಡಗಳನ್ನೇರಿ ಟೊಂಗಗಳಲ್ಲಿ ಅಡಗಿಕೊಂಡು ಕೂಡ್ರುತ್ತಿದ್ದರು. ಅವರನ್ನು ಇತರರು ಕಂಡುಹಿಡಿಯಬೇಕಾಗುತ್ತಿದ್ದಿತು. ಈ ಆಟದ ವಿಚಾರವೂ ಭಾಗವತದಲ್ಲಿ ಇದೆ. ಇಂದಿನ ಗಿಡಮಂಗನ ಆಟವನ್ನು ಇದು ಹೋಲುತ್ತದೆ.

**ಶಿಕ್ಯಾದಿ-ಮೋಷಣ ಕ್ರೀಡೆ—** ಈ ಆಟದಲ್ಲಿ ಚಂಡಿನಂಥ ವಸ್ತುವೊಂದನ್ನು ಅದು ಯಾರದೋ ಅವನಿಗೆ ಕೊಡದೆ ಮತ್ತೊಬ್ಬರೆಡೆಗೆ ಎಸೆಯಲಾಗುತ್ತದೆ. ಒಡೆಯನು ಅದನ್ನು ದೊರಕಿಸುವ ಪ್ರಯತ್ನ ಮಾಡುತ್ತಾನೆ. ಉಳಿದವರು ಅದು ಅವನ ಕೈಗೆ ಸಿಗದಂತೆ ಮಾಡುತ್ತಾರೆ. [illegible] ಬೇಸತ್ತು, "ನನ್ನದನ್ನು ನನಗೆ ಕೊಡಿರಪ್ಪಾ" ಎಂದು ಬೇಡಿ[illegible]ದಾಗ ಆಟ ಮುಗಿಯುತ್ತದೆ.

**ಅಹಮಹಮಿಕಾ ಸ್ಪರ್ಶ ಕ್ರೀಡೆ—** [illegible]ಲ್ಲಿ ದೂರ ಕುಳಿತ [illegible]

ಶ್ರೀಹರಿದತ್ತ ಜಿ ಶಾಸ್ತ್ರಿಯವರ ಲೇಖದ ಆಧಾರದಿಂದ

**ಭ್ರಮಣ ಕ್ರೀಡೆ—** ಈ ಆಟದಲ್ಲಿ ಮಕ್ಕಳು ಪರಸ್ಪರರ ಕೈಹಿಡಿದುಕೊಂಡು ಕುಣಿಯುತ್ತ ನಡೆಯುತ್ತ ಎದ್ದು ಕುಳಿತು ಮಾಡುತ್ತಾರೆ.

**ಗರ್ತಾದಿ ಲಂಘನಕ್ರೀಡೆ—** ಈ ಆಟದಲ್ಲಿ ಹೆಚ್ಚು ದೂರ ಹಾರುವ ಸ್ಪರ್ಧೆ ನಡೆಯುತ್ತದೆ, ಇಂದಿನ ಲಾಂಗ್‌ಜಂಪಿನಂತೆ.

**ಬಿಲ್ವಾದಿ ಪ್ರಕ್ಷೇಪಣ ಕ್ರೀಡೆ—** ಈ ಆಟದಲ್ಲಿ ಬಿಲ್ವಕಾಯಿ ಇಲ್ಲವೆ ಚೆಂಡನ್ನು ಇಬ್ಬರು ಆಚೆ ಈಚೆ ನಿಂತು ಒಂದಕ್ಕೊಂದು ಮಧ್ಯಮಾರ್ಗದಲ್ಲಿ ಟಕ್ಕರ್ ಹೊಡೆಯುವ ಹಾಗೆ ಎಸೆಯುತ್ತಾರೆ. (ಇದಕ್ಕೆ ಗುರಿ ಹೊಡೆಯುವಲ್ಲಿ ಅಪಾರ ಚಾತುರ್ಯ ಬೇಕು.)

**ಅಸ್ಪೃಶ್ಯತ್ವ ಕ್ರೀಡೆ—** ಈ ಆಟದಲ್ಲಿ ಒಬ್ಬನು ಇನ್ನೊಬ್ಬನನ್ನು ಮುಟ್ಟುವ ಪ್ರಯತ್ನ ಮಾಡುತ್ತಾನೆ. ಆತ ತಪ್ಪಿಸಿಕೊಂಡು ಮುಟ್ಟಗೊಡುವದಿಲ್ಲ.

**ನೇತ್ರಬಂಧ ಕ್ರೀಡೆ—** ಇದರಲ್ಲಿ ಒಬ್ಬ ಹುಡುಗನು ಇನ್ನೊಬ್ಬ ಹುಡುಗನ ಹಿಂದೆ ಅವನಿಗೆ ಗೊತ್ತಾಗದಂತೆ ಬಂದು ಅವನ ಕಣ್ಣು ಮುಚ್ಚಿ ಕಣ್ಣಿಗೆ ಪಟ್ಟಿ ಕಟ್ಟುತ್ತಾನೆ. ಕಣ್ಣು ಕಟ್ಟಿಸಿಕೊಂಡವನು ಕಟ್ಟಿದವನ ಗುರುತು ಹಿಡಿಯಬೇಕು. ಇಲ್ಲವೆ,

ಕಣ್ಣಿಗೆ ಪಟ್ಟಿ ಕಟ್ಟಿಕೊಂಡವನು ಉಳಿದ ಹುಡುಗರು ಅಡಗಿಕೊಂಡ ಬಳಿಕ ಕಣ್ಣಿನ ಪಟ್ಟಿ ಬಿಚ್ಚಿ ಅವರನ್ನು ಹುಡುಕಿ ತೆಗೆಯಬೇಕು. ಅಥವಾ ಪಟ್ಟಿ ಕಟ್ಟಿಸಿಕೊಂಡವನು ಒಂದೆಡೆ ಕೂಡ್ರುತ್ತಾನೆ. ಉಳಿದವರು ಬಂದು ಅವನನ್ನು ಮುಟ್ಟುತ್ತಾರೆ. ಮುಟ್ಟಿದವನನ್ನು ಹಿಡಿಯಲು ಪಟ್ಟಿ ಕಟ್ಟಿಸಿಕೊಂಡವನು ಪ್ರಯತ್ನಿಸುತ್ತಾನೆ. ಇಂದಿನ ಕಣ್ಣುಮುಚ್ಚಾಲೆ ಆಟ ಇದರ ರೂಪಾಂತರವೇ.

**ಸ್ಪಂದಾಂದೋಲಿಕಾ ಕ್ರೀಡೆ—** ತೂಗುತ್ತ ತೂಗುತ್ತ ಒಂದು ಜೋಕಾಲಿಯಿಂದ ಇನ್ನೊಂದು ಜೋಕಾಲಿಗೆ ಜಿಗಿದು ತೂಗುವ ಆಟ.

**ದೇವ-ದೈತ್ಯಕ್ರೀಡೆ—** ಈ ಆಟದಲ್ಲಿ ಕೆಲವರು ದೇವತೆಗಳಾಗಿಯೂ ಕೆಲವರು ರಾಕ್ಷಸರಾಗಿಯೂ ಘೂಳನ್ನೆಬ್ಬಿಸುತ್ತಾರೆ. ಛತ್ರಪತಿ ಶಿವಾಜಿಯು ಈ ಆಟವನ್ನು ಆಡುತ್ತ ಯವನರನ್ನು ಪರಾಜಯಗೊಳಿಸುತ್ತಿದ್ದನಂತೆ.

**ಜಲಕ್ರೀಡೆ—** ಎತ್ತರದ ಮೇಲಿಂದ ಜಲಾಶ[ಯ]ದಲ್ಲಿ ಜಿಗಿದು ಪರಸ್ಪರರ ಮೇಲೆ ನೀರು ಉ[...]ವದು; ಈ ಆಟವು ಸ್ತ್ರೀಪುರುಷರ ನಡುವೆಯ[ೂ] ನಡೆಯುತ್ತಿತ್ತು.

**ಕಂದುಕಕ್ರೀಡೆ—** ಈ ಆಟದಲ್ಲಿ ಒಬ್ಬ[...] ಮೇಲಕ್ಕೆಸೆದ ಚೆಂಡನ್ನು ಇತರರು ಕೆಳಗೆ ಬಿ[...] ಗೊಡದೆ ಮೇಲಕ್ಕೆ ಹಾರಿಸುತ್ತಿರುತ್ತಾರೆ. ಈಗಿ[...] 'ವಾಲಿಬಾಲ್' ಮಾದರಿಯ ಆಟ ಇದು.

**ಛಾಲಿಕ್ಯ ಕ್ರೀಡೆ—** ಹೋಳಿಹಬ್ಬದ ಹಾ[...] ಗಳನ್ನು ಹಾಡುತ್ತ ವಾದ್ಯಗಳನ್ನು ಬಾರಿಸುವ[...]

**ನಿಯುದ್ಧಕ್ರೀಡೆ—** ಕುಸ್ತಿಯಾಡಿ ಇಲ್ಲ[...] ಮುಷ್ಟಿಪ್ರಹಾರ ಮಾಡಿ ಆಡುವದು.

**ನೃತ್ಯಕ್ರೀಡೆ—** ಬಾಲಕ—ಬಾಲಿಕೆಯ[...] ಏಕತ್ರ ಇಲ್ಲವೆ ಬೇರೆ ಬೇರೆಯಾಗಿ ಚಪ್ಪಾ[...]ಯಿಕ್ಕಿ ಕುಣಿಯುತ್ತಾರೆ.

**ಅಕ್ಷ ಕ್ರೀಡೆ—**'ಮಹಾಭಾರತ'ಕ್ಕೆ ಕಾ[...]ವಾದ ಪಗಡೆಯ ಆಟ ಈ ಆಟವು ಋಗ್ವೆ[...]ದಲ್ಲಿ ನಿಷೇಧಿಸಲ್ಪಟ್ಟಿದೆ.

**ಮೃಗಯಾ ಕ್ರೀಡೆ—** ಮೃಗಗಳ ಬೆ[...]ಯಾಡುವದು.

**ಪಕ್ಷಿಘಾತ ಕ್ರೀಡೆ—** ಈ ಆಟದಲ್ಲಿ ಹದ್ದಿನ[...] ಪಕ್ಷಿಗಳನ್ನು ಹಿಡಿಯುವದು ಹೇಗೆ ಎಂಬುದ[...] ಕಲಿಸಲಾಗುವದು.

**ಲತೋದ್ವಾಹ ಕ್ರೀಡೆ—** ಬಳ್ಳಿ ಅಥವಾ [...]ವನ್ನು ಬೆಳೆಸಿ ಲಗ್ನ ಮಾಡುವ ಆಟ. ಶಕುಂ[...] ಈ ರೀತಿ ಮಾಡಿದ್ದಳು. ಇಂದಿಗೂ ತುಲ[...] ವಿವಾಹದಂಥ ಧರ್ಮಕಾರ್ಯ ಸ್ವರೂಪದಲ್ಲಿ ಇ[...] ನೆರವೇರಿಸಲ್ಪಡುತ್ತಿದೆ.

**ವೀಟಾ ಕ್ರೀಡೆ—** ಚಿಣಿಫಣಿ ಆಟ. ಮ[...] ಭಾರತದ ಆದಿಪರ್ವದಲ್ಲಿ ಇದರ ಉಲ್ಲೇಖವಿ[...]

**ಕನಕಶೃಂಗ ಕೋಣ ಕ್ರೀಡೆ—** ಪಿಚಕ[...]ಯಿಂದ ಬಣ್ಣ ಹಾಕುವದು.

**ವಿವಾಹ ಕ್ರೀಡೆ—** ವರನು ವಿವಾಹಕಾ[...] ವಧುವಿನ ಮನೆಗೆ ಹೋದಾಗ ವರನ ಮನೆಯ[...]ರುವ ಸ್ತ್ರೀಯರು ವರ ಅಥವಾ ವಧುವಾಗಿ ಆಟವಾಡುತ್ತಾರೆ.

**ಹಲ್ಲೀಶ ಕ್ರೀಡೆ—** ಒಬ್ಬ ಹುಡುಗ, ಬಳಿಕ ಒಬ್ಬ ಹುಡುಗಿ, ಮತ್ತೆ ಒಬ್ಬ ಹುಡುಗ ಅವನ ಹಿಂದೆ ಒಬ್ಬ ಹುಡುಗಿ ಈ ರೀತಿಯಾಗಿ ಕುಳಿತು ಮಂಡಲಾಕಾರವಾಗಿ ತಿರುಗುವದು.

**ಗಾನಕೂರ್ದನ ಕ್ರೀಡೆ—** ಈ ಆಟದಲ್ಲಿ ಕೆಲವರು ಹಾಡುತ್ತಾರೆ, ಕೆಲವರು ಜಿಗಿಯುತ್ತಾರೆ.

**ನೌಕಾ ಕ್ರೀಡೆ—** ಬನಾರಸದಲ್ಲಿ ದಸರಾ ಹಬ್ಬದಲ್ಲಿ ಈ ಆಟ ಜರಗುತ್ತದೆ. ಜನರೆಲ್ಲ ನೌಕೆಗಳನ್ನು ನಡೆಸುತ್ತಾರೆ.

**ಜಲ ಕ್ರೀಡೆ—** ನೀರಿನಲ್ಲಿ ಕುಳಿತು ಭೋಜನಾಧಿ ಕಾರ್ಯಗಳನ್ನು ಮಾಡುವದು. ಜಲಸ್ತಂಭನ ವಿದ್ಯೆ ಬಲ್ಲ ದುರ್ಯೋಧನನು ಈ ರೀತಿ ಮಾಡುತ್ತಿದ್ದನು.

**ಅನುಲಕ ಮುಷ್ಟ್ಯಾದಿ ಕ್ರೀಡೆ—** ಮುಷ್ಟಿ ಮುಚ್ಚಿ ಹಿಡಿದು ಅದರಲ್ಲಿ ಏನಿದೆ ಎಂದು ಕೇಳಿ ಕೇಳಲ್ಪಟ್ಟವನು ಹೇಳಲಾರದೆ ಹೋದರೆ ಅಥವಾ ತಪ್ಪು ಹೇಳಿದರೆ ಅವನನ್ನು ಮುಷ್ಟಿಯಿಂದ ಹೊಡೆಯುವದು.

**ದರ್ದುರ ಪ್ಲಾವಕ ಕ್ರೀಡೆ—** ಕಪ್ಪೆಯಂತೆ ಜಿಗಿಯುತ್ತ ನಡೆಯುವ ಆಟ. ಇಂದಿಗೂ ಈ ಆಟ ಉಳಿದಿದೆ.

**ಕಾವ್ಯವಿನೋದ ಕ್ರೀಡೆ—** ಇದರಲ್ಲಿ ಇಂದಿನ ಚಕ್ರಬಂಧ ಸ್ಪರ್ಧೆಗಳಂತೆ "ಬಿಂದು ಚ್ಯುತಕ", "ಮಾತ್ರಾ ಚ್ಯುತಕ", "ಸಮಸ್ಯಾ ಪೂರ್ತಿ", "ಪ್ರಹೇಲಿಕಾ", "ಖಡ್ಗಬಂಧ", "ಪದ್ಮಬಂಧ" ಇತ್ಯಾದಿ ಪ್ರಕಾರಗಳಿವೆ.

**ವಾಜಿವಾಹ್ಯ ಕ್ರೀಡೆ—** ಕುದುರೆಯ ಮೇಲೆ ಕುಳಿತು ಚಂಡಾಟ ಆಡುವದು. ತುಲಸೀದಾಸನು ಗೀತಾವಲಿಯಲ್ಲಿ ಇದರ ವರ್ಣನೆ ಮಾಡಿದ್ದಾನೆ. ಇದೆ ಪೋಲೋ ಆಟದ ಮೂಲವಿರಬಹುದು.

**ಕರಿವಾಹ್ಯ ಕ್ರೀಡೆ—** ಆನೆಯ ಮೇಲೆ ಕುಳಿತು ಚಂಡಾಟ ಆಡುವದು.

**ಮೃಗವಾಹ್ಯ ಕ್ರೀಡೆ—** ಚಿಗರಿಯ ರಥದ ಮೇಲೆ ಕುಳಿತು ಓಡುವ ಮನುಷ್ಯನನ್ನು ಮುಟ್ಟುವದು.

**ಘಟ ಕ್ರೀಡೆ—** ತಲೆಯ ಮೇಲೆ ಅನೇಕ ಕೊಡಗಳನ್ನಿಟ್ಟುಕೊಂಡು ಬೆಂಕಿಯ ಮೇಲೆ ನಡೆಯುವದು, ಗಳದ ಮೇಲೆ ನಡೆಯುವದು, ಹಗದ ಮೇಲೆ ನಡೆಯುವದು ಇತ್ಯಾದಿ.



**ಉದ್ಯೋಗದ ಪ್ರತ್ಯಕ್ಷ ಮಹಿಮೆಯನ್ನು ತಿಳಿಯಬಯುಸುವೆಯಾದರೆ ಬಿದಿಗೆಯ ಚಂದ್ರನನ್ನು ನೋಡು ; ನಿರಂತರ ಕಷ್ಟಪಡುತ್ತ ಅವನು ಹುಣ್ಣಿಮೆಯ ಪೂರ್ಣ ಚಂದ್ರನಾಗಿ ಬಿಡುವನು.**

—ಮಣಿಮುಕ್ತದಿಂದ

**ಅರಳಿದ ಹೂ ಕೊಯ್ದು ಅದನ್ನೇ ದೇವರ ಚರಣತಲದಲ್ಲಿ ಅರ್ಪಿಸುವವರನ್ನು ನೋಡುತ್ತಿದ್ದೇನೆ ; ಆದರೆ ಆ ಅರಳು ಇದ್ದಲ್ಲಿದ್ದ ಹಾಗೆಯೇ ಭಗವಂತನಿಗೆ ಸಮರ್ಪಿತವಾಗಲಿಲ್ಲವೆ ? ದೇವನ ವಿಶ್ವರೂಪಿ ದೇಹದಲ್ಲಿ ಅದು ಮೊದಲಿನಿಂದಲೇ ಆಭರಣವಾಗಿ ಹೋಗಿರಲಿಲ್ಲವೇ ಎಂದು ನಾನಿನ್ನೂ ವಿಚಾರಿಸುತ್ತಿರುವೆನು.**

—ರಾಮಕೃಷ್ಣ ಪರಮಹಂಸ

# ದಕ್ಷಿಣ ಧ್ರುವದ ಮೇಲೆ ಕಣ್ಣು




ದಕ್ಷಿಣ ಧ್ರುವ ಖಂಡವನ್ನು ಈಗಾಗಲೆ ಕೆಲ ರಾಷ್ಟ್ರಗಳು ತಮ್ಮೊಳಗೆ ಹಂಚಿಕೊಂಡಿದ್ದು ಇದು ವಿವಾದಕ್ಕೆಡೆಗೊಡಬಾರದು.

ಜಗತ್ತಿನ ದೃಷ್ಟಿ ದಕ್ಷಿಣ ಧ್ರುವದ ಕಡೆ ಹರಿಯುತ್ತಿದೆ. ಭಾರತವು ಸಂಯುಕ್ತ ರಾಷ್ಟ್ರ ಸಂಘದಲ್ಲಿ, ದಕ್ಷಿಣ ಧ್ರುವವನ್ನು ಶಾಂತಿಮಯ ಕಾರ್ಯಗಳಿಗಾಗಿ ಉಪಯೋಗಿಸಬೇಕು, ಜಾಗತಿಕ ದ್ವೇಷಕ್ಕೆ ಪುಟವೀಯಲು . ವಿನಿಯೋಗಿಸಬಾರದು, ಎಂಬರ್ಥದ ಗೊತ್ತುವಳಿಯನ್ನು ತರಲು ಉಜ್ಜುಗಿಸಿದೆ.

ಈ ಭೂಮಿಯು ಅತಿ ಚಳಿ ಪ್ರದೇಶವಾದ ... ಮಾನುಷರಿಲ್ಲದ ದಕ್ಷಿಣ ಧ್ರುವದಲ್ಲಿ ಇದೇ... ಬಿಸಿ ಬಿಸಿ? ಅದನ್ನು ಜಾಗತಿಕ ದ್ವೇಷದ ಹ... ಳಕ್ಕೆ ಉಪಯೋಗಿಸುವುದೆಂದರೇನು ?

ದಕ್ಷಿಣ ಧ್ರುವದ ಕಡೆ ದೃಷ್ಟಿಹರಿಯು... ಒಂದು ಮುಖ್ಯ ಕಾರಣ, ೧೯೫೭ ಜುಲೈ ೧ ರಿ... ೧೯೫೮ ಡಿಸೆಂಬರ ೩೧ ರ ವರೆಗೆ ಜಗತ್ತಿನ ... ರಾಷ್ಟ್ರಗಳು ಸಹಕಾರದಿಂದ ಆಚರಿಸಲಿರ... ಭೂ-ಭೌತಿಕ ( geo-physical ) ವರ್ಷ...

" ಭಾರತ ಜ್ಯೋತಿ " ಯಿಂದ ರೂಪಾಂತರ

ವೈಜ್ಞಾನಿಕ ಶೋಧನೆಗೆ ಮೀಸಲಾಗಿರುವ ಈ ಸಾಹಸದಲ್ಲಿ ದಕ್ಷಿಣ ಧ್ರುವವು ಒಂದು ಪ್ರಧಾನ ವಿಷಯವಾಗಿದೆ. ೧೧ ಪ್ರಮುಖ ರಾಷ್ಟ್ರಗಳು (ಇಂಗ್ಲಂಡ್, ಅಮೇರಿಕ. ರಶಿಯ, ಆಸ್ಟ್ರೇಲಿಯ, ನ್ಯೂಝೀಲಂಡ್, ದ. ಆಫ್ರಿಕ, ಫ್ರಾನ್ಸ, ನಾರ್ವೆ, ಅರ್ಜೆಂಟಿನಾ, ಚಿಲಿ ಮತ್ತು ಜಪಾನ) ದಕ್ಷಿಣ ಧ್ರುವದಲ್ಲಿ ಸಂಶೋಧನ ಕಾರ್ಯ ನಡೆಸಲು ಠಾಣೆಗಳನ್ನು ಸ್ಥಾಪಿಸಿವೆ, ಸ್ಥಾಪಿಸುತ್ತಿವೆ. ದಕ್ಷಿಣ ಧ್ರುವದ ಈ ಸಂಶೋಧನೆಯಲ್ಲಿ ವೈಜ್ಞಾನಿಕ ಕುತೂಹಲದಷ್ಟೇ ಆರ್ಥಿಕ ಮತ್ತು ರಾಜಕೀಯ ಹೇತುಗಳಿರುವದರಿಂದ ಅಪಾಯಕರ ಸಂಗತಿಗಳು ಜರಗಬಹುದಾಗಿದೆ.

ರಾಜಕೀಯ ಆರ್ಥಿಕ ವಿಚಾರಗಳನ್ನು ಚರ್ಚಿಸುವ ಮೊದಲು ವೈಜ್ಞಾನಿಕ ಸಂಗತಿಗಳನ್ನು ವಿಚಾರಿಸುವಾ. ದಕ್ಷಿಣ ಧ್ರುವದ ಪರ್ಯಟನದಲ್ಲಿ ೩೧ ವರ್ಷ ಕಾಲವನ್ನು ಕಳೆದ ಅಮೇರಿಕದ ಅಡ್ಮಿರಲ್ ಬರ್ಡರು ಅದರ ವರ್ಣನೆಯನ್ನು ಹೀಗೆ ಮಾಡಿದ್ದಾರೆ:

"ಉತ್ತರ ಧ್ರುವದಂತೆ ದಕ್ಷಿಣ ಧ್ರುವ ಖಂಡವು ತೇಲಾಡುವ ಹಿಮಗಡ್ಡೆಯ ಸಮುದ್ರವಲ್ಲ. ಅದು ೬೦ ಲಕ್ಷ ಚದರ ಮೈಲು ವಿಸ್ತಾರವಾದ ಭೂಖಂಡ. ಯುರೋಪು ಮತ್ತು ಸಂಯುಕ್ತ ಸಂಸ್ಥಾನ ಅಮೇರಿಕ ಇವೆರಡನ್ನು ಸೇರಿಸಿದಷ್ಟು ವಿಶಾಲವಾಗಿದೆ ಅದು. ಅದರಲ್ಲಿ ಅಲ್ಲಲ್ಲಿ ಪರ್ವತಗಳಿದ್ದು ಕೆಲವು ಶಿಖರಗಳು ೧೫,೦೦೦ ಫೂಟೆತ್ತರಕ್ಕೆ ಗಗನವನ್ನು ಭೇದಿಸಿವೆ. ಇವನ್ನು ಬಿಟ್ಟರೆ ಇಡಿ ಖಂಡವೇ ಅನಾದಿ ಹಿಮಗಡ್ಡೆಯ ದಪ್ಪವಾದ ಹಾಳೆಯಿಂದ ಮುಚ್ಚಿದೆ.

"ದಕ್ಷಿಣ ಧ್ರುವಖಂಡ ಉತ್ತರ ಧ್ರುವಕ್ಕಿಂತಲೂ ಕನಿಷ್ಠ ೪೦ ಡಿಗ್ರಿಗಳಷ್ಟು ಶೀತವಾದ ಪ್ರದೇಶ. ಈ ಅಸಹ್ಯ ಚಳಿಯೇ ಆ "ಶ್ವೇತ ದ್ವೀಪ" ವನ್ನು ನಿರ್ಜನವಾಗಿಟ್ಟಿದೆ. ಅದೇ ಕಾರಣದಿಂದ ಅಲ್ಲಿನ ಹನಿ ಭೂಮಿಯಲ್ಲಿ ಬೇರೆಲ್ಲಿಯೂ ಇಲ್ಲದಷ್ಟು ಶುದ್ಧವಾಗಿದೆ. ದಕ್ಷಿಣ ಧ್ರುವಖಂಡದಲ್ಲಿ ಕಾಲಚಕ್ರ ನಿಂತೇ ಹೋದಂತೆ ಕಾಣುತ್ತದೆ. ಅಲ್ಲಿ ಏನೂ ಕೊಳೆಯುವದಿಲ್ಲ, ಜಂಗು (ತುಕ್ಕು) ಹಿಡಿಯುವದಿಲ್ಲ, ಯಾತಕ್ಕೂ ಬುರುಸು ಬರುವದಿಲ್ಲ, ಜೀವಾಣು-ರೋಗಾಣುಗಳಿಲ್ಲ.

"ನಾನೊಮ್ಮೆ ಅಲ್ಲಿ ಸಂಚರಿಸುತ್ತಿದ್ದಾಗ ೩೭ ವರ್ಷ ಹಿಂದೆ ಅಲ್ಲಿ ಬಂದಿದ್ದ ಸಾಹಸಿಗಳು ಬಿಟ್ಟುಹೋದ ಶಿಬಿರವೊಂದು ಸಿಕ್ಕಿತು. ಅವರು ಬಿಟ್ಟಿದ್ದ ಹಲಗೆಗಳು ಹೊಚ್ಚಹೊಸದಾಗಿಯೇ ಉಳಿದಿದ್ದವು. ಮೊಳೆಗಳೆಲ್ಲ ಸ್ವಲ್ಪವೂ ಜಂಗು ತಿನ್ನದೆ ತಳತಳಿಸುತ್ತಿದ್ದವು. ಅಲ್ಲೇ ಒಂದು ನಾಯಿ ಮಂಜಿನ ರಾಶಿಯಲ್ಲಿ ನಿಂತಿತ್ತು. ಅದು ನಮ್ಮ ನಾಯಿಗಳಷ್ಟೇ ಜೀವಂತವಾಗಿ ಕಾಣಿಸುತ್ತಿತ್ತು; ಆದರೆ ನಿಜವಾಗಿ ಅದು ಸತ್ತು ಎಷ್ಟೋ ವರ್ಷಗಳು ದಾಟಿ ಹೋಗಿದ್ದವು.

"ದಕ್ಷಿಣ ಧ್ರುವ ಬಿಂದುವು ಸಮುದ್ರ ಮಟ್ಟದಿಂದ ೧೦,೦೦೦ ಫೂಟೆತ್ತರವಾದ ಪೀಠಭೂಮಿಯ ಮೇಲಿದೆ. ಅದನ್ನು ತಲಪಬೇಕಾದರೆ ೧೫,೦೦೦ ಫೂಟೆತ್ತರದ ಪರ್ವತ ಶ್ರೇಣಿಯನ್ನು ದಾಟಿ ಹಾರಬೇಕು. ಅಲ್ಲಿ (ಉತ್ತರಾಯಣದ) ಸುದೀರ್ಘ ರಾತ್ರಿಯಲ್ಲಿ ಚಳಿ ಶೂನ್ಯಾಂಶಕ್ಕಿಂತ ೧೦೦ ಡಿಗ್ರಿ ಕಡಿಮೆಯುಟ್ಟಿರಬಹುದು."

ಈ ಅಮಾನುಷ ವಾತಾವರಣದಲ್ಲಿ ದಕ್ಷಿಣ ಧ್ರುವಬಿಂದುವಿನಲ್ಲಿ ೧೫ ಜನರ ಒಂದು ಶಾಶ್ವತ ತಂಡಕ್ಕಾಗಿ ಶಿಬಿರ ಸ್ಥಾಪಿಸಬೇಕೆಂದು ಅಮೇರಿಕವು ಸಾಹಸ ಪಡುತ್ತಿದೆ. ಇದರಿಂದ ವೈಜ್ಞಾನಿಕ ಪರಿಶೀಲನೆಗೆ ಅಪಾರ ಸಹಾಯ ದೊರಕುವುದೆಂದು ನಂಬಲಾಗಿದೆ.

ವಿಜ್ಞಾನಿಗಳು ಈ ನಿರ್ಜನ-ನಿರ್ಜೀವ ಪ್ರದೇಶದಲ್ಲಿ ಏನು ನೋಡಬೇಕೆನ್ನುತ್ತಾರೆ? ಪ್ರಥಮತಃ ಜಾಗತಿಕ ಹವಾಮಾನ ಪರೀಕ್ಷೆಗೆ ಅದರ ಮಹತ್ವ ಅಮೂಲ್ಯವಾದದ್ದು. ಅತ್ಯಂತ ಶೀತವೂ ಬಿರುಗಾಳಿಯುಳ್ಳದ್ದೂ ಆದ ಈ ಪ್ರದೇಶವು ಮೇಲ್-ವಾತಾವರಣ (Ionosphere) ದ ಸ್ವರೂಪ ಕಂಡುಹಿಡಿಯಲು ಅತ್ಯಂತ ಉಪಯುಕ್ತವಾಗಿದೆ. ಅಲ್ಲಿನ ಚಳಿಗಾಲದಲ್ಲಿ ತಿಂಗಳುಗಟ್ಟಳೆ ಸೂರ್ಯದರ್ಶನವಿಲ್ಲದಾಗ ಮೇಲ್ವಾತಾವರಣ ಪರೀಕ್ಷೆಯಾದರೆ ಅನೇಕ ರಹಸ್ಯಗಳು ತಿಳಿಯಬಹುದು.

ಹವಾಮಾನ ಭವಿಷ್ಯ ಶಾಸ್ತ್ರಕ್ಕೆ ಇದರಿಂದ ಉಪಕಾರವಾಗದಿರದು. ಇದಲ್ಲದೆ ಭೂಗರ್ಭ ಶಾಸ್ತ್ರ, ಜೀವಶಾಸ್ತ್ರಾದಿ ಸಂಶೋಧನೆಗಳಿಗೂ ಅಲ್ಲಿ ತುಂಬ ಆಸ್ಪದವಿದೆ. ದಕ್ಷಿಣಧ್ರುವದಲ್ಲಿನ ಸಂಶೋಧನೆಗಳಿಂದ ವಿಜ್ಞಾನಕ್ಕೆ ಅನಿರೀಕ್ಷಿತ ಕಾಣಿಕೆಗಳು ದೊರೆಯಬಲ್ಲವು.

ನಿಜ. ಆದರೆ ಇಷ್ಟೇನೆ? ಇಷ್ಟಕ್ಕಾಗಿಯೇ ಪ್ರಮುಖ ರಾಷ್ಟ್ರಗಳು ೨೦ ಕೇಂದ್ರಗಳನ್ನು ಸ್ಥಾಪಿಸಿ ಪರಿಶೀಲನೆ ನಡೆಸಲಿವೆಯೆ? ಅಮೇರಿಕವೊಂದೇ ೩,೦೦೦ ಜನರನ್ನು ದಕ್ಷಿಣಧ್ರುವ ಖಂಡಕ್ಕೆ ಕಳಿಸುವ ಏರ್ಪಾಡಿನಲ್ಲಿದೆ. ಈ ನಿರ್ಜನಾರಣ್ಯದಲ್ಲಿ ಇಷ್ಟೆಲ್ಲ ರಾಷ್ಟ್ರಗಳ ಜನರು ವೈಜ್ಞಾನಿಕ ಸಂಶೋಧನೆಗಳಿಗಾಗಿಯೆ ತಳವೂರುವರೆಂದು ನಂಬಬೇಕೆ?

ಕಷ್ಟ. ಯಾಕಂದರೆ ಇತರ ಆರ್ಥಿಕ, ರಾಜಕೀಯ ಮತ್ತು ಸಮರ ನೈತಿಕ ಪ್ರಶ್ನೆಗಳು ಮುಚ್ಚಲಾರದಷ್ಟು ಪ್ರಕಟವಾಗಿ ಇದರಲ್ಲಿ ಸೇರಿವೆ. ದಕ್ಷಿಣ ಧ್ರುವ ಬಿಂದುವಿನಿಂದ ೧೮೦ ಸಾಮುದ್ರಿಕ ಮೈಲುಗಳ ಮೇಲಿರುವ ರಾಣಿ ಮಾಡ್ ಪರ್ವತ ಶ್ರೇಣಿಯ ಬುಡದಲ್ಲಿ "ಪ್ರಚಂಡವಾದ ಕಲ್ಲಿದ್ದಲಿಯ ಅದುರುಗಳಿರುವುದನ್ನು" ಕಂಡದ್ದಾಗಿ ಅಡ್ಮಿರಲ್ ಬರ್ಡರು ಹೇಳಿದ್ದಾರೆ. ಇತರ ಶೋಧಕರು ಬೇರೆ ಖನಿಜಗಳೂ ಹಿಮದಲ್ಲಿ ಹುಗಿದು ಅಲ್ಲಿರುವ ಲಕ್ಷಣಗಳನ್ನು ಗುರುತಿಸಿದ್ದಾರೆಂದು ಅವರೇ ಬರೆದಿದ್ದಾರೆ. ಪರಮಾಣು ಬಾಂಬುಗಳ ರಚನೆಗೆ ಅತ್ಯವಶ್ಯವಾದ ಯುರೇನಿಯಂ ಧಾತು ಅಲ್ಲಿ ಸಿಗಬಹುದೆಂಬ ಆಶೆಯೂ ಇದೆ.

ಈ ನಿರೀಕ್ಷೆಗಳಲ್ಲಿ ಕೆಲವಾದರೂ ನಿಜವಾಗಿ ಇಲ್ಲಿನ ಖನಿಜಗಳನ್ನು ತೆಗೆಯುವ ಸಾಧ್ಯತೆ ಕಂಡುಬಂದರೆ ಇಲ್ಲಿನ ಪ್ರದೇಶಗಳ ಸ್ವಾಮಿತ್ವದ ಬಗ್ಗೆ ಕಲಹವೇಳುವುದು ಹೆಚ್ಚುಕಡಿಮೆ ಖಂಡಿತವೇ. ಈಗಾಗಲೆ ಈ ಖಂಡದ ಬಹುಭಾಗವನ್ನು ಬೇರೆ ಬೇರೆ ರಾಷ್ಟ್ರಗಳು ತಮ್ಮವೆಂದು ಸಾರಿವೆ. ಕೆಲ ಪ್ರದೇಶಗಳ ಬಗ್ಗೆ ಆಗಲೆ ವಿವಾದವೂ ಇದೆ. ಅಮೇರಿಕವು ಅಧಿಕೃತವಾಗಿ ಹಕ್ಕನ್ನು ಮಂಡಿಸಿರದಿದ್ದರೂ ಸಂದರ್ಭಬಂದರೆ ಸುಮ್ಮನಿರದು. ರಶಿಯವು ಈ ಬೇಡಿಕೆಗಳನ್ನು ಮಾನ್ಯಮಾಡಲಿಕ್ಕಿಲ್ಲ. ಈ ಖಂಡವು ಖನಿಜಸಂಪನ್ನವೆಂದು ಸಿದ್ಧವಾದರೆ ವಿವಾದಗಳು ವಿಕೋಪಕ್ಕೆ ಹೋಗಬಲ್ಲವು.

ಇದರ ಭಾಗಗಳು ಜಲಾಂತರ್ಗಾಮಿಗಳ ಠಾಣೆಯಾಗಲಿಕ್ಕೆ ಯೋಗ್ಯವಾಗಿವೆ. ದಕ್ಷಿಣ ಅಮೇರಿಕ, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕಗಳ ವಿಮಾನಗಳು ದಕ್ಷಿಣಧ್ರುವ ಮಾರ್ಗವಾಗಿ ಒಳ ಹಾದಿಯಿಂದ ಹಾರಲು ಸಾಧ್ಯವಿದೆ. ಇದರಿಂದ ಇದು ಸಮರ ದೃಷ್ಟಿಯಿಂದ ಆಯಕಟ್ಟಿನ ಪ್ರದೇಶವಾಗಿದೆ.

ಇನ್ನೊಂದು ಭಯವೆಂದರೆ ಪ್ರಬಲ ರಾಷ್ಟ್ರಗಳು ಇಲ್ಲಿ ಪರಮಾಣು ಹಾಗು ಇತರ ಭೀಕರ ಶಸ್ತ್ರಗಳನ್ನು ಪರೀಕ್ಷಾರ್ಥವಾಗಿ ಒಗೆಯಬಹುದು. ಗೋಪ್ಯವನ್ನುಳಿಸಿಕೊಳ್ಳಲು ಇದರಂಥ ಸ್ಥಳ ಬೇರೊಂದು ಸಿಗಲಾರದು. ಹೀಗಾದರೆ ಜಾಗತಿಕ ಹವಾಮಾನದ ಮೇಲೆ ಏನು ಪರಿಣಾಮವಾದೀತೆಂದು ಊಹಿಸಲಸಾಧ್ಯ.

ದಕ್ಷಿಣ ಧ್ರುವ ಖಂಡದ ಮೇಲೆ ೮೦೦ ಫೂಟು ಆಳವಾದ ಹಿಮದ ಹಾಳಿ ಹಬ್ಬಿದೆ. ಇದರ ಮೇಲೆ ಬಾಂಬುಗಳು ಸ್ಫೋಟವಾದರೆ ಈ ಹಿಮವು ಒಮ್ಮೆಲೇ ಕರಗಬಹುದು. ಸರ್ ರೇಮಂಡ್ ಪ್ರೀಸ್ಟಲಿಯೆಂಬ ಬ್ರಿಟಿಶ ವಿಜ್ಞಾನಿಯ ಅಭಿಪ್ರಾಯದಲ್ಲಿ ದಕ್ಷಿಣ ಧ್ರುವ ಖಂಡದ ಹಿಮ ಕರಗಿದರೆ ಸಾಗರಗಳ ನೀರು ೧೦೦ ಫೂಟಿನಷ್ಟು ಏರುವ ಭಯವುಂಟು. ಅದು ಲಕ್ಷಗಟ್ಲೆ ಜನರಿಗೆ ಪ್ರಳಯವನ್ನು ತರಬಲ್ಲದು.

ಆದರೆ ದಕ್ಷಿಣ ಧ್ರುವಖಂಡವನ್ನು ಶಾಂತಿ-ಸುಖಗಳಿಗಾಗಿ ವಿನಿಯೋಗಿಸಲೂ ಸಾಧ್ಯವಿದೆ. ಒಂದು ಉದಾಹರಣೆ ಕೊಡುವುದಾದರೆ ಅಡ್ಮಿರಲ್ ಬರ್ಡರೇ ಹೇಳುವಂತೆ ಅಲ್ಲಿ ಪದಾರ್ಥಗಳು ಕೊಳೆಯುವದಿಲ್ಲ, ಕೆಡುವದಿಲ್ಲವೆಂಬುದನ್ನು ಒಂದು ಪ್ರಯೋಜನಕ್ಕೆ ತಿರುಗಿಸಬಹುದು. ಬೆಳೆ ಚೆನ್ನಾಗಿದ್ದ ವರ್ಷಗಳಲ್ಲಿ ಮಿಕ್ಕಿದ ಧಾನ್ಯಗಳನ್ನು ಇಲ್ಲಿ ಮಹಾ ಕಣಜಗಳಲ್ಲಿ ಕಾದಿರಿಸಿದರೆ ಬರಗಾಲದ ವರ್ಷಗಳಲ್ಲಿ ಸಂತ್ರಸ್ತ ದೇಶಗಳಿಗೆ ಹಂಚಲು ಅನುಕೂಲವಾಗುವುದು.

# ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಪ್ರಚೋದನೆ
(ಅ) ಒಂದು ತರಕಾರಿ (ಆ) ಪ್ರಶಂಸೆ (ಇ) ಓಟ (ಈ) ಪ್ರೋತ್ಸಾಹ.

೨. ಅವಸರ
(ಅ) ಸಮಯ (ಆ) ಬೇಗ ಬೇಗ (ಇ) ಸರಿದುಹೋಗು (ಈ) ಒಂದು ನವೀನ ಹಾರ.

೩. ಸಂಗೋಪನ
(ಅ) ಕಾಪಾಡುವುದು (ಆ) ಒಂದು ದನ ಕಾಯುವ ಜಾತಿ (ಇ) ಕೋಪ ತಾಳು ವುದು (ಈ) ಮುಚ್ಚಿಡುವುದು.

೪. ಸಮಂಜಸ
(ಅ) ಸಗರನ ಮಗ (ಆ) ಯೋಗ್ಯ (ಇ) ಅಂಜುಬುರುಕ (ಈ) ಸಾಮಾನ್ಯ.

೫. ಅಮೋಘ
(ಅ) ಮೋಡವಿಲ್ಲದ (ಆ) ಮಹಾ ಪಾಪಿ (ಇ) ಸಾರ್ಥಕ (ಈ) ನಿರರ್ಥಕ.

೬. ಗಣನೀಯ
(ಅ) ಶಿವನ ಸೇವಕ (ಆ) ಪ್ರಾಮುಖ್ಯ (ಇ) ಗೊಣಗುವವ (ಈ) ಒಂದು ಕಾವ್ಯ.

೭. ಅಗಣಿತ
(ಅ) ಬಹಳ (ಆ) ಗಣಿಯಿಂದ ದೊರೆಯದ್ದು (ಇ) ಗರತಿ (ಈ) ಲೆಕ್ಕ ತಿಳಿಯದವ.

೮. ಗುಣಗ್ರಾಹಿ
(ಅ) ಬಿಲ್ಲು (ಆ) ಗುಣವನ್ನು ಮೆಚ್ಚುವವನು (ಇ) ಮಾರ್ಕು ಪಡೆಯುವವನು (ಈ) ಒಂದು ಜಾತಿಯ ಮೊಸಳೆ.

೯. ಮೊರಡು
(ಅ) ಮೊರ (ಆ) ಕಲ್ಲಿನ ರಾಶಿ (ಇ) ಮರದ ತುಂಡು (ಈ) ಬಾಗಿಲಿನ ಬೀಜಾಗ್ರಿ (ಇಂಜಸ್).

೧೦. ದಾರಂದ
(ಅ) ಒಬ್ಬ ಮೊಗಲ ಅರಸು (ಆ) ಬಾಗಿಲಿನ ಕಟ್ಟು (ಇ) ನೂಲುಂಡೆ (ಈ) ಒಬ್ಬ ಋಷಿ.

೧೧. ಹುಂಬ
(ಅ) ಏನೂ ತಿಳಿಯದವ (ಆ) "ಹುಂ" ಎಂಬವನು (ಇ) ಒಂದು ಹಣ್ಣು (ಈ) ಗಂಡುಕೋಳಿ.

೧೨. ಸಲಗ
(ಅ) ಆನೆ (ಆ) ಸರ್ಪ (ಇ) ಸಲಿಕೆ (ಈ) ಒಂದು ಆಯುಧ.

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಪ್ರಚೋದನೆ** (ಈ) ಪ್ರೋತ್ಸಾಹ, ಉತ್ತೇಜನ, ಪ್ರೇರಣೆ. ಉದಾ: ಅವನ ಪ್ರಚೋದನೆಯಿಂದ ನಾನೀ ಕೆಲಸಕ್ಕಿಳಿದೆ. (ಸಂಸ್ಕೃತ) ಪ್ರ + ಚೋದನ ಹೊಡೆದು ಅಥವಾ ಇನ್ನಾವುದೇ ರೀತಿಯಿಂದ ಮುಂದುವರಿಯುವಂತೆ ಮಾಡುವುದು. ಇತ್ತೀಚಿಗೆ ದುಷ್ಟ ಪ್ರೇರಣೆಗೇ ಪ್ರಚೋದನೆಯೆಂದು ಪ್ರಯೋಗಿಸಲಾಗುತ್ತಿದೆ.

೨. **ಅವಸರ** (ಅ) ಸಮಯ; ಅವಕಾಶ; ಸಮಯವಿಲ್ಲದಿರುವುದು- (ಸಂಸ್ಕೃತ) ಅವ + ಸರ=ಸಮಯ, ಸಂದರ್ಭ. ಕನ್ನಡದಲ್ಲಿ ಈ ಶಬ್ದದ ಅರ್ಥ ಪಲ್ಲಟಿಸಿ ಬೇಗ ಬೇಗ ಎಂಬರ್ಥ ಕೊಡುತ್ತಿದೆ. ಉದಾ. ಅವಸರದಿಂದ ಬಂದನು—ಇತ್ಯಾದಿ.

೩. **ಸಂಗೋಪನ** (ಅ) ಕಾಪಾಡುವುದು; ರಕ್ಷಿಸುವುದು; ಸಾಕುವುದು; ಪಾಲನೆ ಪೋಷಣೆ ಮಾಡುವುದು. (ಸಂ) "ಗುಪ್" =ರಕ್ಷಿಸು, ಮುಚ್ಚಿಡು ಧಾತುವಿನಿಂದ.

೪. **ಸಮಂಜಸ** (ಅ) ಯೋಗ್ಯ; ತಕ್ಕ; ಸರಿಯಾದ; ನ್ಯಾಯವಾದ (ಸಂಸ್ಕೃತ) ಸಂ+ಅಂಜಸಾ (ತುಂಬ ಸರಿಯಾದ) ಅಸಮಂಜಸ=ಅಯೋಗ್ಯ, ಸರಿಯಲ್ಲದ್ದು.

೫. **ಅಮೋಘ** (ಇ) ಸಾರ್ಥಕವಾದ, ಸಫಲವಾದ, ವ್ಯರ್ಥವಲ್ಲದ; (ಸಂ.) ಅ= ಅಲ್ಲ, ಮೋಘ=ವ್ಯರ್ಥ. ಉದಾ. ರಾಮ ಬಾಣ ಅಮೋಘವಾದುದು. ಅಮೋಘವಾದ ಭಾಷಣ=ಪರಿಣಾಮಕಾರಿಯಾದ ಭಾಷಣ ಎಂದರ್ಥ.

೬. **ಗಣನೀಯ** (ಅ) ಮುಖ್ಯ; ಲೆಕ್ಕದಲ್ಲಿ ಹಿಡಿಯಲೇ ಬೇಕಾದ; ಗಮನಾರ್ಹವಾದ. "ಗಣ್ಯ" ಎಂದೂ ಪ್ರಯೋಗವಿದೆ. (ಸಂ) ಗಣ =ಎಣಿಸು ಲೆಕ್ಕಿಸು ಧಾತುವಿನಿಂದ

೭. **ಅಗಣಿತ** (ಅ) ಲೆಕ್ಕವಿಲ್ಲದಷ್ಟು; ಅಸಂಖ್ಯ; (ಆದ್ದರಿಂದ) ಬಹಳ. ಎಣಿಸಲು ಬಾರದಷ್ಟು; (ಸಂ) ಗಣ ಧಾತುವಿನಿಂದಲೇ ಹುಟ್ಟಿದ್ದು. ಉದಾ. ಅಗಣಿತ ಗುಣಗಳುಳ್ಳವನು.

೮. **ಗುಣಗ್ರಾಹಿ** (ಅ) ಗುಣವನ್ನು ಮೆಚ್ಚುವವನು; ಒಳ್ಳೇ ಗುಣಗಳ ಪ್ರಶಂಸಕ. ಉದಾ: ರಾಜ್ಯ ನಡೆಸುವವರು ಗುಣಗ್ರಾಹಿಗಳಾಗಿರಬೇಕು. (ಸಂಸ್ಕೃತ) ಗುಣ+ಗ್ರಾಹಿ=ಗುಣಗಳನ್ನು ತೆಗೆದುಕೊಳ್ಳುವವನು, ಸ್ವೀಕರಿಸುವವನು.

೯. **ಮೊರಡು.** ಬೀಜಾಗ್ರಿ; ಇಂಜಸ್; ಎರಡು ಹಲಗೆಗಳನ್ನು ಮಡಚಲು ಬರುವಂತೆ ಜೋಡಿಸುವ ಲೋಹದ ಅಥವಾ ಮರದ ಹಿಡಿಕೆ. ಉದಾ: ಬಾಗಿಲ ಮೊರಡಿಗೆ ಕೈ ಸಿಕ್ಕಿಸಿಕೊಂಡನು. (ಕನ್ನಡ).

೧೦. **ದಾರಂದ** (ಅ) ಬಾಗಿಲ ಚೌಕಟ್ಟು. ದಾರುಂದ, ದಾರವಂದ ಇತ್ಯಾದಿ ಪ್ರಯೋಗಗಳೂ ಇವೆ. (ತದ್ಭವ) ದ್ವಾರ+ಬಂಧ =ಬಾಗಿಲ ಕಟ್ಟು ಎಂಬ ಶಬ್ದದಿಂದ.

೧೧. **ಹುಂಬ** (ಅ) ಏನೂ ತಿಳಿಯದವ; ಹೆಡ್ಡ; ಬುದ್ಧಿಹೀನ; ಭೋಳೇ ಮನುಷ್ಯ. (ಕನ್ನಡ).

೧೨. **ಸಲಗ** (ಅ) ಗಂಡಾನೆ; ಹಿಂಡಿನ ನಾಯಕನಾಗಿರುವ ಆನೆ. (ಕನ್ನಡ).

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ ... ಸಾಧಾರಣ
೯—೧೦ ,, .... ಉತ್ತಮ
—೧೨ ,, .... ಅತ್ಯುತ್ತಮ



ರೋಮಾಂಚಕ
ಸಾಹಸ
ಕಥೆ

# ನಾನು ಖಡ್ಗ ನುಂಗುತ್ತೇನೆ

ಪ್ರಸಿದ್ಧ ಬ್ರಿಟಿಷ ದೊಂಬ ಜೊಲ್ಲೋಡಿಸಿಯ ಆತ್ಮವೃತ್ತಾಂತ

‘ ಬೆಡ್ ಆಫ್ ನೆಯಿಲ್ಸ್ ’ ದಿಂದ ರೂಪಾಂತರ

# ನಾನು ಖಡ್ಗ ನುಂಗುತ್ತೇನೆ

ನಾನು ಹುಟ್ಟಿದ ರಾತ್ರಿ ನನ್ನ ತಂದೆ—ಸ್ನ್ಯಾಪಿ ಆ್ಯಟಂ-ಸೊಕ್ಕಿ ಮದವೇರಿದ್ದ ಗೂಳಿಯೊಂದರ ಮೇಲೆ ಸವಾರಿ ಮಾಡಿದ, ಎರಡು ತೆಂಗಿನಕಾಯಿಗಳನ್ನು ಕೈಯಿಂದ ಗುದ್ದಿ ಒಡೆದ. ತನಗೆ ಮಗ ಹುಟ್ಟಿದ್ದರಿಂದ ಅವನಿಗೆ ಅತ್ಯಾನಂದವಾಗಿತ್ತು.

ನನ್ನ ಅಕ್ಕ-ಬೆಲಿಟಾ, ಕಸರತ್ತಿನ ರಾಣಿಯಾಗಿದ್ದಳು. ಅವಳಿಗೂ ತಮ್ಮನೊಬ್ಬನ ಹಂಬಲ ವಿಶೇಷವಾಗಿತ್ತು. ತಮ್ಮ ಹುಟ್ಟಿದನೆಂಬ ಉಬ್ಬಿನಲ್ಲಿ ಅಂದು ರಾತ್ರಿ ಅವಳು ೮೦ ಅಡಿ ಎತ್ತರದ ಮೇಲೆ ತೂಗುತ್ತಿದ್ದ ಕಾಲುಮಣೆಯ ಮೇಲೆ ಅದ್ಭುತವಾದ ಕಸರತ್ತುಗಳನ್ನು ಲೀಲಾಜಾಲವಾಗಿ ಮಾಡಿ ತೋರಿಸಿಬಿಟ್ಟಳು.

ಆದರೆ ನನ್ನ ತಾಯಿಗೆ ಮಾತ್ರ ಸುಖಪ್ರಸವವಾಗಿರಲಿಲ್ಲ. ನನ್ನನ್ನು ಹೊಟ್ಟೆಯಲ್ಲಿ ಹೊತ್ತು ಅವಳು ಮೂರು ದೇಶಗಳನ್ನು ಸುತ್ತಿದ್ದಳು. ಅದರಿಂದ ಅವಳ ದೇಹ ಬಳಲಿತ್ತು. ಹೆರಿಗೆಯ ಸಮಯದಲ್ಲಿ ಅವಳ ವೇದನೆಯನ್ನು ಕಂಡು ಸಹಿಸದೆ, ನನ್ನ ತಾಯಿಯ ಆರೈಕೆಗೆ ನಿಂತಿದ್ದ ಡೋರಿಸ್ ಡಾಕ್ಟರರನ್ನು ಕರೆಸಬೇಕೆಂದಳು. ಆದರೆ ನನ್ನ ತಂದೆ ಅಭಿಮಾನದಿಂದಲೊ ಅಥವಾ ಮನದಲ್ಲಿ ಬೇರೂರಿದ್ದ ಮೂಢ ನಂಬಿಕೆಯ ಪ್ರಭಾವದಿಂದಲೋ ಡಾಕ್ಟರರನ್ನು ಕರೆಸಲು ಒಪ್ಪಲಿಲ್ಲ. ಆತನ ಕುಟುಂಬದಲ್ಲಿ ಯಾವ ಹೆರಿಗೆಗಾಗಿಯೂ ಡಾಕ್ಟರರನ್ನು ಕರೆಸಿರಲಿಲ್ಲ. ಈಗ ಆ ಪರಂಪರೆಯನ್ನು ಮುರಿಯಬೇಕಾದ ಅಗತ್ಯವೂ ಇರಲಿಲ್ಲ.

## ವಿಲಕ್ಷಣ ಪರಿವಾರ

ನಾನು ಹುಟ್ಟಿದ್ದು ಅಗಸ್ಟ, ೧೯೨೭ ರಲ್ಲಿ. ಡಬ್ಲಿನ್ ನಗರದಲ್ಲಿ ಎರಡು ಆಟದ ಡೇರೆಗಳ ನಡುವೆ ಹಾಕಿದ್ದ ಕಸರತ್ತಿನ ಡೇರೆಯೊಂದರಲ್ಲಿ ನನ್ನ ಜನ್ಮವಾಯಿತು.

ನಮ್ಮ ಡೇರೆಯ ಒಂದು ಮಗ್ಗಲಲ್ಲಿದ್ದ ಡೇರೆಯಲ್ಲಿ ಸಾರ್ವಜನಿಕರ ಮನರಂಜನೆಗಾಗಿ ಅರ್ಧನಗ್ನರಾದ ಆರು ತರುಣಿಯರು ದೇಹದ ಸರ್ವಾಂಗಗಳನ್ನು ನಾನಾವಿಧವಾಗಿ ಕುಣಿಸುತ್ತಲಿದ್ದರು. ಇದು ಈ ಜಾತ್ರೆ ಸಾರ್ವಜನಿಕರಿಗಿತ್ತ ಸಾಂಸ್ಕೃತಿಕ ಕೊಡುಗೆಯಾಗಿತ್ತು. ಈ ತರುಣಿಯರ ವಿಷಯವಾಗಿ ಆಟದವರು, "ನೇರವಾಗಿ ಸುಲ್ತಾನ ನೋರ್ವನ ಅಂತಃಪುರದಿಂದ ಬಂದಿರುವ ಸುಂದರಿಯರು" ಎಂದು ಜಾಹೀರಾತು ಮಾಡಿದ್ದರು. ಇನ್ನೊಂದು ಮಗ್ಗಲಿನ ಡೇರೆಯಲ್ಲಿ "ಮಾನವೀ ಪಿನ್ ಕುಶನ್" ಬಿರುದಾಂಕಿತ ಹಾಸಾಮನ ಆಟವಿತ್ತು.

ಹಾಸಾಮನ ಆಟದ ವೈಖರಿ ಅಪ್ರತಿಮವಾಗಿತ್ತು. ಆತ ತನ್ನ ದೇಹದಲ್ಲಿ ಹಲವಾರು ಗುಂಡುಸೂಜಿ (ಟಾಚಣಿ) ಗಳನ್ನು ನಟ್ಟುಕೊಂಡಾಗ ಜನರು ಮೈಮರೆತು ಚಪ್ಪಾಳೆಯಿಕ್ಕುತ್ತಿದ್ದರು. ವ್ಹಾ! ಭಲೆ! ಭೇಷ್! ಎಂದು ಕೇಕೆ ಹಾಕುತ್ತಿದ್ದರು. ಈ "ಭಲೆ, ಭೇಷ್!" ಗಳೇ ಮೊದಲನೆಯ ದಿನ ನನಗೆ ಜೋಗುಳವಾದವು.

ನನ್ನ ಕುಟುಂಬದ ಊರು ಕಾರ್ಕ್. ಅವರಲ್ಲಿ ಕೆಲವರು ಅಂಗಡಿಕಾರರಾಗಿದ್ದರು. ಕೆಲವರು ಸಂಗೀತಗಾರರಾಗಿದ್ದರು. ನನ್ನ ತಂದೆ, ತಾಯಿ ಮತ್ತು ಅಕ್ಕ ಯಾವ ಜಾತ್ರೆಗೇ ಆಗಲಿ, ಜೀವಕಳೆ ತುಂಬಿಕೊಡುವಂಥ ಕಲಾವಿದರಾಗಿದ್ದರು.

ನನ್ನ ತಂದೆ ಪ್ರತಿಭೀಮನೇ ಆಗಿದ್ದ. ಗಿಡ್ಡವಾಗಿದ್ದರೂ ಅವನದು ಉಕ್ಕಿನ ದೇಹವಾಗಿತ್ತು. ಆತನ ಶಕ್ತಿಪ್ರದರ್ಶನವು ಜನರನ್ನು ದಂಗುಬಡಿಸುತ್ತಿತ್ತು. ಆತನು ತಾಳ್ಮೆಯಿಲ್ಲದ, ಶೀಘ್ರಕೋಪಿಯಾದ, ತನ್ನದಕ್ಕಾಗಿ ಸರಕ್ಕನೆ ಜಗಳ ಕಾಯುವ ಮನುಷ್ಯನಾಗಿದ್ದನು. ಕಂಡರೆ ಅಂಜಿಕೆ ತರುವಂಥ ಮನುಷ್ಯನಾಗಿದ್ದನಾತ.

ಪ್ರತಿನಿತ್ಯ ರಾತ್ರಿ ಆತ ಹತ್ತು ಸಲ ಡೇರೆಯ ಹೊರಗಡೆ ಚಿರ್ಚಿನ ಚರ್ಮದ ಉಡಿಗೆಯನ್ನು ತೊಟ್ಟು ನಿಂತು ತನ್ನೊಡನೆ ಏಕಕಾಲಕ್ಕೆ ಕುಸ್ತಿ ಹಿಡಿದು ಸೋಲಿಸಲು ಮೂವರನ್ನು ಆಹ್ವಾನಿಸುತ್ತಿದ್ದನು. ತನ್ನನ್ನು ಸೋಲಿಸುವ ಯಾವದೇ ಮೂವರು ಬಹಾದ್ದೂರರಿಗೆ ಇಪ್ಪತ್ತು ಪೌಂಡುಗಳ ಬಹುಮಾನವನ್ನು ಕೊಡುವದಾಗಿ ಸಾರುತ್ತಿದ್ದನು. ಆತನ ಆ ಬಲವಾದ ಮೈಕಟ್ಟು ಅಧೈರ್ಯವನ್ನು ಹುಟ್ಟಿಸುತ್ತಿದ್ದರೂ ಇಪ್ಪತ್ತು ಪೌಂಡುಗಳ ಆಸೆಯಿಂದ ಮೈನುಗ್ಗು ಮಾಡಿಕೊಳ್ಳಲು ಸಿದ್ಧರಾಗು

ಹುಂಬರಿಗೂ ಕೊರತೆಯಿರುತ್ತಿರಲಿಲ್ಲ. ಯಾವಾಗಲೂ ಅವರ ಮೈಸುಗ್ಗಾಗುತ್ತಿತ್ತೇ ವಿನಾ ಬಹುಮಾನ ಮಾತ್ರ ಸಿಗುತ್ತಿರಲಿಲ್ಲ. ತನ್ನ ಇಡೀ ವಾರದ ಸಂಬಳ— ಇಪ್ಪತ್ತು ಪೌಂಡುಗಳನ್ನು ಪಣವಾಗಿಡುತ್ತಿದ್ದ ನನ್ನ ತಂದೆ ಈ ಆಹ್ವಾನದಲ್ಲಿ. ಅವನ ಮಾತಂತಿರಲಿ, ಯಾವನಾದರೂ ಸುಲಭದಲ್ಲಿ ಈ ಹಣ ಕೈಬಿಡಲು ಅವಕಾಶವಿತ್ತಾನೇ ?

ನನ್ನ ತಾಯಿ ಭವಿಷ್ಯ ಹೇಳುತ್ತಿದ್ದಳು. ಅವಳು ಬಡವರ ಜ್ಯೋತಿಷಿಯಾಗಿದ್ದಳು. "ಭೂತಕಾಲದ ಘಟನೆಗಳಷ್ಟೇ ಸ್ಪಷ್ಟವಾಗಿ ಭವಿಷ್ಯಕಾಲದ ಘಟನೆಗಳನ್ನೂ ಕಾಣುವ ಜಿಪಿಸಿ ರೋಜ್!" — ಇದು ಅವಳ ಬಿರುದು.

ಅವಳ ಪ್ರಕೃತಿಯೋ ನನ್ನ ತಂದೆಯದಕ್ಕೆ ತೀರ ವಿರುದ್ಧ. ಸೌಮ್ಯ ಸ್ವಭಾವದ, ದಯಾಬುದ್ಧಿಯ ಅವಳು ಎಂದೂ ಯಾರನ್ನೂ ಬಯ್ದವಳಲ್ಲ. ಕೃಶಾಂಗಿಯಾದ ಅವಳ ಮುಖ ಸುಕ್ಕುಗಟ್ಟಿದ್ದರೂ ಪ್ರಾಮಾಣಿಕ ಮುಖವಾಗಿ ತೋರುತ್ತಿತ್ತು. ಡಾಕ್ಟರರು ತಮ್ಮ ರೋಗಿಗಳನ್ನು ಕಾಣುವ ದೃಷ್ಟಿಯಿಂದಲೇ ಅವಳು ತನ್ನೆಡೆಗೆ ಬರುವ ಭವಿಷ್ಯಜ್ಞಾನಾಕಾಂಕ್ಷಿಗಳನ್ನು ಕಾಣುತ್ತಿದ್ದಳು. ಅವರು ಹೇಳಿದ ಗುಟ್ಟುಗಳನ್ನು ಎಂದೆಂದಿಗೂ ರಟ್ಟು ಮಾಡುತ್ತಿರಲಿಲ್ಲ. ಮತ್ತೆ, ತಾನು ಹೇಳುವ ಭವಿಷ್ಯದಲ್ಲಿ ಅವಳಿಗೆ ಅಪಾರ ನಂಬಿಗೆಯಿದ್ದಿತು.

ನನ್ನ ಅಕ್ಕ ಬೆಲಿಟಾ ತಂದೆಯ ಸುಂದರಾಕಾರವನ್ನೂ ಅಸಹನೆಯ ಸ್ವಭಾವವನ್ನೂ ಪಡೆದಿದ್ದಳು. ಜೊತೆಗೆ ಅವಳಲ್ಲಿ ತಾಯಿಯ ಹೃದಯದ ಮೃದುತ್ವವೂ ಮೂಡಿ ಬಂದಿತ್ತು. ಅವಳೆಲ್ಲಿ ಹೋದರೂ ಅವಳ ಸೌಂದರ್ಯಕ್ಕೆ ಮಾರುಹೋದ ಕಣ್ಣುಗಳು. ಅವಳನ್ನು ಹಿಂಬಾಲಿಸುತ್ತಿದ್ದವು. ಆದರೆ ಬೆಲಿಟಾ ಚಕ್ಕಂದದ ಹುಡುಗಿಯಾಗಿದ್ದಳು.

ಕೆಲ ಕಾಲ ಅವಳ ಆರಾಧನೆಯನ್ನು ಓರ್ವ "ಮಾನವೀ ಉಷ್ಟ್ರಪಕ್ಷಿ" ನಡೆಸಿದ. ಈತ ಮೋಹನಾಕಾರದ ಫ್ರೆಂಚನಾಗಿದ್ದನು. ಊಟವಾದ ಬಳಿಕ ಚಮಚೆಯನ್ನು ನುಂಗಿ ಪುನಃ ಅದನ್ನು ಕಾರುವ ಚಟವೊಂದು ಈತನಿಗಿತ್ತು. ಇದರಿಂದ ತನ್ನ ಹೊಟ್ಟೆಗೆ ಹಿತವಾಗುತ್ತದೆ ಎಂದೆನ್ನುತ್ತಿದ್ದನಾತ. ಆದರೆ ಒಮ್ಮೆ ಆತ ನನ್ನ ಅಕ್ಕನ ಬಂಗಾರದ ಗಡಿಯಾರವನ್ನು ನುಂಗಿ ಅದನ್ನು ಕಾರಲು ಅಸಮರ್ಥನಾದಾಗ ನನ್ನ ಅಕ್ಕ ಮತ್ತು ಆತನ ಪ್ರೇಮಾರಾಧನೆಯ ಪ್ರಕರಣ ಮುಕ್ತಾಯವಾಗಿ ಹೋಯಿತು.

ಬಹುಶಃ ಆ ಫ್ರೆಂಚಮನುಷ್ಯ ಆ ಗಡಿಯಾರವನ್ನು ಯಾವುದಾದರೂ ಅಡವಿನ ಅಂಗಡಿಯಲ್ಲಿ ಕಾರಿರಬೇಕು.

ಯಾವ ಒಂದು ಸ್ಥಳದಲ್ಲೂ ನಾವು ಹೆಚ್ಚು ಕಾಲ ಇರುತ್ತಿರಲಿಲ್ಲ. ನನ್ನ ಬಾಲ್ಯವೆಲ್ಲ ಒಂದು ಜಾತ್ರೆಯ ಸ್ಥಳದಿಂದ ಇನ್ನೊಂದು ಜಾತ್ರೆಯ ಸ್ಥಳಕ್ಕೆ ಅಡ್ಡಾಡುವದರಲ್ಲಿಯೇ ಕಳೆದು ಹೋಯಿತು. ನಾನು ಶಾಲೆಗೆ ಹೋಗಿರದಿದ್ದರೂ ಬ್ರಿಟಿಶ್ ನಡುಗಡ್ಡೆಗಳ ಭೂಗೋಲಜ್ಞಾನ ನನಗೆ ಇತರ ಶಾಲಾಬಾಲಕರಿಗಿಂತ ಹೆಚ್ಚಾಗಿಯೇ ಆಯಿತೆನ್ನಲಡ್ಡಿಯಿಲ್ಲ.

ನಾನು ಹಲವಾರು ಆಟಪಾಟಗಳಲ್ಲಿ ಪ್ರವೀಣನಾದೆ. ಮ್ಯಾಟಿ ಆಟಂ ನನಗೆ ಈಸುವದು, ಕುಸ್ತಿಯಾಡುವದು, ಮುಷ್ಟಿಯುದ್ಧ ಮಾಡುವದು ಮುಂತಾದವುಗಳನ್ನೆಲ್ಲ ನಾನು ಆರು ವರ್ಷದವನಾಗುವದರೊಳಗಾಗಿಯೆ ಕಲಿಸಿದ. ಆ ಹೊತ್ತಿಗೆ ನಾನು ಡೇರೆ ಏರಿಸಲು ಇಳಿಸಲು, ನನ್ನ ಅಕ್ಕನ ಕಸರತ್ತಿನ ಸಮಯದಲ್ಲಿ ಹಣ ವಸೂಲು ಮಾಡಲು ಕಲಿತೆ.

ರಾತ್ರಿ ಸಮಯದಲ್ಲಿ ಎಲ್ಲರೊಂದಿಗೆ ಅಗ್ಗಿಷ್ಟಿಕೆಯ ಮುಂದೆ ಕುಳಿತಾಗ ಈ ಸಂಚಾರಿ ಜೀವನದ ಕುಡಿತ, ಪ್ರಣಯ ಮುಂತಾದವುಗಳ ಬಗ್ಗೆ ನಿಜ ಮತ್ತು ಕಟ್ಟುಕಥೆಗಳನ್ನು ಕೇಳುತ್ತ ಅವನ್ನೆಲ್ಲ ಅರಿತುಕೊಳ್ಳಲು ಪ್ರಯತ್ನಿಸುತ್ತಿದ್ದೆ. ಅಸಹ್ಯವೆನಿಸುವಂತಿದ್ದರೂ ಈ ಕಥೆಗಳು ತುಂಬ ಕುತೂಹಲಕಾರಿಯಾಗಿರುತ್ತಿದ್ದವು.

## "ಖಡ್ಗಭಕ್ಷಕನಾಗುವೆ !"

೧೯೩೫ ರಲ್ಲಿ ಲಿಮ್‌ರಿಕ್ ಜಾತ್ರೆಯಲ್ಲಿ ನಮ್ಮ ಆಟಗಳು ನಡೆದಿದ್ದವು. ಹೊರಗಿದ್ದ ನನ್ನನ್ನು ತಂದೆ ಡೇರೆಯೊಳಗೆ ಕರೆದ. ನನ್ನ ಕುಟುಂಬ

ಗಂಭೀರ ಮುಖಮುದ್ರೆ ಧರಿಸಿ ಕುಳಿತಿತ್ತು. ಅವರೆದುರು ಹೋಗಿ ನಿಂತೆ.

ಕೆಲಕಾಲ ಯಾರೂ ಮಾತಾಡಲಿಲ್ಲ.

"ನೀನು ಯಾವದಾದರೊಂದು ಕಸರತ್ತನ್ನು ಕಲಿಯುವ ಕಾಲ ಬಂದಿದೆ" ಎಂದು ನನ್ನ ತಂದೆ ಹೇಳಿದ. ಅವನ ಧ್ವನಿ ಡೇರೆಯ ಅರಿವೆಯನ್ನು ಅಲುಗಾಡಿಸಿತು ಎಂದು ನನಗನಿಸಿತು. ಹೌದು ಎನ್ನುವಂತೆ ನನ್ನ ತಲೆ ನಾನು ಯೋಚಿಸುವ ಮೊದಲೇ ಅಲ್ಲಾಡಿತು. ಆ ಬಳಿಕ ಏನೋ ಒಂದು ಬಗೆಯ ಸಂತೋಷದ ಲಹರಿ ನನ್ನ ದೇಹವಿಡೀ ಸಂಚರಿಸಿದಂತೆ ನನಗೆ ಅನುಭವವಾಯಿತು.

ನನ್ನ ಭವಿತವ್ಯದ ಬಗ್ಗೆ ಏನಾದರೊಂದು ನಿಶ್ಚಿತ ಮಾತನ್ನು ಹೇಳಬೇಕು ಎಂದು ಪ್ರಯತ್ನಿಸಿದೆ. ಆದರೆ ನನ್ನ ಬಾಯಿಂದ ಮಾತ್ರ "ನಾನೇನು ಮಾಡಬಹುದು?" ಎಂಬ ಪ್ರಶ್ನೆ ಹೊರಬಿತ್ತು. ಹದಿಮೂರು ವರ್ಷದ ಹುಡುಗನೊಬ್ಬ ತನ್ನ ಭವಿತವ್ಯವನ್ನು ಕುರಿತು ನಿಶ್ಚಿತ ಮಾತನ್ನು ಹೇಳಬಹುದೇ?

ನನ್ನ ತಾಯಿ ಶಾಂತವಾಗಿದ್ದರೂ ಅನುಭವದ ತೀರ್ಮಾನವನ್ನು ಸಾರುವಂತಿದ್ದ ಧ್ವನಿಯಲ್ಲಿ "ನೀನು ಹಸ್ತಸಾಮುದ್ರಿಕ ಕಲಿಯಲಾರೆ. ತಮ್ಮ ಕೈಯನ್ನು ಗಂಡಸಿಗೆ ತೋರಿಸಿ ಹಣ ಕೊಡಲು ಯಾರೂ ಸಿದ್ಧರಾಗಲಿಕ್ಕಿಲ್ಲ," ಎಂದಳು. ಜ್ಯೋತಿಷ್ಯಶಾಸ್ತ್ರ ನನ್ನದಲ್ಲ ಎಂದಾಯಿತು. ಅದರಂತೆ ಎತ್ತರದ ಮಣೆಯ ಮೇಲೆ ಕಸರತ್ತು ಮಾಡುವದೂ ನನಗೆ ತಕ್ಕದ್ದಲ್ಲ ಎಂದು ತೀರ್ಮಾನವಾಯಿತು. ಕುಟುಂಬದಲ್ಲಿ ಅಂಥ ಕಸರತ್ತು ಮಾಡುವ ಇನ್ನೊಬ್ಬನ ಅವಶ್ಯಕತೆಯಿಲ್ಲ ಎಂದು ನನ್ನ ಅಕ್ಕ ಹೇಳಿದಳು.

ನಾನು ಮರಿ ಜಟ್ಟಿಯಾಗಬೇಕೆಂಬ ನನ್ನ ತಂದೆಯ ಸೂಚನೆಯನ್ನು ನನ್ನ ತಾಯಿ ತಿರಸ್ಕರಿಸಿದಳು. ಅವಳ ಅಭಿಪ್ರಾಯದಲ್ಲಿ ನನ್ನ ಶರೀರವಿನ್ನೂ ಆ ಕಸುಬಿಗೆ ಬೇಕಾದ ರೀತಿಯಲ್ಲಿ ಬಲಿತಿರಲಿಲ್ಲ. "ನೀನು ಹಾವಾಡಿಗನಾಗಬಹುದು. ನಿನಗೆ ಹಾವಾಡಿಗನ ಕಸುಬು ಕಲಿಸಲು ನಾನು ಬಿಗ್ ಪೆಡ್ರೋಗೆ ಹೇಳಬಲ್ಲೆ," ಎಂದಳಾಕೆ.

ಆದರೆ ನಾನು ತಲೆಯಲ್ಲಾಡಿಸಿದೆ. ಹಾವಾಡಿಗನ ಆಟ ನನಗೆ ಸೇರುತ್ತಿರಲಿಲ್ಲ. ಬಿಗ್ ಪೆಡ್ರೋನಂತೆ ಹೆಬ್ಬಾವನ್ನು ಕೊರಳಿಗೆ ಸುತ್ತಿಕೊಳ್ಳುವ ಅಸಾಮಾನ್ಯ ಧೈರ್ಯ ಎಲ್ಲರಿಗೂ ಇರಬೇಕೆಂದರೆ ಹೇಗೆ?

ಜಾತ್ರೆಯ ಕಸಬುದಾರರೆಲ್ಲ ನನ್ನ ಮನದಲ್ಲಿ ಸುಳಿದರು. ಯಾರದೂ ಯಾವದೂ ನನಗೆ ಹಿಡಿಸುವಂತೆ ಕಾಣಲಿಲ್ಲ.

ಅಷ್ಟರಲ್ಲಿ ಗ್ರೇಟ್ ಝೋರೋನ ನೆನಪು ನನಗೆ ಬಂತು. ಆತ ಖಡ್ಗಗಳನ್ನು ನುಂಗುತ್ತಿದ್ದನು. ಅದು ಸುಲಭ ಎಂದು ನನಗನಿಸಿತು. ಆತ ನುಂಗುವದು ಖಡ್ಗದ ಅಲಗಲ್ಲ ಎಂದೇ ನನ್ನ ಕಲ್ಪನೆಯಾಗಿತ್ತು. ಹಿಡಿಕೆಯಲ್ಲಿ ಮರೆಯಾಗುವ ಖಡ್ಗವನ್ನು ನುಂಗುವದೇನು ಮಹಾ! ಆದರೆ ಈ ಸುಲಭ ಜಾದೂ ಪ್ರಯೋಗ ಜನರನ್ನು ಮಾತ್ರ ಬಹುಸಂಖ್ಯೆಯಲ್ಲಿ ಆಕರ್ಷಿಸುತ್ತಿತ್ತು.

ನಾನು ನಿರ್ಧಾರದಿಂದ "ನಾನು ಖಡ್ಗ ನುಂಗುವವನಾಗಬೇಕೆನ್ನುತ್ತೇನೆ," ಎಂದೆ.

ಮೂವರೂ ನನ್ನನ್ನು ದಿಟ್ಟಿಸಿ ನೋಡಿದರು. ಆದರೆ ಅವರಾರೂ ನನ್ನದು ಹುಚ್ಚು ವಿಚಾರ ಎಂದು ಭಾವಿಸಿ ನಗಲಿಲ್ಲ.

"ನಿನಗೆ ಕಲಿಸುವವರಾರು?" ನನ್ನ ತಂದೆ ಕೇಳಿದ.

"ಗ್ರೇಟ್ ಝೋರೊ."

ನನ್ನ ತಂದೆ ತಲೆಯಾಡಿಸಿದ. ಆತನ ಪ್ರಭಾವ ಜಾತ್ರೆಯ ಕಲಾವಿದರ ಮೇಲೆ ವಿಶೇಷವಾಗಿತ್ತು.

"ಖಡ್ಗ ನುಂಗುವದು! ಅದೊಂದು ಒಳ್ಳೆಯ ಆಟ." ನನ್ನ ತಂದೆ ಸಂತೋಷದಿಂದ ಗೊಣಗಿದ. "ಝೋರೋಗೆ ಹೇಳಿ ಆತ ನಿನಗೆ ಕಲಿಸುವಂತೆ ಮಾಡುತ್ತೇನೆ. ನಿನ್ನ ಮುತ್ತಜ್ಜನ ನಂತರದಲ್ಲಿ ನಮ್ಮಲ್ಲಾರೂ ಖಡ್ಗ ನುಂಗುವವರಾಗಿಲ್ಲ."

"ನನ್ನ ಮುತ್ತಜ್ಜನಿಗೇನಾಯಿತು?"

"ಅಕಸ್ಮಾತ್ತಾಗಿ ಖಡ್ಗವೊಂದು ಆತನ ಗಂಟಲನ್ನು ಕತ್ತರಿಸಿತು."

ಮರುದಿನ ಮುಂಜಾನೆ ನನ್ನನ್ನು ತಂದೆ

ಝೋರೋನಲ್ಲಿ ಕರೆದೊಯ್ದಾಗ ಆತ ಖಡ್ಗವೊಂದನ್ನು ತಿಕ್ಕಿ ಹೊಳೆಯುವಂತೆ ಮಾಡುತ್ತಿದ್ದ. ಆತ ನನ್ನ ತಂದೆಗಿಂತಲೂ ಹಿರಿಯನಾಗಿದ್ದ. ಗಿಡುಗನಂತೆ ಮೂಗುಳ್ಳ ಆ ಸ್ಪ್ಯಾನಿಶ್ ಮನುಷ್ಯ ನಮ್ಮನ್ನು ಕಂಡು ತಲೆಯಾಡಿಸಿ ಕುಳಿತುಕೊಳ್ಳಲು ಸೂಚಿಸಿದ.

ಅವನ ಕಾಲ ಬುಡದಲ್ಲಿ ಪೆಟ್ಟಿಗೆಯೊಂದರಲ್ಲಿ ತುಂಬ ಖಡ್ಗಗಳಿದ್ದವು. ಅವುಗಳಲ್ಲಿ ತೀರ ಚಿಕ್ಕದಾಗಿದ್ದ ಖಡ್ಗದ ಅಲಗು ೧೦ ಇಂಚು ಉದ್ದವಾಗಿತ್ತು. ಅತಿ ದೊಡ್ಡದಾದದ್ದಕ್ಕೆ ೧೮ ಇಂಚು ಉದ್ದದ ಅಲಗಿತ್ತು. ಆತನ ಬಳಿ ಬಾಯೊನೆಟ್ಟುಗಳೂ ಒಂದು ಕಾರ್ಕ ಸ್ಕ್ರೂ (ಬೂಚು ತೆಗೆಯುವ ಉಪಕರಣ) ಕೂಡ ಇದ್ದಿತು.

ಯಾವ ಬಗೆಯ ಪೀಠಿಕೆಯನ್ನೂ ಹಾಕದೇ ನನ್ನ ತಂದೆ ನನ್ನ ಬಯಕೆಯನ್ನು ಝೋರೋಗೆ ತಿಳಿಸಿದ. ಆದರೆ ಆತನೇನೂ ಸರಿಯಲಿಲ್ಲ.

"ನೀನಿನ್ನೂ ತುಂಬ ಚಿಕ್ಕವ. ನಿನ್ನ ಗಂಟಲು ಮತ್ತು ಹೊಟ್ಟೆ ಇನ್ನೂ ಖಡ್ಗ ನುಂಗುವ ಮಟ್ಟಕ್ಕೆ ಬಂದಿಲ್ಲ. ಖಡ್ಗ ನುಂಗುವಾಗ ಗಂಟಲು-ಬಾಯಿ ಕೊಯ್ದುಕೊಳ್ಳುವದು ಬಲು ಸಾಮಾನ್ಯ."

"ಆದರೆ ನಾನು ಖಡ್ಗದ ಅಲಗನ್ನೆಲ್ಲಿ ನುಂಗುತ್ತೇನೆ? ಅವು ಖಡ್ಗದ ಹಿಡಿಕೆಯಲ್ಲಿ ಮಡಚಿಕೊಳ್ಳುವದಿಲ್ಲವೇ?" ನಾನು ಕೇಳಿದೆ.

ಮುಂದಿನ ಮೌನ ಗಂಭೀರವಾಗಿತ್ತು. ಝೋರೋನ ಮುಖ ಕಿವುಚಿತು. ಆತ ಕ್ರೋಧದಿಂದ ಕಂಪಿಸಿದ. ಆದರೆ ಆತ ತನ್ನ ಭಾವನೆಯನ್ನು ನಿಯಂತ್ರಿಸಿಕೊಂಡು, "ಹ್ಹಂ! ಖಡ್ಗ ನುಂಗುವ ರೀತಿ ಅದು ಎಂದು ನೀನು ತಿಳಿದಿರುವಿಯೇನು? ನಾನು ಮೋಸಗಾರ ಎಂದು ಕಲ್ಪಿಸಿಕೊಂಡಿರುವಿಯೇನು? ನಿನಗೆಲ್ಲಾ ಗೊತ್ತಿದೆಯೆಂದು ತಿಳಿದಿದ್ದಿಲ್ಲವೆ? ನಿನಗೆ ಗೊತ್ತಿರುವದು ಮಣ್ಣು!" ಎಂದ ತಿರಸ್ಕಾರದ ಧ್ವನಿಯಲ್ಲಿ.

ನನ್ನನ್ನು ಭೂಮಿ ನುಂಗಿಬಿಟ್ಟಿದ್ದರೆ ಚೆನ್ನಾಗುತ್ತಿತ್ತು ಎಂದು ನಾನು ಬಯಸಿದೆ. ನನ್ನ ಕ್ಷಮಾಯಾಚನೆಯನ್ನು ಆತ ಗಮನಿಸಲೇ ಇಲ್ಲ. ನಮ್ಮನ್ನು ಓರಿಗಣ್ಣಿಂದ ನೋಡುತ್ತ ಆತ ಎದ್ದು ಕಾಲು ಅಗಲ ಮಾಡಿ ನಿಂತು ತಲೆಯನ್ನು ಹಿಂದಕ್ಕೆ ಚಾಚಿದ. ತನ್ನ ಗಂಟಲಲ್ಲಿ ೧೬ ಇಂಚು ಉದ್ದದ ಅಲಗಿನ ಖಡ್ಗವನ್ನು ನಿಮಿಷಾರ್ಧದಲ್ಲಿ ಇಳಿಬಿಟ್ಟ. ನಾವಿಬ್ಬರೂ ಭಯಚಕಿತರಾಗಿ ನೋಡುತ್ತ ಕುಳಿತೆವು. ಝೋರೋ ಖಡ್ಗವನ್ನು ಹೊರಗೆ ತೆಗೆದ. ಅವನದು ಕಣ್ಣುಕಟ್ಟಿನ ಕಸರತ್ತಾಗಿರಲಿಲ್ಲ.

"ಹ್ಹಂ! ನಾನು ಮೋಸಗಾರ ಎಂದು ಇನ್ನೂ ಅನ್ನುವಿಯೇನು?" ಆತ ಭುಸುಗುಟ್ಟಿದ. "ನೋಡಿಲ್ಲಿ, ನಿನ್ನ ಕಣ್ಣುಗಳನ್ನು ನಂಬು," ಎನ್ನುತ್ತ ಖಡ್ಗವನ್ನು ನನ್ನ ಕಣ್ಣೆದುರು ಹಿಡಿದ. ಅಲಗಿಗೆ ಹೊಟ್ಟೆಯ ಕರುಳಿನ ಜಿಗುಟು ಹತ್ತಿದ್ದು ಸ್ಪಷ್ಟವಾಗಿ ಕಾಣುತ್ತಿತ್ತು. ನನ್ನ ಅಪನಂಬಿಕೆ ಕರಗಿಹೋಯಿತು.

"ಶಾಂತನಾಗು, ಝೋರೋ. ಜಾತ್ರೆಗಳ ಆಟದಲ್ಲಿ ನಿನ್ನದೇ ಉತ್ತಮ ಎಂದು ನಾನು ಹೇಳುತ್ತೇನೆ. ನಿನಗೆ ಅದರಿಂದ ತುಂಬಾ ಹಣ ಸಿಗುತ್ತಿರಬೇಕು. ನನ್ನ ಮಗ ನಿನ್ನಿಂದ ಖಡ್ಗ ನುಂಗುವದನ್ನು ಕಲಿಯಬಲ್ಲನಾದರೆ ನಾನು ಖಂಡಿತವಾಗಿಯೂ ಧನ್ಯ" ನನ್ನ ತಂದೆ ಹೇಳಿದ.

ತನ್ನ ಹೊಗಳಿಕೆಯನ್ನು ಕೇಳಿ ಝೋರೋ ಪ್ರಸನ್ನನಾದ. ಆದರೆ ಆತ ಮುಂಜಾಗ್ರತೆಯ ಮನುಷ್ಯನಾಗಿದ್ದ. ಇಷ್ಟು ಉತ್ತಮವಾದ ಆಟ ಅವನದೇ ಆಗಿರುವಾಗ ಅದನ್ನು ಇತರರಿಗೆ ಕಲಿಸಿದರೆ ಆತನಿಗೆ ಹಾನಿಯಾಗದೇ? ಆದರೆ ಮ್ಯಾಟಿ ಆ್ಯಟಂ ಬಿಡಬೇಕಲ್ಲ! ಝೋರೋನ ಎದುರು ಇನ್ನೊಂದು ಗಾಳವನ್ನು ಎಸೆದ.

"ಝೋರೋ, ನಿನ್ನ ದೇಹ ಅ[illegible]ಕೃಷ್ಟ ಇದೆ. ನೀನು ನನ್ನ ಮಗನಿಗೆ ಖಡ್ಗ ನುಂಗಲು ಕಲಿಸು. ನಾನು ನಿನ್ನನ್ನು ಪೈಲವಾನನ್ನಾಗಿ ಮಾಡಲು ಪ್ರಯತ್ನಿಸುತ್ತೇನೆ. ನೀನು ಪೈಲವಾನನಾದಿಯೆಂದರೆ ನಿನ್ನನ್ನು ಕಂಡು ಮರುಳಾಗಲಿಲ್ಲ [illegible] ಹುಡುಗಿಯನ್ನು ತೋರಿಸು, ಆಗ ಹೇಳುತ್ತೇನೆ."

ಝೋರೊ ನನ್ನ ತಂದೆಯ ಪುಷ್ಟ ಅವಯವಗಳ ಮೇಲೆ ಕಣ್ಣು ಹಾಯಿಸಿದ. ಝೋರೋ

ಸಾಕಷ್ಟು ಖ್ಯಾತನಾಗಿದ್ದರೂ ಇನ್ನೂ ಹೆಂಡತಿಯನ್ನು ದೊರಕಿಸಿಕೊಳ್ಳಲು ಅಸಮರ್ಥನಾಗಿಯೇ ಉಳಿದಿದ್ದನು.

"ಹಾಂ! ನನ್ನ ದೇಹ ಗಟ್ಟಿಮುಟ್ಟಾಗಿ ಎದೆ ಸೆಟೆದು ನಿಲ್ಲುವಂತಾದರೆ ಸುಲಭದಲ್ಲಿ ಹೆಂಡತಿ ಸಿಕ್ಕಾಳು. ಆಗಲಿ, ನೀನೆನ್ನುವಂತೆ ಆಗಲಿ. ನಾನು ನಿನ್ನ ಮಗನಿಗೆ ಶಿಕ್ಷಕ, ನೀನು ನನಗೆ ಶಿಕ್ಷಕ." ಝೋರೋ ಹೇಳಿದ.

ಮರುದಿನ ಝೋರೋ ನನಗೆ ಖಡ್ಗ ನುಂಗುವದರ ಗುಟ್ಟೆಲ್ಲ ಇರುವದು ಸತತಾಭ್ಯಾಸದಲ್ಲಿ ಎಂದು ತಿಳಿಸಿದ. ಸತತಾಭ್ಯಾಸದ ಹೊರತು ಮತ್ತಾವ ಮಾರ್ಗವೂ ಇಲ್ಲ. ಯಾವ ಕೈಚಳಕವೂ ನಡೆಯದು. ನನ್ನ ಗಂಟಲಲ್ಲಿ ಖಡ್ಗದ ಅಲಗು ನಿರಾಯಾಸವಾಗಿ ಮೇಲೆ ಕೆಳಗೆ ಅಡ್ಡಾಡುವಂತಾಗುವ ವರೆಗೂ ನಾನು ಅಭ್ಯಾಸ ಮಾಡಬೇಕಾಗುವದು ಎಂದಾತ ಹೇಳಿದ.

"ಮತ್ತೆ ನೀನು ಅಂಜಿಕೊಂಡೆಯೊ ನಿನ್ನ ಕಥೆ ಮುಗಿದೇ ಹೋಗುತ್ತದೆ. ಒಮ್ಮೆ ಒಬ್ಬ ಹುಡುಗ ಖಡ್ಗ ನುಂಗಲು ಕಲಿಸೆಂದು ನನ್ನ ಬಳಿ ಬಂದ. ಆದರೆ ಅಲಗು ಗಂಟಲಲ್ಲಿಳಿದ ಕೂಡಲೇ ಆತನ ಕೈಕಾಲು ನಡುಗಿಹೋಯಿತು. ಅವನ ಕುತ್ತಿಗೆ ಬಿಗಿದುಬಿಟ್ಟಿತು. ನಾವೇನೋ ಅಲುಗನ್ನು ಹೊರಗೆಳೆದು ತೆಗೆದೆವಾದರೂ ಮುಂದೆ ಅವನಿಗೆ ಸರಿಯಾಗಿ ತಿನ್ನಲಿಕ್ಕಾಗಲಿ, ಮಾತಾಡಲಿಕ್ಕಾಗಲಿ ಬರಲಿಲ್ಲ. ನಿನ್ನನ್ನು ಹೆದರಿಸಬೇಕೆಂದಲ್ಲ, ಆದರೆ ಗೊತ್ತಿರಲಿ ಎಂದು ಹೇಳಿದೆ."

ಈ ಕಥೆ ಕೇಳುತ್ತಿದ್ದಾಗಲೇ ನನ್ನ ಗಂಟಲು ಬಿಗಿದ ಅನುಭವ ನನಗಾದರೂ ನಾನು, "ಕಥೆ ಹೇಳಿ ಉಪಕಾರ ಮಾಡಿದಿರಿ," ಎಂದೆ.

ಆತ ನನ್ನನ್ನು ಪರೀಕ್ಷಿಸಿದ. ನನ್ನನ್ನು ನಿಲ್ಲಿಸಿ ನೋಡಿದ. ನನ್ನ ನಾಲಿಗೆಯನ್ನು ಚಾಚುವಂತೆ ಮಾಡಿದ. ನನ್ನ ಬಾಯಿಯಿಂದ ನಾಭಿಯ ವರೆಗೆ ಅಳೆದು ಉದ್ದ ೧೫ ಇಂಚು ಇದೆ ಎಂದ. "ನೀನು ಬಹಳೆಂದರೆ ೧೫ ಇಂಚುದ್ದದ ಅಲಗನ್ನು ನುಂಗಬಹುದು. ಅದಕ್ಕೂ ಉದ್ದದ ಅಲಗನ್ನು ನುಂಗಿದರೆ ಹೊಟ್ಟೆ ಸೀಳಿ ಹೋದೀತು. ೧೭ ಇಂಚುದ್ದದ ಅಲುಗನ್ನು ನುಂಗಲು ಯತ್ನಿಸಿದ ಹುಡುಗನೊಬ್ಬನ ಅವಸ್ಥೆ ಏನಾಯಿತೆಂದು ಹೇಳದಿರುವದೇ ವಾಸಿ. ಅಂಥ ಪ್ರಯತ್ನಕ್ಕುದ್ಯುಕ್ತನಾದವನಿಗೆ ಮತ್ತೊಮ್ಮೆ ಪ್ರಯತ್ನ ಮಾಡುವ ಅವಕಾಶವೇ ದೊರೆಯುವದಿಲ್ಲ," ಎಂದನಾತ.

ಆತ ಒಂದು ಸೀಸದ ಗುಂಡಿಗೆ ಅರಿವೆಯ ತುಂಡನ್ನು ಸುತ್ತತೊಡಗಿದ. ಅದನ್ನು ದಾರಕ್ಕೆ ಕಟ್ಟಿ ಎಲ್ಲವನ್ನೂ ಪೆಟ್ರೋಲಿನಲ್ಲಿ ಅದ್ದಿದ. ಅದನ್ನು ನುಂಗಲು ನನಗೆ ಹೇಳಿದ. ನಾನು ಪ್ರಯತ್ನಿಸಿದೆ.

ಆದರೆ ಹುಚ್ಚೆದ್ದವರ ಹಾಗೆ ಆ ಸೀಸದ ಗುಂಡು ಮತ್ತೆ ಮತ್ತೆ ನನ್ನ ಬಾಯಿಗೇ ಬರತೊಡಗಿತಲ್ಲದೆ ಗಂಟಲ ಕೆಳಗೆ ಇಳಿಯಲೇ ಇಲ್ಲ.

"ನೀನು ಬಹಳ ಅವಸರ ಮಾಡುತ್ತಿರುವಿ. ಗುಂಡು ನಿನ್ನ ನಾಲಿಗೆಯ ಮೇಲೆ ಕೆಲ ಕಾಲವಿರಲಿ. ಸ್ವಲ್ಪ ಹೊತ್ತಿನಲ್ಲಿ ನಿನ್ನ ಗಂಟಲಿಗೆ ಅದರ ಅಭ್ಯಾಸವಾಗುತ್ತದೆ" ಝೋರೋ ಹೇಳಿದ.

ನಾನು ಹತ್ತಿಯ ತುಂಡನ್ನು ನನ್ನ ಹಲ್ಲಿನಿಂದ ಕಚ್ಚಿ ಹಿಡಿದು ಮುಂದೊಂದು ತಾಸಿನ ವರೆಗೆ ಗುಂಡನ್ನು ನನ್ನ ನಾಲಿಗೆಯ ಮೇಲೆ ಇಟ್ಟುಕೊಂಡು ಪೆಪ್ಪರಮಿಂಟ ಚಪ್ಪರಿಸುವ ಹಾಗೆ ಚಪ್ಪರಿಸಿದೆ. ಗುಂಡು ನನ್ನ ನಾಲಿಗೆಯ ಮೇಲೆ ಕೂಡ್ರಲು ನಿರಾಕರಿಸಿತು. ಖಡ್ಗ ನುಂಗುವದು ಒಮ್ಮಿಂದೊಮ್ಮೆ ಕಠಿಣ ಕಾರ್ಯವಾಗಿಬಿಟ್ಟಿತು.

ಒಮ್ಮಿಂದೊಮ್ಮೆ, ಆ ಗುಂಡು ನನ್ನ ಗಂಟಲಲ್ಲಿಳಿದುಹೋಯಿತು. ಕಟ್ಟಿದ್ದ ಹತ್ತಿಯ ದಾರದ ತುಣಕಿನ ಬಲದಿಂದ ಅದು ನನ್ನ ಹೊಟ್ಟೆಯೊಳಗೆ ನೇತಾಡತೊಡಗಿತು. ನಾನು ಸರ್ರನೆ ಅದನ್ನು ಕಾರಿ ನೆಲಕ್ಕೆ ಉಗುಳಿದೆ. ಪೆಟ್ರೋಲಿನ ಪಂಚಯವಿಲ್ಲದ ನನ್ನ ಹೊಟ್ಟೆಯ ನರಗಳಿಗೆ ಪೆಟ್ರೋಲಿನಲ್ಲಿ ಮುಳುಗಿಸಿದ್ದ ಈ ಗುಂಡು ಸೇರಿಕೆಯಾಗಿರಲಿಲ್ಲ.

ನಾನು ಮತ್ತೊಮ್ಮೆ ಪ್ರಯತ್ನಿಸಿದೆ. ಈ ಸಲ ನನ್ನ ಗಂಟಲಿನ ನರಗಳು ಏನೂ ವಿರೋಧ ಮಾಡಲಿಲ್ಲ.

ಆ ಗುಂಡನ್ನು ನುಂಗುತ್ತ ಹೊರ ತೆಗೆಯುತ್ತ ಮತ್ತೂ ಒಂದು ತಾಸನ್ನು ಕಳೆದೆ. ಇದರಿಂದ ಝೋರೋಗೆ ಸಮಾಧಾನವಾಯಿತು.

"ಸರಿ. ಈಗ ಖಡ್ಗದೊಡನೆ ಪ್ರಯೋಗ ಮಾಡೋಣ. ಗುಂಡು ನುಂಗುವದಕ್ಕಿಂತ ಖಡ್ಗ ನುಂಗುವದು ತುಸು ಕಠಿಣ. ಆದರೂ ನಿನ್ನ ಪ್ರಾರಂಭ ಚನ್ನಾಗಿಯೆ ಆಗಿದೆ." ಝೋರೋನ ಧ್ವನಿಯಲ್ಲಿ ಪ್ರೋತ್ಸಾಹವಿತ್ತು. ನಾನೆಣಿಸಿದಷ್ಟು ಕೆಟ್ಟವನೇನೂ ಈತ ಅಲ್ಲ ಎಂದುಕೊಂಡೆ.

ಝೋರೋ ನನ್ನ ಕೈಗಿತ್ತ ಖಡ್ಗಕ್ಕೆ ೧೦ ಇಂಚು ಉದ್ದದ ಅಲಗಿತ್ತು. ಅದನ್ನು ಕರವಸ್ತ್ರದಿಂದ ಒರಸಿ ನಾನು ಖಡ್ಗ ನುಂಗುವವನ ಪದ್ಧತಿಯಲ್ಲಿ —ಕಾಲನ್ನು ಸ್ವಲ್ಪ ಅಗಲಿಸಿ, ತಲೆ ಹಿಂದೆ ಚಾಚಿ ಕುತ್ತಿಗೆ ಮತ್ತು ದೇಹ ಒಂದೇ ರೇಖೆಯಲ್ಲಿ ಬರುವಂತೆ ನಿಂತೆ. ಆದರೆ ಆ ಉಕ್ಕಿನ ಅಲಗಿನ ಸ್ಪರ್ಶವಾದೊಡನೆ ನನ್ನ ಗಂಟಲ ಸ್ನಾಯುಗಳು ಸಂಕುಚಿತವಾದವು. ಅವಸರ ಪ್ರಯೋಜನಕ್ಕೆ ಬರುತ್ತಿರಲಿಲ್ಲ.

## ಮಂಗಗಳು ನೆರವಾದವು

ಒಂದು ವಾರ ಕಳೆಯಿತು. ಊಟ ಮಾಡುವದು, ಖಡ್ಗ ನುಂಗಲೆತ್ನಿಸುವದು, ವಾಂತಿ ಮಾಡಿಕೊಳ್ಳುವದು ಮತ್ತು ನಿದ್ರೆಮಾಡುವದರಲ್ಲಿ ಈ ಏಳು ದಿನಗಳು ಕಳೆದವು. ನನ್ನ ಗಂಟಲು ಅಲಗಿನ ಸ್ಪರ್ಶದಿಂದ ಕೆತ್ತಿದಂತಾಗಿತ್ತು. ಹೊಟ್ಟೆಯ ಸ್ನಾಯುಗಳು ಅತಿ ಕೆಲಸದಿಂದ ದಣಿದು ನೋಯುತ್ತಿದ್ದವು. ಖಡ್ಗ ನುಂಗುವದು ಎಷ್ಟು ಸುಲಭದ ಕೆಲಸ ಎಂಬುದನ್ನು ನನಗೆ ಮನಗಾಣಿಸಿ ಕೊಡಲು ಝೋರೋ ತನ್ನಲ್ಲಿದ್ದ ಅತಿ ಉದ್ದ ಖಡ್ಗವನ್ನು ನುಂಗಿ ತೋರಿಸಿದ. ಆದರೂ ವಾರ ಮುಗಿದಾಗ ನನ್ನ ಗಂಟಲಿಗಿಂತ ಕೆಳಗೆ ಖಡ್ಗದ ಅಲಗು ಹೋಗಿರಲಿಲ್ಲ.

ನಂತರ ನಾವು ಗಾಲವೇದದಲ್ಲಿದ್ದಾಗ ಒಂದು ಮುಂಜಾನೆ ಬಯಲಿನಲ್ಲಿ ನಿಂತು ನಾನು ಖಡ್ಗವನ್ನು ನುಂಗಲು ಪ್ರಯತ್ನಿಸುತ್ತ, "ಏನೇ ಆಗಲಿ, ಇಂದು ಈ ಖಡ್ಗವನ್ನು ಗಂಟಲೊಳಗೆ ದಬ್ಬಿಯೆ ಬಿಡುತ್ತೇನೆ" ಎಂದು ಯೋಚಿಸುತ್ತ ನಿಂತಿದ್ದಾಗ "ಹೋದವು. ನನ್ನ ಮಂಗಗಳು ಹೋದವು. ಯಾರೋ ಅವನ್ನು ಕದ್ದೊಯ್ದರು" ಎನ್ನುತ್ತ ಕ್ರಿಪೋ ಎಂಬಾತನು ಕೂಗಿಕೊಂಡನು. ಕೂಗು ಮುಗಿಯುವಷ್ಟರಲ್ಲಿ ಆತನು ಬಿಕ್ಕಿಬಿಕ್ಕಿ ಅಳತೊಡಗಿದ್ದು ಕೇಳಿಸಿತು. ಆ ಮಂಗಗಳನ್ನು ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಕ್ರಿಪೋನ ಅಳುವನ್ನು ಕೇಳಿ ನನಗೆ ಮರುಕ ವುಂಟಾಯಿತು.

ಅಷ್ಟರಲ್ಲಿ ನನ್ನ ಹೊಟ್ಟೆಯಲ್ಲಿ ಭಾರವಾದ ಕಲ್ಲನ್ನಿಟ್ಟಿರುವಂತೆ ಅನಿಸಿತು. ನಾನು ಕೂಗಲು ಪ್ರಯತ್ನಿಸಿದಾಗ ಖಡ್ಗದ ಹಿಡಿಕೆ ನನ್ನ ಹಲ್ಲುಗಳಿಗೆ ಬಡಿಯಿತು. ಕ್ರಿಪೋನ ಮಂಗ ಕಳೆದ ಗದ್ದಲದಲ್ಲಿ ನಾನು ಖಡ್ಗದ ಅಲಗನ್ನು ನುಂಗಿ ಬಿಟ್ಟಿದ್ದೆ.

ನಾನು ಸಾವಕಾಶವಾಗಿ ಅಲುಗನ್ನು ಹೊರಗೆಳೆದು ತೆಗೆದೆ. ಮತ್ತೆ ಅದನ್ನು ಗಂಟಲಿನಿಂದ ಕೆಳಗಿಳಿಸಿದೆ, ಹೊರಗೆ ತೆಗೆದೆ, ಮತ್ತೆ ನುಂಗಿ ಮತ್ತೆ ಹೊರಗೆ ತೆಗೆದೆ. ೧೦ ನಿಮಿಷಗಳ ವರೆಗೆ ಇದೇ ಉದ್ಯೋಗವನ್ನು ಮಾಡಿದೆ. ಈ ನಿಮಿಷಗಳು ನನ್ನ ಜೀವನದ ಸಾರ್ಥಕ ನಿಮಿಷಗಳಾಗಿದ್ದವು.

ಮುಂದಿನ ಕೆಲ ದಿನಗಳು ಈ ಸಂಭ್ರಮದಲ್ಲಿಯೆ ಕಳೆದವು. ನನ್ನ ತಾಯಿ ನಾನು ನುಂಗುವದಕ್ಕಾಗಿ ಎಲ್ಲಿಂದಲೋ ಹಳೆಯ ಕಾಲದ, ಉತ್ಸವ ಪ್ರಸಂಗಗಳಲ್ಲಿ ಉಪಯೋಗಿಸುತ್ತಿದ್ದ ಖಡ್ಗಗಳನ್ನು ಸಂಪಾದಿಸಿದಳು. ನಾನು ಪರಮಾವಧಿ ಎಂದರೆ ೧೫ ಇಂಚು ಉದ್ದದ ಅಲಗನ್ನು ನುಂಗಬಲ್ಲವನಾಗಿದ್ದೆ.

ಕೊನೆಗೆ ಆ ದಿನವೂ ಬಂತು. ನನ್ನ ಕುಟುಂಬದವರು ದಕ್ಷಿಣದಲ್ಲಿಯ ಒಂದು ಜಾತ್ರೆಗೆ ತೆರಳಲಿದ್ದರು. ನಾನು ಮತ್ತು ಝೋರೋ ಉತ್ತರ ದಿಕ್ಕಿಗೆ ಪ್ರಯಾಣ ಬೆಳೆಸಲಿದ್ದೆವು. ನಾನು ದುಃಖಿತಾಂತಃಕರಣದಿಂದ ಮನೆಯವರನ್ನು ಬೀಳ್ಕೊಂಡೆ.

## ನಾನು ಸಾರ್ವಜನಿಕ ಪ್ರದರ್ಶನ ಮಾಡಿದೆ

ಜಾತ್ರೆಯಲ್ಲಿ, ಝೋರೋ ನನ್ನನ್ನು ಜನರೆದುರು ನಿಲ್ಲಿಸಿ, "ಈತ ಮಿಚೆಲ್, ಅದ್ಭುತ ಮನುಷ್ಯ. ಜಗತ್ತಿನಲ್ಲಿಯ ಖಡ್ಗ ನುಂಗುವವರಲ್ಲಿ ಈತನೇ ಕಿರಿಯ. ಈತನ ತಾಯಿ ಈತನನ್ನು ಹಡೆಯುವ ಮೊದಲು ಚಮಚೆಯೊಂದನ್ನು ನುಂಗಿದ್ದಳು. ನುಂಗುವ ಪರಂಪರೆ ಈತನ ಕುಟುಂಬಕ್ಕೆ ಬಂದಿದೆ" ಎಂದು ನನ್ನ ಬೆನ್ನು ಚಪ್ಪರಿಸಿದಾಗ ನನ್ನ ಹೃದಯ ಉತ್ಸಾಹದಿಂದ ಹಿಗ್ಗಿ ಹೋಯಿತು.

ನಾನು ಚಿಕ್ಕದೊಂದು ಖಡ್ಗವನ್ನೂ ನುಂಗಿದೆ. "ಹ್ಹಾ !" ಜನರ ಬಾಯಲ್ಲಿ ಉದ್ಗಾರ ಹೊರಟಿತು.

"ನೋಡಿದಿರಾ, ಗೃಹಸ್ಥರೇ ? ಈ ಅಸಾಧ್ಯ ಹುಡುಗನನ್ನು ಕಂಡು ಜಗತ್ತಿನ ಡಾಕ್ಟರರಿಗೆಲ್ಲ ಆಶ್ಚರ್ಯವೆನಿಸಿಬಿಟ್ಟಿದೆ. ಇದು ದೇವರು ಈತನಿಗಿತ್ತ ವರ. ಇದರಲ್ಲಿ ಕಣ್ಣುಕಟ್ಟೇನೂ ಇಲ್ಲ. ಈ ಹುಡುಗ ಖಡ್ಗವನ್ನು ನುಂಗುವದು ಸುಳ್ಳು ಎಂದು ಸಿದ್ಧಪಡಿಸುವವನಿಗೆ ನಾನು ೫ ಪೌಂಡು ಬಹುಮಾನ ಕೊಡುತ್ತೇನೆ."

ಇಷ್ಟೆಂದು ಝೋರೋ ಕ್ವತಕ ನೋಟುಗಳ ಕಟ್ಟೊಂದನ್ನು ಹಿಡಿದು ಜನರಿಗೆ ತೋರಿಸಿದ. ಮತ್ತೆ ಜನರಿಗೆ ಹೇಳಿದ :

"ಇನ್ನು ನಾವು ಡೇರೆಯೊಳಗೆ ನಿಜವಾದ ಆಟವನ್ನು ಪ್ರಾರಂಭಿಸುತ್ತೇನೆ. ಅದನ್ನು ನೋಡಲು ನೀವು ತಲಾ ಆರು ಪೆನ್ನುಗಳನ್ನು ಕೊಡಬೇಕಾಗುವದು. ಆಟ ಮನಸ್ಸಿಗೆ ಬಾರದಿದ್ದರೆ ನಿಮ್ಮ ಹಣವನ್ನು ನೀವು ತಿರುಗಿ ಕೇಳಬಹುದು. ಅಂದರೆ ನೀವು ಕೇಳಬಹುದು, ಅಷ್ಟೆ ಹಣ ತಿರುಗಿ ನಿಮಗೆ ಸಿಗುತ್ತದೆಂದೇನೂ ಅಲ್ಲ !"

ಝೋರೋನ ಮಾತು ಜನರಲ್ಲಿ ನಗೆಯ ತೆರೆಯನ್ನೆಬ್ಬಿಸಿತು. ದೂರವಿದ್ದ ಜನರನ್ನೂ ಈ ನಗೆ ಆಕರ್ಷಿಸಿತು.

ಝೋರೋ ಮೊದಲು ರೇಝರ ಬ್ಲೇಡುಗಳನ್ನು ನುಂಗಲು ಯತ್ನಿಸುವವನಂತೆ ನಟಿಸಿ ಆಟವನ್ನು ಪ್ರಾರಂಭಿಸಿದ. ಅದು ಹೇಗೊ ಅವನ್ನು ಬಾಯಮೇಲಂಗಳಕ್ಕೆ ಕೂಡ್ರಿಸಿಕೊಂಡು ಆತ ನುಂಗುವವನಂತೆ ಅನೇಕ ಸಲ ಮುಖಮುದ್ರೆಮಾಡಿ ಬಳಿಕ ಅವನ್ನೆಲ್ಲ ಉಗುಳಿದ.

ಆಮೇಲೆ ಒಂದು ಕಾರ್ಕಸ್ಕ್ರೂ (ಬೂಚು ತೆಗೆಯುವ ಸ್ಕ್ರೂ) ವನ್ನು ಗಂಟಲಿನಲ್ಲಿ ತುರುಕಿದ; ಆಗ ಆತನ ಗಂಟಲು ಪಟ್ಟ ಪರಿಪಾಟಲನ್ನು ಕಂಡು ಜನರು "ಹ್ಹಾ !" ಎಂದರು. ಅನೇಕ ಹೆಂಗಸರು ಚೀರಿಕೊಂಡರಾದರೂ ಅವರ ಮುಖಗಳೇನೂ ಗಂಡಸರ ಮುಖಗಳಂತೆ ವಿವರ್ಣವಾಗಿರಲಿಲ್ಲ. ಆಟ ಅಸಹ್ಯ, ಭೀಕರವಾಗಿದ್ದಷ್ಟು ಹೆಂಗಸರಿಗೆ ಹೆಚ್ಚು ಮೆಚ್ಚಿಗೆಯಾಗುವದೆಂಬ ಮಾತೂ ಒಂದು ವಿಚಿತ್ರವೇ !

ಕೆಲ ನಿಮಿಷಗಳ ನಂತರ ಝೋರೋ ಆ ಕಾರ್ಕಸ್ಕ್ರೂವನ್ನು ಹೊರತೆಗೆದು ಅದನ್ನು ಪರೀಕ್ಷೆಗಾಗಿ ಜನರ ಕೈಗಿತ್ತ. ಏನೋ ಮಹಾ ಕಾರ್ಯ ಮಾಡುವಂತೆ ಮುಖದಲ್ಲಿ ಭಾವ ಮೂಡಿಸಿಕೊಂಡು ಜನ ಅದನ್ನು ಮುಟ್ಟಿ, ಮೂಸಿ ನೋಡಿದರು.

ಬಳಿಕ ಝೋರೊ ಹದಿನೆಂಟು ಇಂಚು ಉದ್ದವಿದ್ದ ಅಲಗನ್ನು ಕೈಗೆತ್ತಿಕೊಂಡ. ಸಾವಕಾಶವಾಗಿ, ಆತ ಅದನ್ನು ನುಂಗತೊಡಗಿದ. ಆತ ಅಲುಗಿನ ಮೇಲೆ ಸಾಧ್ಯವಿದ್ದಮಟ್ಟಿಗೂ ತುಟಿಗಳನ್ನು ಹೊರಚಾಚಿದ್ದರಿಂದ ಆತ ನಿಜವಾಗಿ ನುಂಗಿದ್ದಕ್ಕಿಂತಲೂ ಹೆಚ್ಚಿನ ಭಾಗವನ್ನು ನುಂಗಿದಂತೆ ಕಾಣುತ್ತಿತ್ತು.

ಝೋರೊ ಖಡ್ಗವನ್ನು ಹೊರತೆಗೆದು ಜನರಿಗೆ ವಂದಿಸಿದ. ಬಳಿಕ ನಾನು ಪ್ರಾರಂಭಿಸಿದೆ. ಮೊದಲು ಸಣ್ಣ ಖಡ್ಗವೊಂದನ್ನು ನುಂಗಿದೆ. ಅನೇಕ ಚಿಕ್ಕ ಖಡ್ಗಗಳನ್ನು ನುಂಗಿದ ನಂತರ ಕೊನೆಯಲ್ಲಿ ೧೫ ಇಂಚು ಅಲಗಿನ ಖಡ್ಗವನ್ನು ನುಂಗಿದೆ.

ಆಟ ಮುಗಿಯಿತು. ಡೇರೆಯು ಅರಿವೆಯನ್ನೆತ್ತಿ ಒಳಗಿದ್ದವರನ್ನು ಹೊರಬಿಟ್ಟೆ. ಅಷ್ಟರಲ್ಲಿ ಝೋರೋ ಹೊರಗೆ ಹೋಗಿ ಮತ್ತೆಹೊಸ ಜನರನ್ನು ಆಕರ್ಷಿಸುವ ಕಾರ್ಯಕ್ಕೆ ತೊಡಗಿದ್ದನು. ನಾನೂ ಹೋಗಿ ಅವನ ಬಳಿ ನಿಂತೆ.

ಅಂದು ನಮ್ಮ ಆಟ ಬೇಗನೇ ಮುಗಿಯಿತು. ಒಂದು ದಿನಕ್ಕೆ ಮೂರಕ್ಕಿಂತ ಹೆಚ್ಚು ಸಲ ಖಡ್ಗ ನುಂಗಲು ಝೋರೋ ನನಗೆ ಬಿಡುತ್ತಿರಲಿಲ್ಲ.

"ಬೇಡವೆಂದು ನಾನಂದಾಗ ನಿನಗೆ ತಾಪವಾಗುತ್ತದೆ ಎಂದು ನಾನು ಬಲ್ಲೆ. ನನಗೂ ಮೊದಲು ಹಾಗೇ ಅನಿಸುತ್ತಿತ್ತು. ಯಾವಾಗಲೂ ಖಡ್ಗ ನುಂಗುತ್ತಲೇ ಇರಬೇಕೆಂಬ ಚಾಪಲ್ಯವಿತ್ತು. ಅದರ ಪರಿಣಾಮವೇನಾಯಿತು? ಖಡ್ಗ ನುಂಗುವದು ಎಂದರೆ ಮೈಮೇಲೆ ಮುಳ್ಳೇಳುವಷ್ಟು ಬೇಸರ ಹುಟ್ಟಿಬಿಟ್ಟಿತು. ಜೀವನದ ಸೊಗಸೇ ಮಾಯವಾಯಿತು" ಎಂದು ಝೋರೊ ಹೇಳಿದ.

"ಮತ್ತೆ ಪುನಃ ಖಡ್ಗ ನುಂಗುವದರಲ್ಲಿ ಆಸಕ್ತಿ ಹೇಗೆ ಬಂತು?"

"ಓ! ಅದೇ? ಎಕ್ಸಲ್ ಗ್ರೀಸ್ (ಯಂತ್ರದ ಚರ್ಬಿ) ತಿಂದಿದ್ದರಿಂದ ಮತ್ತೆ ಮೊದಲಿನ ಆಸಕ್ತಿ ಕೆರಳಿತು. ಪ್ರತಿ ರಾತ್ರಿ ಸುಮಾರು ೨ ಪೌಂಡಿನಷ್ಟು ಎಕ್ಸಲ್ ಗ್ರೀಸ್ ತಿನ್ನುತ್ತಿದ್ದೆ. ಸಾರ್ವಜನಿಕರಿಗೆ ಈ ಆಟವೂ ಮೆಚ್ಚಿಗೆಯಾಯಿತು. ಗ್ರೀಸಿನ ರುಚಿಗೆ ಒಗ್ಗಿಕೊಂಡಾಗ ಅದನ್ನು ತಿನ್ನುವದೇನು ಕಠಿಣವಲ್ಲ. ತನ್ನ ಕಂಪನಿಯ ಹೆಸರನ್ನು ಪ್ರಚಾರಮಾಡುವದಾದರೆ ನನಗೆ ಬೇಕಾಗುವಷ್ಟು ಗ್ರೀಸನ್ನು ಪುಕ್ಕಟೆ ಪೂರೈಸುವದಾಗಿ ಒರ್ವ ಕಾರಖಾನೆದಾರ ಹೇಳಿದ. ಆದರೆ ಮುಂದೆ ನನ್ನ ಕೂದಲು ಉದುರತೊಡಗಿದವು. ಗ್ರೀಸ್ ತಿನ್ನುವದನ್ನು ಬಿಡಬೇಕಾಯಿತು."

## ಸಾಧಿಸಿದರೆ ಸಬಳ ನುಂಗಬಹುದು

ತಿಂಗಳುಗಳು ಜಾರಿದವು. ನಾನು ದಷ್ಟಪುಷ್ಟನಾಗಿ ಬೆಳೆದೆ.

ನನ್ನನ್ನು ಸಾಕುಮಗನಂತೆ ಝೋರೋ ಕಾಣುತ್ತಿದ್ದ. ನನ್ನ ಜೀವನದಲ್ಲಿ ನಾನು ಯಶಸ್ವಿಯಾದೆ ಎಂದು ಆತ ಅನ್ನತೊಡಗಿದ. ನಿಜವಾಗಿಯೂ ಖಡ್ಗ ನುಂಗಬಲ್ಲವರು ಕಡಿಮೆ ಎಂಬ ಸತ್ಯ ನಮ್ಮಿಬ್ಬರಿಗೂ ಗೊತ್ತಿತ್ತು.

ಒಂದು ದಿನ ಝೋರೊ ಹೇಳಿದ: "ಮಿಚೆಲ್, ನನ್ನ ನಿತ್ಯಕ್ರಮದಲ್ಲಿ ಏನಾದರೂ ಹೊಸತನ್ನು ಸೇರಿಸಬೇಕು ಎಂದು ಅನಿಸತೊಡಗಿದೆ. ಡಬ್ಲಿನ್ ಜಾತ್ರೆಯಲ್ಲಿ ನಾವು ಏನಾದರೂ ಹೊಸತನ್ನು ಜನರಿಗೆ ತೋರಿಸಬೇಕು. ಈಗ ಒಂದು ವಾರದಿಂದ ೧ ಇಂಚು ದಪ್ಪದ ೨೦ ಇಂಚು ಉದ್ದದ ಉಕ್ಕಿನ ಸಲಾಕೆಯನ್ನು ನುಂಗಲು ನಾನು ಪ್ರಯತ್ನಿಸುತ್ತಿರುವದನ್ನು ನೀನು ಬಲ್ಲೆ. ಈ ಆಟ ಜನರನ್ನು ಮರುಳುಗೊಳಿಸುವದರಲ್ಲಿ ಸಂದೇಹವಿಲ್ಲ."

"ಆದರೆ ಈ ಪ್ರಯತ್ನದಲ್ಲಿ ನೀನು ಸತ್ತು ಹೋಗಬಹುದು." ನಾನು ಹೆದರುತ್ತ ಹೇಳಿದೆ.

"ಅದೇ ಅದರಲ್ಲಿನ ನಿಜವಾದ ಆಕರ್ಷಣೆ. ಅದು ನನ್ನನ್ನು ಕೊಲ್ಲುವದೋ ಹೇಗೆ ಎಂದು ನೋಡಲಿಕ್ಕಾಗಿಯೆ ಜನ ಮುಕುರುತ್ತಾರೆ."

"ಆದರೆ ನಿಜವಾಗಿಯೂ ನೀನು ಸತ್ತು ಹೋಗಬಹುದು. ಈ ಸಲಾಕೆ ಯಾವ ಖಡ್ಗಕ್ಕಿಂತಲೂ ಹೆಚ್ಚು ಭಾರವಾಗಿದೆ."

"ಹೌದು. ಆದರೆ ಇದರಿಂದ ನಾನು ಪ್ರಚಂಡ ಖ್ಯಾತಿಯನ್ನೂ ಹೊಂದಬಲ್ಲೆ. ನೀನೇನೂ ಚಿಂತಿಸಬೇಡ. ನಾನೆಲ್ಲ ಯೋಚಿಸಿದ್ದೇನೆ. ನೋಡು ಬೇಕಾದರೆ....."

ಝೋರೋ ಪೆಟ್ಟಿಗೆಯಿಂದ ಒಂದು ಸಲಾಕೆಯನ್ನು ಹೊರತೆಗೆದ. ಹೊಟ್ಟೆಯೊಳಗೆ ಪೂರ್ತಿ ಇಳಿದು ಹೋಗುವದನ್ನು ತಡೆಯಲು ಖಡ್ಗದಂತೆ ಅದಕ್ಕೆ ಹಿಡಿಕೆಯಿರಲಿಲ್ಲ. ಒಂದು ಇಂಚು ದಪ್ಪವಿದ್ದುದರಿಂದ ಅದು ಗಂಟಲ ಸ್ನಾಯುಗಳಿಗೂ ಅಪಾಯ ತರಬಹುದಾಗಿತ್ತು.

ಝೋರೊ ನನ್ನ ಆಕ್ಷೇಪಗಳನ್ನು ಕೇಳಿ ನಕ್ಕುಬಿಟ್ಟ. ಸಲಾಕೆ ನುಂಗುವ ಪೂರ್ವದಲ್ಲಿ ಹೊಟ್ಟೆಯ ಆಳವನ್ನು ಕಡಿಮೆ ಮಾಡಲು ಆತ ಹೊಟ್ಟೆತುಂಬ ಊಟ ಮಾಡುವವನಿದ್ದ. ಗಂಟಲಿಗೆ ಧಕ್ಕೆಯಾಗದಂತೆ ನೋಡಿಕೊಳ್ಳಲು ಆಲಿವ್ ಎಣ್ಣೆಯಿಂದ ಬಾಯಿ ಮುಕ್ಕಳಿಸುವವನಿದ್ದ.

"ಈಗ ನೋಡು."

ಆತನನ್ನು ನೋಯಿಸುವ ಮನಸ್ಸಿಲ್ಲದೆ ನಾನು 'ಹುಂ' ಎಂದೆ.

ಝೋರೋ ಸಲಾಕೆಯ ಒಂದು ತುದಿಗೆ ಒಂದು ದಾರವನ್ನು ಕಟ್ಟಿದ. ಬಳಿಕ ದಾರವನ್ನು

ತನ್ನ ಕೈಗೆ ಸುತ್ತಿಕೊಂಡು ಅದನ್ನೇ ಹಿಡಿಕೆಯನ್ನಾಗಿ ಮಾಡಿಕೊಂಡ.

ಅನಂತರ ಸರಿಯಾಗಿ ನಿಂತು ಸಾವಕಾಶವಾಗಿ ಹದಿನೈದು ಇಂಚಿನ ವರೆಗೆ ಸಲಾಕಿಯನ್ನು ಗಂಟಲಲ್ಲಿ ಇಳಿಬಿಟ್ಟ. ದಾರದ ಸಹಾಯದಿಂದ ಮೇಲಕ್ಕೆ ಜಗ್ಗಿಕೊಂಡ. "ನೋಡಿದೆಯಾ, ಪೂರ್ತಿ ಸಲಾಕೆಯನ್ನು ನುಂಗುವದು ಸಾಧ್ಯವಿದೆ," ಎಂದ.

ಜನರು ಈ ಆಟವನ್ನು ಖಂಡಿತವಾಗಿಯೂ ಮೆಚ್ಚುವರೆಂದು ನನಗೆ ನಂಬಿಗೆಯಾಯಿತು. ಸಲಾಕೆಯನ್ನು ನುಂಗುವಾಗ ಗಂಟಲಿನ ಸ್ನಾಯುಗಳು ಕಂಪಿಸುವದು ಗಂಟಲ ಹೊರಭಾಗದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದುದರಿಂದ ಜನರಮೇಲೆ ಪರಿಣಾಮವಾಗುವದರಲ್ಲಿ ಸಂದೇಹವೇ ಇರಲಿಲ್ಲ.

ಡಬ್ಲಿನ್ ಜಾತ್ರೆಯ ದಿನ ಬಂದಿತು. ನಮ್ಮ ಮೊದಲನೆಯ ಆಟ ಸುಸೂತ್ರವಾಗಿ ಸಾಗಿತು. ಸಲಾಕೆ ನುಂಗುವ ಆಟ ಝೋರೋನ ನಿರೀಕ್ಷಣೆಯಂತೆ ತುಂಬ ಹಣವನ್ನೂ ಖ್ಯಾತಿಯನ್ನೂ ತರುವದು ಎಂದು ಖಚಿತವಾಯಿತು.

ಮರುದಿನದ ಆಟಕ್ಕೆ ಜನ ವಿಶೇಷವಾಗಿ ನೆರೆದಿದ್ದರು. ನಮ್ಮ ದೈನಂದಿನ ಆಟಗಳೆಲ್ಲ ಸರಾಗವಾಗಿ ನಡೆದವು. ಬಳಿಕ ಝೋರೋ ತನ್ನ ಸಲಾಕೆಯನ್ನೆತ್ತಿಕೊಂಡ. ಜನ ಉಸಿರು ಬಿಗಿಹಿಡಿದು ಮುಂದಿನ ಚಮತ್ಕಾರಕ್ಕಾಗಿ ಕಾದು ಕುಳಿತರು. ಝೋರೋ ಸಲಾಕೆಗೆ ದಾರವನ್ನು ಕಟ್ಟಿ ಕೈಗೆ ಆ ದಾರವನ್ನು ಸುತ್ತಿ ಹಿಡಿಕೆ ತಯಾರಿಸಿಕೊಂಡ.

ನಂತರ ಆತ ಅದನ್ನು ನುಂಗಲು ಸಿದ್ಧನಾಗಿ ನಿಂತ.

ನಾನು ಮುಂದೆ ಬಂದು ಸಲಾಕೆ ನುಂಗುವದರಲ್ಲಿ ಸಂಭವಿಸಬಹುದಾದ ಗಂಡಾಂತರದ ವಿಚಾರವನ್ನು ಜನರಿಗೆ ಹೇಳಿದೆ. ಅಂಜುಬುರುಕರಾರಾದರೂ ಇದ್ದರೆ ಹೊರಗೆ ಹೋಗಬಹುದು ಎಂದು ಸೂಚಿಸಿದೆ. ಅವರಾರೂ ಎದ್ದು ಹೋಗಲಿಲ್ಲ.

ನಾನು ಸಂಜ್ಞೆ ಮಾಡಿದೊಡನೆ ಝೋರೋ ಸಲಾಕೆಯನ್ನು ಗಂಟಲಲ್ಲಿ ಇಳಿಸತೊಡಗಿದ. ಕೆಲ ನಿಮಿಷಗಳಲ್ಲಿ ಸಲಾಕೆಯ ಒಂದೇ ಒಂದು ಇಂಚು ಮಾತ್ರ ಅವನ ಬಾಯ ಹೊರಗೆ ಕಾಣಿಸುತ್ತಿತ್ತು. ಜನ ಚಪ್ಪಾಳೆ ತಟ್ಟಿದರು.

ಏಕಾಏಕಿ ಝೋರೋ ತೂರಾಡಿದ. ಅವನ ಕಣ್ಣಾಲಿಗಳು ಭಯದಿಂದ ಗರಗರ ತಿರುಗಿದವು. ಅದು ಹೇಗೊ ದಾರ ಸಲಾಕೆಯಿಂದ ಉಚ್ಚಿ ಹೋಗಿತ್ತು. ಸಲಾಕೆ ಅವನ ಗಂಟಲಲ್ಲಿ ಸಿಕ್ಕು ಬಿದ್ದಿತ್ತು.

"ಅಲುಗಾಡದೆ ನಿಂತುಕೊ" ಎಂದು ಝೋರೋಗೆ ಕೂಗಿಹೇಳಿ ನಾನು ಪ್ರೇಕ್ಷಕರಲ್ಲಿಯ ಇಬ್ಬರನ್ನು ಕರೆದು ಝೋರೋನಿಗೆ ಆಧಾರವಾಗಿ ನಿಲ್ಲಲು ಹೇಳಿದೆ. ಅವನೇನಾದರೂ ಕೆಳಕ್ಕೆ ಕುಸಿದನಾದರೆ ಸಲಾಕೆ ಪೂರ್ತಿ ಹೊಟ್ಟೆಯಲ್ಲಿಳಿಯುತ್ತಿತ್ತು. ಝೋರೋನ ಅವತಾರ ಪೂರ್ತಿಯಾಗುತ್ತಿತ್ತು.

ಸಂಭವಿಸಿರುವದನ್ನು ಜನರಿಗೆ ಹೇಳಿದೆ. ಅವರ ಕಣ್ಣುಗಳಲ್ಲಿ ಅದ್ಭುತಾಶ್ಚರ್ಯದ ಹೊಳಪು ಮಿನುಗಿತು. ಇದನ್ನೆ ನೋಡಲು ರೊಕ್ಕ ಕೊಟ್ಟು ಬಂದವರಂತೆ ಅವರು ಕುಳಿತಲ್ಲಿಂದ ಏಳಲಿಲ್ಲ.

ಈಗಾಗಲೆ ಝೋರೋನ ಮುಖ ನೀಲಿಬಣ್ಣಕ್ಕೆ ತಿರುಗತೊಡಗಿತ್ತು. ನಾನು ಚಿಕ್ಕ ಗೂಟವೊಂದನ್ನು ಅವನ ತುಟಿಗಳ ನಡುವೆ ನಿಲ್ಲಿಸಿ ಅವನ ಗಂಟಲಲ್ಲಿ ಬೆರಳು ಹಾಕಲು ಯತ್ನಿಸಿದೆ. ಸಾಧ್ಯವಾಗಲಿಲ್ಲ. "ಯಾರ ಬಳಿಯಲ್ಲಾದರೂ ಕತ್ತರಿ ಇದ್ದರೆ ಕೊಡಿರಿ" ಎಂದು ಪ್ರೇಕ್ಷಕರಲ್ಲಿ ಬಿನ್ನವಿಸಿಕೊಂಡೆ. ವೃದ್ಧೆಯೊಬ್ಬಳು ಒಂದು ಚಿಕ್ಕ ಕತ್ತರಿಯನ್ನು ನನ್ನ ಕೈಗಿತ್ತಳು.

ಇಷ್ಟು ಹೊತ್ತಿಗೆ ಝೋರೋನಿಗೆ ಅರ್ಧ ಎಚ್ಚರ ತಪ್ಪಿತ್ತು. ಅವನನ್ನು ಎತ್ತಿ ಹಿಡಿದು ನಿಲ್ಲಿಸಿದ ಆ ಇಬ್ಬರ ನಡುವೆ ಅವನು ತೂಗಾಡುತ್ತಿದ್ದ. ನಾನು ಕತ್ತರಿಯನ್ನು ಅವನ ಬಾಯಿಗೆ ತುರುಕಿದೆ. ನನ್ನ ಕೈ ನಡುಗುತ್ತಿದ್ದುದರಿಂದ ಅದರ ಅಲಗುಗಳು ಸಲಾಕೆಯನ್ನು ಕಚ್ಚಿ ಹಿಡಿಯಲು ಸಮರ್ಥವಾಗಲಿಲ್ಲ.

ಮತ್ತೊಮ್ಮೆ ಕತ್ತರಿಯನ್ನು ಝೋರೋನ ಗಂಟಲಿಗಿಳಿಸಿದೆ. ಜೊತೆಗೆ ನನ್ನ ಬೆರಳುಗಳನ್ನೂ ಗಂಟಲಲ್ಲಿಟ್ಟೆ. ಝೋರೋನ ಬಾಯಿ ಗುಹೆಯ ಬಾಗಿಲಂತೆ ತೆರೆಯಿತು. ಝೋರೋ ಸಲಾಕೆಯನ್ನು ಕಾರಿಬಿಡಲು ಯತ್ನಿಸುತ್ತಿದ್ದುದರಿಂದಲೂ ಅದೃಷ್ಟದಿಂದಲೂ ಈಸಲ ನನ್ನ ಬೆರಳುಗಳಿಗೆ ಸಲಾಕೆಯ ಮೇಲೆ ಹಿಡಿತ ಸಿಕ್ಕಿತು.

ಸಲಾಕೆಯನ್ನು ಕತ್ತರಿ ಸಹಿತ ಹೊರಗೆಳೆದೆ. ಸಲಾಕೆಗೆ ರಕ್ತದ ಕಲೆ ಅಂಟಿಕೊಂಡಿತ್ತು. ಸಲಾಕೆಯನ್ನು ನಾನು ಕೆಳಗೊಗೆದೊಡನೆ ಜನರೆಲ್ಲ "ವಾಹವಾ!" ಎಂದು ಕೂಗಿದರು.

## ನಾನು ಅಗ್ನಿಭಕ್ಷಕನಾದದ್ದು

ಜನರನ್ನೆಲ್ಲ ಹೊರಗಟ್ಟಿ ನಾನು ಝೋರೋನನ್ನು ಒಳಗೊಯ್ದು ಮಲಗಿಸಿದೆ. "ಗಂಟು ಹಾಕುವದರಲ್ಲಿ ನಾನು ಯಾವಾಗಲೂ ಅಷ್ಟಕಷ್ಟೆ. ಛೆ! ಛೆ! ಪ್ರಾರಂಭದಲ್ಲೆ ಹೀಗಾಗಬೇಕೆ? ಕೆಲ ವಾರಗಳ ವರೆಗೆ ಸರಾಗವಾಗಿ ನಡೆದಿದ್ದರೆ ನಾವು ಚೀಲಗಟ್ಲೆ ರೊಕ್ಕ ಸಂಪಾದಿಸುತ್ತಿದ್ದೆವು." ಝೋರೋ ನರಳುತ್ತಲೆ ಹೇಳಿದ.

"ಡಾಕ್ಟರರನ್ನು ಕರತರಲೇ?"

"ಯಾಕೆ? ನನಗೇನೂ ಅಂಥ ಅಪಾಯವಾಗಿಲ್ಲ. ಗಂಟಲಲ್ಲಿ ತರೆದಿದ್ದರಿಂದ ರಕ್ತ ಬರುತ್ತಿದೆ ಅಷ್ಟೆ. ಎರಡು ವಾರಗಳಲ್ಲಿ ನಾನು ಮತ್ತೆ ಮೊದಲಿನಂತಾಗುತ್ತೇನೆ."

"ಎರಡು ವಾರಗಳು! ಅಲ್ಲಿಯ ವರೆಗೆ ನಾವೇನು ಮಾಡಬೇಕು?"

"ಖಿನ್ನನಾಗಬೇಡ. ನಮ್ಮ ಹಣೆಬರಹವೆ ಇಷ್ಟು. ಒಂದು ದಿನ ಮೇಲಕ್ಕೆದ್ದರೆ ಮರುದಿನ ಕೆಳಗೆ ಬೀಳುತ್ತೇವೆ. ಹಾಗೆಂದು ನೀನೇನು ಬಲಾತ್ಕಾರದ ರಜೆ ಪಡೆಯಬೇಕಾಗಿಲ್ಲ."

"ಅಂದರೆ..?"

"ನೀನು ಬಹು ಚತುರನಿರುವೆ. ಖಡ್ಗದಾಟ

ದಲ್ಲಿ ಪಳಗಿದವನನ್ನೂ ಮಿಗಿಸುತ್ತಿರುವಿ. ಜೊತೆಗೆ ಇನ್ನೊಂದು ಬಗೆಯ ಆಟವನ್ನು ನೀನೇಕೆ ಕಲಿಯಬಾರದು ? "

ನನ್ನ ಕುತೂಹಲ ಕೆರಳಿತು "ಏನದು ?" ಎಂದೆ.

"ಅಗ್ನಿಭಕ್ಷಣ. ನನ್ನ ಆಪ್ತನೊಬ್ಬನಿದ್ದಾನೆ. ಪಕ್ಕಾ ಅಗ್ನಿಭಕ್ಷಕನಾತ. ಆತನೂ ಈ ಜಾತ್ರೆಗೆ ಬಂದಿದ್ದಾನೆ."

ಈ ಅಗ್ನಿ ಭಕ್ಷಕ ಆರಡಿ ಆರಂಗುಲ ಎತ್ತರದ ರಾಕ್ಷಸನಾಗಿದ್ದ. ಆತನ ವಯಸ್ಸು ೩೫-೪೦ ರಷ್ಟಿರಬಹುದು. ಆತ ವಿವಾಹವಾಗಿರಲಿಲ್ಲ. ಆದರೆ ಈಗ ಓರ್ವ ಸ್ತ್ರೀಜಟ್ಟಿಯೊಡನೆ ಇರುತ್ತಿದ್ದ.

ನಾವು ಅವನಲ್ಲಿ ಹೋದಾಗ ಆತ ಸಂತೋಷದ ಗುಟುರು ಹಾಕಿದ.

"ಏನಿದು ಅಪರೂಪದ ಭಾಗ್ಯ? ಝೂರೋ, ಪ್ಯಾರಿಸ್ಸಿನಲ್ಲಿ ಹತ್ತು ವರ್ಷಗಳ ಹಿಂದೆ ನಾವಿಬ್ಬರೂ ಕೂಡಿ ಆಟ ಪ್ರದರ್ಶಿಸಿದ ನಂತರ ನಾನು ನಿನ್ನನ್ನು ನೋಡಲೇ ಇಲ್ಲ. ನಿನ್ನಲ್ಲೇನೂ ವಿಶೇಷ ಬದಲಾವಣೆಯಾಗಿಲ್ಲ. ಅದೇ ಮೊದಲಿನ ಚರ್ಮ ಮತ್ತು ಎಲುಬಿನ ಗೂಡು ! "

"ಮತ್ತೆ ನೀನು ! ಮೊದಲಿನ ಲಫಂಗನೇ ಆಗಿರುವಿ ಹೌದೊ ಅಲ್ಲವೊ ? ಅಗ್ನಿಭಕ್ಷಣದಿಂದ ಹೆಸರನ್ನೂ ಹಣವನ್ನೂ ಗಳಿಸುತ್ತಿರುವಿ."

"ನಿಜವೆನ್ನು. ಆದರೆ ಬೆಂಕಿ ತಮ್ಮನ್ನೂ ಸುಟ್ಟೀತೆಂದೇನೋ ಸ್ತ್ರೀಯರು ಈ ಅಗ್ನಿಭಕ್ಷಕನೊಡನೆ ಬೆರೆಯಲು ಬಯಸುವದಿಲ್ಲ" ಎಂದ ಅಗ್ನಿಭಕ್ಷಕ.

ಝೂರೋ ಆತನಿಗೆ ತನ್ನ ಕಥೆಯನ್ನೆಲ್ಲ ಹೇಳಿ ನಾವು ಅವನಲ್ಲಿಗೆ ಬಂದ ಕಾರಣವನ್ನು ಹೇಳಿದ.

ಅಗ್ನಿಭಕ್ಷಕ ನನ್ನ ಕೈಯನ್ನು ಅದುಮಿದ. "ಶಹಬಾಸ್ ! ಖಡ್ಗ ನುಂಗುತ್ತಿ; ಆಂ ! ಬಹಳ ಚಿಕ್ಕವನಂತೆ ಕಾಣುತ್ತಿರುವಿಯಲ್ಲ."

"ನನಗೆ ೧೫ ವರ್ಷಗಳಾದವು."

"ಹುಂ ! ಆದರೆ ಅಗ್ನಿಭಕ್ಷಣವು ಖಡ್ಗ ನುಂಗಿದಂತಲ್ಲ. ಪೆಟ್ರೋಲ ವಿಷ ನಿನ್ನಲ್ಲಿ ಸೇರಬಹುದು. ಒಂದು ನಿಮಿಷದ ತಪ್ಪಾದರೆ ನೀನು ಸ್ವರ್ಗವನ್ನೆ ಕಾಣುವಿ."

"ಬೇಕಾದ್ದು ಬರಲಿ, ಸಿದ್ಧನಿದ್ದೇನೆ."

"ಅಡ್ಡಿಯಿಲ್ಲ. ನೀನು ಸುಡಿಸಿಕೊಳ್ಳಲು ತಯಾರಿದ್ದರೆ ನನ್ನದೇನೂ ಅಡ್ಡಿಯಿಲ್ಲ."

ಮುಂದೆ ವ್ಯವಹಾರದ ಮಾತು ನಡೆಯಿತು : ಜಾತ್ರೆಯಲ್ಲಿ ನಾನು ಪ್ರತಿನಿತ್ಯ ಅವನ ಡೇರೆಯಲ್ಲಿ ನನ್ನ ಆಟ ತೋರಿಸಬೇಕು. ಬಂದಿದ್ದರಲ್ಲಿ ಶೇಕಡ ೨೦ ರಷ್ಟು ಹಣ ನನಗೆ. ಆತ ನನಗೆ ಮುಂಜಾನೆ ಹೊತ್ತು ಅಗ್ನಿಭಕ್ಷಣ ತಂತ್ರವನ್ನು ಕಲಿಸಬೇಕು.

ಅಗ್ನಿಭಕ್ಷಕ ತಂತಿಗೆ ಸುತ್ತಿದ ಅರಿವೆ ತುಂಡೊಂದನ್ನು ತೋರಿಸಿದ. ಸರಿಯಾದ ಪ್ರಮಾಣದಲ್ಲಿ ಪೆಟ್ರೋಲನ್ನು ಈ ಅರಿವೆ ತುಂಡಿಗೆ ಹಾಕಿದಲ್ಲಿ ಇದು ಎರಡಡಿ ಉದ್ದದ ಜ್ವಾಲೆಯನ್ನು ಉರಿಸುತ್ತದೆ. ತುಂಬ ಹೊಗೆಯೇಳುತ್ತದೆ ಎಂಬ ಮಾತು ನಿಜ. ಜನರ ಮೇಲೆ ಪರಿಣಾಮ ಮಾಡಲು ಇದು ಪ್ರಯೋಜನಕಾರಿಯಾಗಿದೆ. ಇಂಥ ಎರಡು ಹಿಲಾಲುಗಳನ್ನು ನಿನ್ನ ತಲೆಯ ಮೇಲ್ಗಡೆ ಹಿಡಿದು ಅಲುಗಾಡಿಸಿದರೆ ಸಾಕು, ಜನ ಆಕರ್ಷಿತರಾಗಿಬಿಡುತ್ತಾರೆ."

"ಬಾಯಿ ಸುಟ್ಟುಹೋಗದಿರಲೆಂದು ನೀವೇನಾದರೂ ಔಷಧಿಯನ್ನು ಬಾಯಿಗೆ ಹಚ್ಚಿಕೊಳ್ಳುವದಿಲ್ಲವೆ?"

ಒಂದೆರಡು ನಿಮಿಷ ಯಾರೂ ಮಾತಾಡಲಿಲ್ಲ. ಆ ಮೌನದಿಂದ ನಾನು ಅಸ್ವಸ್ಥನಾದೆ. ಖಡ್ಗ ನುಂಗುವಾಗ ಹಿಡಿಕೆಯಲ್ಲಿ ಅಲಗು ಮುಚ್ಚಿಹೋಗುವದಿಲ್ಲವೆ ಎಂದು ಝೊರ್ರೋನ್ನು ಕೇಳಿದಾಗ ಆದ ಅನುಭವವೇ ಮತ್ತೆ ನನಗಾಯಿತು.

"ಹೌದು. ಹಚ್ಚುತ್ತೇನೆ. ಆದರೆ ನಾನು ಉಪಯೋಗಿಸುವ ಔಷಧಿ ಅತ್ಯಂತ ಸಾಮಾನ್ಯವಾದದ್ದು - ಉಗುಳು."

"ನನಗಿಷ್ಟು ತಿಳಿಯಬೇಕಿತ್ತು."

"ನಿನಗೆ ಅಂಜಿಕೆ ಬಂತೇನು?"

ಹೌದೆಂದೆ.

"ಅದು ಸರಿ. ನಿನಗೆ ಅಂಜಿಕೆಯೆನಿಸಿರದಿದ್ದರೆ ನಿನಗೆ ನಾನು ಕಲಿಸುತ್ತಲೇ ಇರಲಿಲ್ಲ. ಅಗ್ನಿಯೊಡನೆ ಆಟವಾಡುವಾಗ ನಿನ್ನ ದೌರ್ಬಲ್ಯವನ್ನು ನೀನೊಪ್ಪಿಕೊಳ್ಳಲೇ ಬೇಕು. ಅದನ್ನು ಮರೆತರೆ ಅದು ನಿನ್ನನ್ನೆ ಸುಡಬಹುದು."

— ಝೊರ್ರೋ ಬರುತ್ತೇನೆಂದು ಎದ್ದು ಹೋದ.

ಅಗ್ನಿಭಕ್ಷಕ ಮಾತು ಮುಂದುವರಿಸಿ ನನಗೆ ಹೇಳಿದ. "ಇದೇನೂ ಸುಲಭದ ಕಾರ್ಯವಲ್ಲ ಎಂಬುದು ನಿನ್ನ ನೆನಪಿನಲ್ಲಿರಲಿ. ಮೊದಲು [illegible] ನೀನು ಸುಟ್ಟುಕೊಳ್ಳಲೇಬೇಕಾಗುವದು. ಏಳು ಒಂದಿಷ್ಟು ಪೆಟ್ರೋಲು ತೆಗೆದು [illegible]"

ನಾನು ಹೊರಗೆ ಹೋಗಿ ಒಂದಿಷ್ಟು ಪೆಟ್ರೋಲು



ಸಂಪಾದಿಸಿಕೊಂಡು ಬಂದೆ.

ಅಗ್ನಿಭಕ್ಷಕ ಅರು ಹಿಲಾಲುಗಳನ್ನು ಪೆಟ್ರೋಲ ಡಬ್ಬಿಯಲ್ಲಿ ಅದ್ದಿದ. "ಅಗ್ನಿಭಕ್ಷಣಕಾರ್ಯದಲ್ಲಿ ಮುಖ್ಯವಾಗಿ ಎರಡು ಸಂಗತಿಗಳನ್ನು ನೆನಪಿಟ್ಟುಕೊಳ್ಳಬೇಕು. ನೀನು ಅದನ್ನು ತಿನ್ನು[illegible] ಬೆಂಕಿಯು ಜ್ವಾಲೆ ನಿನ್ನ ಬಾಯಲ್ಲಿ[illegible]ವಾಗ ನೀ[illegible] ಯಾವಾಗಲೂ ಹೊರಗೆ ಶ್ವಾಸ ಬಿಡಬೇಕು. ಹಾಗೆ ಮಾಡದಿದ್ದರೆ ಜ್ವಾಲೆ ನಿನ್ನ ಪುಪ್ಪುಸ[illegible] [illegible]ವದು.

ಡಬ್ಬಿಯಲ್ಲಿ ಅದ್ದಿ ಇಟ್ಟ ಪಿಲಾಲೊಂದನ್ನು ತೆಗೆದು ಆತ ಅದು ಹೀರಿಕೊಂಡಿದ್ದ ಹೆಚ್ಚಿನ ಪೆಟ್ರೋಲನ್ನು ಹಿಂಡಿ ತೆಗೆದ. "ನೀನು ಯಾವಾಗಲೂ ಗಾಳಿಯ ದಿಕ್ಕನ್ನು ನಿರೀಕ್ಷಿಸಬೇಕು. ಮೃದುಗಾಳಿ ಕೂಡ ಜ್ವಾಲೆಯನ್ನು ನಿನ್ನ ಮುಖಕ್ಕೆ ತಿರುಗಿಸಬಹುದು. ಹಾಗಾದರೆ ಕಷ್ಟವಾಗುವದು. ಆದುದರಿಂದ ಗಾಳಿ ಯಾವಾಗಲೂ ನಿನ್ನ ಹಿಂದಿರಬೇಕು," ಎಂದು ಆತ ಕಡ್ಡಿ ಕೊರೆದು ಪಿಲಾಲಿಗೆ ಬೆಂಕಿಹಚ್ಚಿದ. ಅದರ ಶಾಖ ಎರಡಡಿ ದೂರ ನಿಂತಿದ್ದ ನನಗೆ ಬಡಿಯಿತು.

ಖಡ್ಗ ನುಂಗುವವನೋಪಾದಿಯಲ್ಲಿ ಆತ ನಿಂತ. ಆದರೆ ತಲೆಯನ್ನು ಇನ್ನಿಷ್ಟು ಹಿಂದಕ್ಕೆ ಚಾಚಿದ್ದ. ನಾಲಗೆಯನ್ನು ಹೊರತೆಗೆದು ಅದರ ಮೇಲೆ ಉರಿಯುತ್ತಿದ್ದ ಪಿಲಾಲನ್ನು ಆಡಿಸಿದ. ಜ್ವಾಲೆ ಅವನ ನಾಲಗೆಯ ಮೇಲುಳಿದು ಕುಣಿಯತೊಡಗಿತು.

"ಇದು ಕಠಿಣವಲ್ಲ. ನಿನ್ನ ತುಟಿ ಮತ್ತು ಬಾಯಿಯನ್ನು ನೀನು ತೇವವಾಗಿಟ್ಟುಕೊಳ್ಳಬೇಕಾದದ್ದೇ ಮುಖ್ಯ. ಪಿಲಾಲನ್ನು ನೀನು ಸರಿಯಾದ ಸ್ಥಳದಲ್ಲಿಡಬೇಕು. ಇಲ್ಲವಾದರೆ ಜ್ವಾಲೆ ನಿನ್ನ ಬಾಯ ಮೇಲಂಗಳಕ್ಕೆ ಹಾರಿ ಅನಾಹುತ ಮಾಡುತ್ತದೆ. ಮತ್ತೆ ಕೇಳಿಲ್ಲಿ ಹುಡುಗಾ, ಜ್ವಾಲೆ ನಿನ್ನತ್ತ ಬರುವಾಗ ಮಾತ್ರ ಅಂಜಿಕೊಳ್ಳಬೇಡ."

ಮತ್ತೊಮ್ಮೆ ಈ ಸೂಚನೆಗಳನ್ನು ಹೇಳಿ ಆತ ಪಿಲಾಲನ್ನು ನನ್ನಕೈಗಿತ್ತ. ನನ್ನ ಬಾಯಿ ಮತ್ತು ತುಟಿ ಒಮ್ಮಿಂದೊಮ್ಮೆ ಒಣಗಿಹೋದುದನ್ನು ಕಂಡು ನನಗೆ ಅತ್ಯಾಶ್ಚರ್ಯವಾಯಿತು.

ನನ್ನ ಕೈಗಳು ನಡುಗತೊಡಗಿದ್ದವು. ಪಿಲಾಲಿಗೆ ಉರಿ ಹಚ್ಚಲು ನಾನು ಮೂರು ಸಲ ಕಡ್ಡಿ ಕೆರೆಯಬೇಕಾಯಿತು. ನಾನು ತಲೆಯನ್ನು ಹಿಂದೆ ಚಾಚಿ ಪಿಲಾಲನ್ನು ಬಾಯ ಸಮೀಪಕ್ಕೆ ತಂದೆ.

"ನಿನ್ನ ತಲೆ ಇನ್ನಿಷ್ಟು ಹಿಂದಕ್ಕೆ ಹೋಗಲಿ. ಇಲ್ಲವಾದರೆ ಜ್ವಾಲೆಗೂ ನಿನ್ನ ಬಾಯಿಗೂ ಅಂತರ ಹೆಚ್ಚಾಗುವದು," ಎಂದು ಅಗ್ನಿಭಕ್ಷಕ ಹೇಳಿದ.

ಮುಂದಿನ ಐದು ನಿಮಿಷಗಳು ನನ್ನ ಜೀವನದಲ್ಲೆ ಅತಿದೀರ್ಘವಾದ ಐದು ನಿಮಿಷಗಳಾಗಿದ್ದವು. ನಾನು ಪಿಲಾಲನ್ನು ಬಾಯಿ ಹತ್ತಿರ ತಂದ ಪ್ರತಿಸಲವೂ ನನ್ನಲ್ಲಿ ಏನೋ ಅಳುಕುಂಟಾಗಿ ನಾನದನ್ನು ಮತ್ತೆ ದೂರ ಹಿಡಿಯುತ್ತಿದ್ದೆ.

"ನೋಡಿಲ್ಲಿ, ಮಿಚೆಲ್, ನೀನು ಮಾಡುವದರಲ್ಲಿ ನಿನಗೆ ನಂಬಿಗೆಯಿರಬೇಕು. ಜ್ವಾಲೆ ನಿನ್ನನ್ನು ಸುಡುವದಿಲ್ಲ ಎಂದು ನಿನಗೆ ನೀನೇ ಹೇಳಿಕೊ - ಅಂದರೆ ಅದು ನಿಜಕ್ಕೂ ಸುಡುವದಿಲ್ಲ. ಅಗ್ನಿ ಭಕ್ಷಣದ ಗುಟ್ಟೇ ಇದು. - ಮನೋಬಲವೇ ಇದರಲ್ಲಿ ಮುಖ್ಯ. ಎಲ್ಲಿ, ಇನ್ನೊಮ್ಮೆ ಪ್ರಯತ್ನ ಮಾಡು."

ಮುಖದ ಬೆವರನ್ನೊರಸಿಕೊಂಡು ನಾನು ಪುನಃ ಪಿಲಾಲನ್ನು ನನ್ನ ಬಾಯಿಯ ಸಮೀಪಕ್ಕೆ ತಂದೆ. ಆರು ಇಂಚು ದೂರದಲ್ಲಿದ್ದಾಗ ಆ ಜ್ವಾಲೆ ಅಡವಿಗೆ ಹತ್ತಿದ ಬೆಂಕಿಯ ಜ್ವಾಲೆಯಂತೆ ಕಂಡಿತು. ನಾನು ನಾಲಿಗೆಯಿಂದ ತುಟಿಯನ್ನು ಸವರಿಕೊಂಡು ಕಣ್ಣು ಮುಚ್ಚಿ ನಾಲಿಗೆಯನ್ನು ಹೊರಚಾಚಿ ಅದರ ಮೇಲೆ ಪಿಲಾಲನ್ನಿಟ್ಟೆ. ನನಗೆ ಏನೇನೂ ಅನಿಸಲಿಲ್ಲ.

ನಾನು ನಿಧಾನವಾಗಿ ಸುಡುವ ಪೆಟ್ರೋಲ್, ಅಸಾಧ್ಯ ಶಾಖ ಮತ್ತು ಜ್ವಾಲೆಯನ್ನು ಶ್ವಾಸದ ಮೂಲಕ ಹೊರತಳ್ಳಿದೆ. ನನ್ನ ಕೆಳ ತುಟಿಗೆ ನೋವಾಗತೊಡಗಿತು. ನನ್ನ ಬೆರಳನ್ನು ಅದರ ಮೇಲಾಡಿಸಿದಾಗ ಅಲ್ಲಿ ಗುಳ್ಳೆಯೆದ್ದುದ್ದು ಗೊತ್ತಾಯಿತು.

"ವಾಹವ್ವಾ! ಮಿಚೆಲ್, ಆದರೆ ನೀನು ಕಣ್ಣು ಮುಚ್ಚಿಕೊಳ್ಳಬೇಕಾಗಿರಲಿಲ್ಲ. ಹಾಗೆ ಮಾಡಿದರೆ ನಿನಗೆ ಒಂದಿಲ್ಲೊಂದು ಕಡೆ ಗುಳ್ಳೆಯೇಳುವದು ಖಂಡಿತ. ಪಿಲಾಲು ನಾಲಿಗೆಯ ಮೇಲಾಡಿ ಹೋಗುವವರೆಗೂ ಅದನ್ನು ನೋಡುತ್ತಿರು. ಹುಂ, ಮತ್ತೊಮ್ಮೆ ಪ್ರಯತ್ನಿಸು."

ಮತ್ತೊಮ್ಮೆ ಪ್ರಯತ್ನಿಸಿದೆ. ಈ ಸಲ ಪಿಲಾಲು ನಾಲಿಗೆಯ ಮೇಲೆ ಸರಿದಾಗ ನನ್ನ ಕೈ ಕಂಪಿಸಲಿಲ್ಲ. ಅಗ್ನಿಭಕ್ಷಕ ಸಮಾಧಾನದಿಂದ ಘುಗುಳ್ನಕ್ಕು ಉರಿಹಚ್ಚಿದ ಪಿಲಾಲೊಂದನ್ನು ನನ್ನ

ನಾಲಿಗೆಯ ಮೇಲಾಡಿಸಿದ. ಅವನದನ್ನು ಹೊರಗೆ ತೆಗೆದೊಡನೆ ಅದಕ್ಕೆ ಬೆಂಕಿ ಹತ್ತಿದ್ದು ಕಂಡು ನನಗೆ ದಿಗ್‌ಭ್ರಮೆಯಾಯಿತು. ನನಗೆ ಅರಿವಿಲ್ಲದಂತೆ ಪೆಟ್ರೋಲಿನ ಉಗಿ ನನ್ನ ನಾಲಿಗೆಯ ಮೇಲೆ ಉರಿಯುತ್ತಿತ್ತು.

"ಶಹಬಾಸ್! ಈಗ ಆ ಎರಡೂ ಹಿಲಾಲುಗಳನ್ನು ನಿನ್ನ ಬಾಯಲ್ಲಿಟ್ಟುಕೊ."

ಎರಡೂ ಹಿಲಾಲುಗಳನ್ನು ನನ್ನ ತಲೆಯ ಮೇಲೆತ್ತಿಹಿಡಿದೆ. ಅವುಗಳ ಹೊಗೆ ಮೇಲೆ ಆಕಾಶಕ್ಕೆ ಹೋಗುತ್ತಿತ್ತು. ಜಾಗ್ರತೆಯಿಂದ, ಶ್ವಾಸವನ್ನು ಹೊರಗೆ ಬಿಡುತ್ತ ನಾನು ಒಂದರ ಮೇಲೊಂದು ಹಿಲಾಲನ್ನು ನನ್ನ ಬಾಯಲ್ಲಿಟ್ಟು ತುಟಿ ಮುಚ್ಚಿದೆ. ಜ್ವಾಲೆ ಆರಿದೊಡನೆ ಹೊಗೆಯ ಎರಡು ಸುರುಳಿಗಳು ನನ್ನ ಮೂಗಿನಿಂದ ಹೊರಬಂದವು. ನಾನು ಅಗ್ನಿಭಕ್ಷಕನಾಗಿಹೋದೆ.

ನನ್ನಲ್ಲಿ ಧನ್ಯತೆಯ ಭಾವ ಮೂಡಿ ಮೈ ಪುಳಕಿತವಾಯಿತು. ಹತ್ತೇಹತ್ತು ನಿಮಿಷಗಳಲ್ಲಿ ನಾನು ಈ ಮಹಾದಿವ್ಯವನ್ನು ನನ್ನದಾಗಿ ಮಾಡಿಕೊಂಡುಬಿಟ್ಟಿದ್ದೆ.

"ಭೇಷ್! ಚನ್ನಾಗಿ ಮಾಡಿದೆ. ನಿನ್ನ ಕೂದಲು ಮತ್ತು ರೆಪ್ಪೆ ತುಸು ಸುಟ್ಟಿರುವದು ನಿಜ. ಆದರೆ ಅದೇನೂ ದೊಡ್ಡದಲ್ಲ. ನಾನು ಪ್ರಾರಂಭಿಸಿದಾಗ ನನ್ನ ತಲೆಯ ಕೂದಲನ್ನೆಲ್ಲ ಸುಟ್ಟುಕೊಂಡುಬಿಟ್ಟಿದ್ದೆ." ಅಗ್ನಿಭಕ್ಷಕ ಹೇಳಿದ.

ಅಂದು ಮುಂಜಾನೆ ಇಡೀ ನಾನು ಇದೇ ಉದ್ಯೋಗ ನಡೆಸಿದೆ. ಊಟದ ಹೊತ್ತಿಗೆ ಮುಖದಲ್ಲಿ ಅನೇಕ ಗುಳ್ಳೆಗಳೆದ್ದಿದ್ದವು. ಆದರೇನಾಯಿತು? ೧೫ ವರ್ಷದ ಹುಡುಗ ಅಗ್ನಿಭಕ್ಷಕ[illegible]ದ್ದೇನೂ ಸಾಮಾನ್ಯ ಮಾತಾಗಿರಲಿಲ್ಲ.

ಅಂದು ರಾತ್ರಿ ನಾನು ಅಗ್ನಿಭಕ್ಷಕನೊಡನೆ [illegible]

[illegible]




ಹಸ್ಟರೇ, ನಮ್ಮದು ಕೇವಲ ಮನರಂಜನೆಯ ಆಟವಲ್ಲ. ಅದೊಂದು ಶಿಕ್ಷಣ. ನಮ್ಮ ಅಗ್ನಿಭಕ್ಷಕ ಹುಟ್ಟಿದ್ದು ಆಸ್ಪತ್ರೆಯಲ್ಲಿ. ಆ ಆಸ್ಪತ್ರೆ ಅವನು ಹುಟ್ಟಿದ ಒಂದು ತಾಸಿನಲ್ಲಿ ಸುಟ್ಟು ಹೋಯಿತು. ಅದರಿಂದ ಅವನಿಗೆ ಬೆಂಕಿಯಮೇಲೆ ವಿಚಿತ್ರವಾದೊಂದು ಹಿಡಿತ ಬಂದಿದೆ. ಮತ್ತೆ ಜಗತ್ತಿನ ಖಡ್ಗ ನುಂಗುವವರಲ್ಲಿ ಅತಿ ಕಿರಿಯನಾದ ಅದ್ಭುತ ಮಿಚಲ್‌ನನ್ನು ನೋಡಿರಿ...... ನಮ್ಮಲ್ಲಿರುವ ನರ್ತಕಿಯರಂತೂ ನಿಮ್ಮ ರಕ್ತದ ಒತ್ತಡವನ್ನು ಹೆಚ್ಚಿಸಿ ನಿಮ್ಮ ಹೃದಯ ಜೋರಾಗಿ ಬಡಿದುಕೊಳ್ಳುವಂತೆ ಮಾಡುವರು ........" ಎಂದು ಭಾಷಣ ಬಿಗಿಯುತ್ತಿದ್ದ.

ಜನ [illegible]



# ಹಿಂದುಸ್ತಾನ ವಿಮಾನ ಕಾರಖಾನೆ

ಸದಾನಂದ ವಿಟ್ಲ

ಬೆಂಗಳೂರು ನಗರದಲ್ಲಿ ಬಿ. ಟಿ. ಸಿ. (ಬೆಂಗಳೂರ ಟ್ರಾನ್ಸಪೋರ್ಟ ಸರ್ವಿಸ್) ಬಸ್ಸಿಗಾಗಿ ನೀವು ಯಾವುದೇ ರಸ್ತೆಯಲ್ಲಿ ಕಾಯುತ್ತ ನಿಂತಾಗ ಬೇರೆಯೇ ಬಣ್ಣದ ಭಾರಿ ಬಸ್ಸುಗಳು ಓಡಾಡುತ್ತಿರುವುದನ್ನು ನೋಡುವಿರಿ. ನೀವು ಎಂಟಾಣೆ ಕೊಟ್ಟರೆ ಇವು ಕೂಡ ನಿಮ್ಮನ್ನು ಒರನಾಡಿಕೊಂಡು




ಕೇಂದ್ರದಲ್ಲಿ ಇಳಿಸುವವು. ಶ್ರೀ ಜೆ. ಎಂ. ...ನಾಗೇಶರ ಆಡಳಿತೆಗೊಳಗಾಗಿರುವ ...ರತ ಸರಕಾರದ ಹಿಂದುಸ್ತಾನ ವಿಮಾನ ...ರ್ಖಾನೆಯು ಎಚ್. ಎ. ಎಲ್. ಎಂಬ ...ತ್ತಿರುವ ಈ ಬಸ್ಸುಗಳು ಯಾರನ್ನೂ ...ದೂ ಕಾಯಿಸುವುದಿಲ್ಲ, ಅವು ಮಾರ್ಗ ...ಧ್ಯದಲ್ಲಿ ಕೆಟ್ಟು ನಿಲ್ಲುವಂತಹವೂ ಅಲ್ಲ. ...ಾಕಾರದ ಆ ಬಸ್ಸುಗಳನ್ನು ನೋಡಿದರೇನೇ ಒಂದು ಬಗೆಯ ತೃಪ್ತಿಯುಂಟಾಗುತ್ತದೆ.

ಹಿಂದುಸ್ತಾನ ಏರ್‌ಕ್ರಾಫ್ಟ್ ಲಿಮಿಟೆಡ್ ಸಂಸ್ಥೆಯಲ್ಲಿ ಈ ಬಸ್ಸುಗಳಷ್ಟೇ ತಯಾರಾಗುತ್ತಿಲ್ಲ. ಭಾರತೀಯ ವಿಮಾನ ಪಡೆಗೆ ಬೇಕಾಗುವ ಬೇರೆ ಬೇರೆ ಮಾದರಿಯ ವಿಮಾನಗಳನ್ನು ಇಲ್ಲಿ ತಯಾರಿಸಲಾಗುತ್ತಿದೆ. ರೇಲು ಗಾಡಿಯ 'ಬಾಡಿ' ಯನ್ನು ಕಟ್ಟಲಾಗುತ್ತಿದೆ, ಹಳೆಯ ವಿಮಾನಗಳಿಗೆ ಹೊಸ ಭಾಗಗಳನ್ನು ಸೇರಿಸಿ ಸಜ್ಜುಗೊಳಿಸಲಾಗುತ್ತಿದೆ.

ಕಾರ್ಖಾನೆಯಲ್ಲಿನ ಕೆಲಸವನ್ನು ಮುಖ್ಯವಾಗಿ ಮೂರು ಬಗೆಯಾಗಿ ವಿಂಗಡಿಸಬಹುದು. ವಿಮಾನಗಳ ತಯಾರಿ ಮತ್ತು ಓವರಹಾಲ್, ಎಂಜಿನ್ ತಯಾರಿ, ಓವರಹಾಲ್, ಬಸ್ ಮತ್ತು ರೇಲು ಗಾಡಿಗಳ 'ಬಾಡಿ' ಕಟ್ಟುವುದು ಹೀಗೆ ಕಾರ್ಖಾನೆಯ ಕಾರ್ಯವಿಭಾಗವಿದೆ.

ಹಿಂದುಸ್ತಾನ ವಿಮಾನ ಕಾರ್ಖಾನೆ ಸಂಪೂರ್ಣ

ವಾಗಿ ಸರಕಾರೀ ಸಂಸ್ಥೆ. ಭಾರತೀಯ ವಿಮಾನ ಪಡೆಯ ಆವಶ್ಯಕತೆಗಳನ್ನು ಪೂರಯಿಸುವುದು ಅದರ ಮುಖ್ಯ ಉದ್ದೇಶ. ಆದರೂ ಅದರ ಇತರ ಚಟುವಟಿಕೆಗಳಿಂದ ಖಾಸಗಿ ಮತ್ತು ಸರಕಾರೀ ಉದ್ದಿಮೆ ವಿಭಾಗಗಳಿಗೆ ಅನುಕೂಲವಿದೆ. ದೇಶದ ಹಲವು ರಾಜ್ಯಗಳ ಸಾರಿಗೆ ಸಂಸ್ಥೆಗಳಿಗೆ ಮೋಟಾರುಗಳನ್ನು ಇಲ್ಲಿಂದಲೇ ಪೂರೈಸಲಾಗುತ್ತದೆ. ಅದರಂತೆಯೇ ತಗಡಿನ ರೇಲು ಡಬ್ಬಗಳನ್ನು ವಿಮಾನ ರಚನೆಯ ತಾತ್ವಿಕ ತಳಹದಿಯಿಂದ ಕಟ್ಟಲಾಗುತ್ತದೆ. ತಗಡಿನ ರೇಲು ಡಬ್ಬಿಯನ್ನು ತಯಾರಿಸುವದೂ ಕಾರ್ಖಾನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿದೆ. ಈ ತನಕ ತಿಂಗಳಿಗೆ ೧೫ ರೇಲುಡಬ್ಬಿಗಳ ರಚನೆಯಾಗುತ್ತಿದ್ದರೆ ಈಗ ದಿನಕ್ಕೆ ಒಂದರಂತೆ ತಯಾರಿಸುವ ಸ್ಥಿತಿಗೆ ಕಾರಖಾನೆ ಮುಟ್ಟಿದೆ. ಈ ವಿಮಾನ ಕಾರಖಾನೆಯಲ್ಲಿ ಕಟ್ಟಲಾಗುವ ರೇಲು ಡಬ್ಬಿಗಳಂತೆಯೇ ಬಸ್ಸುಗಳ 'ಬಾಡಿ'ಯ ರಚನೆಯು ವಿಮಾನ ರಚನೆಯ ತತ್ವಗಳನ್ನು ಅನುಸರಿಸಿದೆ.

ದೇಶದ ವಿಮಾನಪಡೆಗೆ ಬೇಕಾದ ಎಲ್ಲ ಬಗೆಯ ವಿಮಾನಗಳನ್ನು ಒದಗಿಸುವ ಈ ಕಾರಖಾನೆ ಬಹುಶಃ ಪೂರ್ವದ ದೇಶಗಳಲ್ಲೇ ಅತಿ ದೊಡ್ಡದು. ಭಾರತವು ಯಾವದೇ ಮಿಲಿಟರಿ ಒಪ್ಪಂದಕ್ಕೆ ಸೇರುವ ಧೋರಣೆ ತಳೆಯದೆ ಇರುವುದರಿಂದ ಈ ಸಂಸ್ಥೆಯ ಜವಾಬುದಾರಿಯೂ ಮಹತ್ತರವಾದುದು. ಒಪ್ಪಂದಗಳಿಗೆ ಸೇರಿದ ದೇಶಗಳು ಇಂಥ ವಿಷಯಗಳಲ್ಲಿ ಪರಸ್ಪರ ಸಹಾಯವನ್ನು ಹೊಂದಬಲ್ಲವು. ಆದರೆ ಭಾರತವು ಸ್ವತಂತ್ರವಾಗಿ ತನ್ನ ರಕ್ಷಣ ಉದ್ದಿಮೆಯನ್ನು ಅಭಿವೃದ್ಧಿಪಡಿಸಿಕೊಳ್ಳಬೇಕಾಗಿದೆ.

ಈ ದೃಷ್ಟಿಯಿಂದಲೇ ಕಾರ್ಖಾನೆಯ ಅಭಿವೃದ್ಧಿಯು ನಡೆದಿದೆ. ನಾಗರಿಕ ಮತ್ತು ಮಿಲಿಟರಿ ಮೇಲಧಿಕಾರಿಗಳ ಕೆಳಗೆ ಕಾರಖಾನೆಯ ವಿಮಾನ ತಯಾರಿ ವಿಭಾಗವು ವಿವಿಧ ಮಾದರಿಯ ವಿಮಾನಗಳನ್ನು ತಯಾರಿಸುವ ಮತ್ತು ಸಜ್ಜುಗೊಳಿಸುವ ಕೆಲಸವನ್ನು ಇಷ್ಟರತನಕ ನಡೆಸಿದೆ. ಟೈಗರ್ ಮೋತ್, ಟ್ರೇನರ್, ಟೆಂಪೆಸ್ಟ್‌ಫೈಟರ್, ಲಿಬರೇಟರ್, ಡಕೋಟಾ ಮೊದಲಾದ ಎಷ್ಟೋ ಜಾತಿಯ ವಿಮಾನಗಳನ್ನು ತಯಾರು ಮಾಡಿದೆ.

ಜೆದ್ದಾ, ಧಾರಾನ್, ಸಿಂಹಳ, ಇಥಿಯೋಪಿಯ ಮತ್ತು ಬರ್ಮಾ ದೇಶದ ವಿಮಾನಗಳ ದುರಸ್ತಿ (ಓವರ ಹಾಲ್) ಕಾರ್ಯವನ್ನು ಸಂಪೂರ್ಣವಾಗಿ ಹಿಂದುಸ್ಥಾನ ಕಾರ್ಖಾನೆಯೇ ನಡೆಸುತ್ತ ಬಂದಿದೆ.

ಮುಂದುವರಿದು ಈಗ ಹೊಸತಾಗಿ H. T. 2 ಎಂಬ ಹೊಸ ಟ್ರೇನರ್ (ತರಬೇತಿ) ವಿಮಾನವನ್ನು ತಯಾರಿಸಲಾಗಿದ್ದು ಅದು ಆಗ್ನೇಯ ಏಶಿಯದಲ್ಲಿ ಈಚೆಗೆ ೪,೦೦೦ ಮೈಲಿ ಪ್ರದರ್ಶನ ಪ್ರವಾಸವನ್ನು ಮಾಡಿ ಬಂದಿದೆ. ಈ ವಿಮಾನವು ಎಲ್ಲ ತರದಲ್ಲಿಯೂ ವಿದೇಶೀ ತಯಾರಿಕೆಗಳಿಗೆ ಸರಿದೂಗಬಲ್ಲ ಮಾದರಿಯದಾಗಿದೆ. ಈಗ ಹೊಸತಾಗಿ ಸುಧಾರಿಸಿದ ಜೆಟ್ ಟ್ರೇನರನ್ನು ತಯಾರಿಸುವ ಕೆಲಸವನ್ನು ಕೈಗೊಂಡಿದೆ.

೧೯೪೦ ಡಿಸೆಂಬರ ೨೩ ರಲ್ಲಿ ಸ್ಥಾಪಿತವಾದ ಹಿಂದುಸ್ತಾನ ವಿಮಾನ ಕಾರ್ಖಾನೆಯ ಈ ತ್ವರಿತ ಪ್ರಗತಿಯ ಹಿನ್ನಲೆಯೇನು ? ಬ್ರಿಟನ್ ಮತ್ತು ಅಮೇರಿಕೆಯ ವಾಯುಯಾನ ಸಂಸ್ಥೆಗಳ ಸದಸ್ಯತ್ವ ಪಡೆದು ಅವುಗಳಿಂದ ಮನ್ನಿಸಲ್ಪಟ್ಟಿರುವುದೇ ಈ ಯಶಸ್ಸಿಗೆ ಕಾರಣವಾಗಿದೆ. ಭಾರತೀಯ ವಾಯುಯಾನವು ಅಮೇರಿಕೆಯ ಡಗ್ಲಾಸ್ ಕಂಪನಿಯ ಮೂಲಕ ಅಭಿವೃದ್ಧಿಗೆ ಬಂತು. ಡಗ್ಲಾಸ್ ವಿಮಾನಗಳು ಕಳೆದ ಯುದ್ಧದ ಕಾಲದಲ್ಲಿ ಮಿಲಿಟರಿ ಸಾರಿಗೆ ವಿಮಾನಗಳಾಗಿದ್ದವು.

ಇಂದು ಹತ್ತು ಸಾವಿರ ಕೆಲಸಗಾರರಿಂದ ಕೂಡಿರುವ ಹಿಂದುಸ್ತಾನ ಸಂಸ್ಥೆಯಲ್ಲೀಗ ಭಾರತೀಯ ವಿಮಾನಪಡೆಯ ಉಪಯೋಗಕ್ಕೆಂದು ವಾಂಪಾಯರ್ ಜೆಟ್ ಫೈಟರುಗಳನ್ನು ಟ್ರೇನರುಗಳನ್ನೂ ಸಿದ್ಧಗೊಳಿಸಲಾಗುತ್ತದೆ. ಬ್ರಿಟನ್ನಿನ ಜೆಟ್ ಲೈಟ್ ಫೈಟರ್, 'ಜಾಯಂಟ್' ವಿಮಾನವನ್ನು ಇಲ್ಲಿಯೆ ತಯಾರಿಸಲು ಸಾಧ್ಯವಾಗುವಂತೆ ಫೂಲಾಂಡ್ ವಿಮಾನ ಕಂಪನಿಯೊಡನೆ ಲೈಸೆನ್ಸ್ ಪಡೆಯುವ ಮಾತುಕತೆಯೀಗ ನಡೆದಿದೆ. ಜೆಟ್ ಎಂಜಿನ್ನುಗಳ ತಯಾರಿಗಾಗಿ ಬ್ರಿಸ್ಟಲ್ ಏರೋಎಂಜಿನ್

ಕಂಪನಿಯೊಡನೆ ಕಾಂಟ್ರಾಕ್ಟ್ ನಡೆಸುವ ಮಾತುಕತೆಯು ಪೂರ್ಣವಾಗುತ್ತ ಬಂದಿದೆ. ಈ ಎರಡು ಹೊಸ ಯೋಜನೆಗಳ ಲಾಯಸೆನ್ಸ್ ಒಪ್ಪಂದಕ್ಕೆ ಬೇಗನೆ ಸಹಿಯಾಗುವ ನಿರೀಕ್ಷೆ ಇದೆ.

ನಾಗರಿಕಾವಶ್ಯಕತೆಗಳನ್ನು ಅನುಸರಿಸಿ ಪ್ರಯಾಣಿಕರ ವಿಮಾನಗಳನ್ನು ಓವರಹಾಲ್ ಮಾಡಿದೆ, ರಿಪೇರಿ ಮಾಡಿದೆ; ಕಲಕತ್ತೆಯ ಬರಾಕ್‌ಪುರದಲ್ಲಿರುವ ಈ ಕಾರ್ಖಾನೆಯ ಶಾಖೆಯು ರಿಪೇರಿ ಮತ್ತು ಓವರಹಾಲ್ ಕಾರ್ಯಗಳನ್ನು ಮಾಡುತ್ತದೆ. ಇದೇ ಶಾಖೆಯು ದೇಶದ ನಾಗರಿಕ ವಿಮಾನ ಸಾರಿಗೆಯ ಅವಶ್ಯಕತೆಗಳೆಲ್ಲವನ್ನೂ ಪೂರಯಿಸುತ್ತದೆ.

ಇಂದಿನ ಯಂತ್ರಯುಗದಲ್ಲಿ ದೊಡ್ಡ ಪ್ರಮಾಣದ ಉದ್ದಿಮೆಯು ರಾಷ್ಟ್ರದ ರಕ್ಷಣೆಯಲ್ಲಿ ಮುಖ್ಯ ಪಾತ್ರವನ್ನು ವಹಿಸುವುದು. ವಿಮಾನ ತಯಾರಿಕೆಯಂಥ ರಕ್ಷಣಾ ವಿಭಾಗಕ್ಕೆ ಸಂಬಂಧಿಸಿದ ಉದ್ದಿಮೆಗಳಿಗೆ ಅದರಲ್ಲಿಯೂ ಪ್ರಾಶಸ್ತ್ಯವಿದೆ. ಆ ದೃಷ್ಟಿಯಿಂದ ಹಿಂದುಸ್ತಾನ ವಿಮಾನ ಕಾರ್ಖಾನೆಯು ನಮ್ಮ ವಿಮಾನ ಪಡೆಯ ಎಲ್ಲಾ ಬೇಡಿಕೆಗಳನ್ನು ಪೂರಯಿಸುವಷ್ಟು ಸಮರ್ಥವಾಗುವುದೆಂದರೆ ಜಗತ್ತಿನ ಶ್ರೇಷ್ಠ ವಿಮಾನಪಡೆಗಳಿರುವ ದೇಶಗಳ ವಿಮಾನಗಳಷ್ಟೇ ಉಪಯೋಗಕರವಾದ ವಿಮಾನಗಳನ್ನು ತಯಾರಿಸಲು ಸಮರ್ಥವಾಗುವುದೆಂದು ಅರ್ಥ. ೧೦-೨೦ ವರ್ಷಗಳಲ್ಲಿ ಈ ವಿಮಾನ ಕಾರ್ಖಾನೆಯು ಆ ಶಕ್ತಿಯನ್ನು ತಾಳಲು ಸಾಧ್ಯವಾಗಬಹುದು. ಆಗ ನಮ್ಮ ಪರಾವಲಂಬನೆ ತಪ್ಪುವುದು.



## ಬರ್ಮಿ ಬೌದ್ಧರ ಅಹಿಂಸೆ

ಬರ್ಮಾದಲ್ಲಿನ ಬೌದ್ಧರು ಅಹಿಂಸೆಯಲ್ಲಿ ಹೆಚ್ಚಿನ ಶ್ರದ್ಧಾಸಕ್ತಿಗಳನ್ನಿಟ್ಟಿರುವರು- ಅದರಿಂದಲೇ ಅವರು ಮೀನು ಹಿಡಿಯುವ ಒಂದು ಅತ್ಯಂತ ಮನೋರಂಜಕವಾದ ಹಾಗೂ ಅಹಿಂಸಕವಾದ ಉಪಾಯವನ್ನು ಕಂಡುಹಿಡಿದಿರುವರು !

ಅವರು ಬಲೆಯ ಕೆಳಗಡೆ ಕಟ್ಟಿಗೆಯ ತುಂಡೊಂದನ್ನು ಜೋಡಿಸಿಡುವರು. ಈ ಕಟ್ಟಿಗೆಯ ತುಂಡಿಗೆ ಸಂಪೂರ್ಣ ಬಿಳಿಯ ಬಣ್ಣವನ್ನು ಬಳಿಯುವರು. ಇದರಿಂದ ಅದು ಬೆಳಕಿನಲ್ಲಿ ಥಳಥಳಿಸುವುದು. ಇದನ್ನು ನೋಡಿ ಮೀನುಗಳು ಹಾರಾಡುತ್ತ ಮೇಲುಗಡೆ ಓಡಿ ಹೋಗಲು ಪ್ರಯತ್ನಿಸುತ್ತವೆ. ಈ ಪ್ರಯತ್ನದಲ್ಲಿ ತಿಳಿಯದೆ ಅವು ಹತ್ತಿರದಲ್ಲಿರುವ ಬಲೆಯಲ್ಲಿ ಬೀಳುವವು.

ಅಂಬಿಗರು ಹೀಗೆ ಬಿದ್ದ ಮೀನುಗಳನ್ನು ಹಿಡಿಯುವರು. ಹೀಗೆ ಮಾಡಿದ್ದರಿಂದ ತಾವು ಹಿಂಸೆಮಾಡಿದಂತಾಗುವುದಿಲ್ಲವೆಂದು ಅವರ ಹೇಳಿಕೆ; ಏಕೆಂದರೆ ಮೀನುಗಳು ತಾವಾಗಿ ಬಂದು ಬಲೆಯಲ್ಲಿ ಬೀಳುತ್ತ ಆತ್ಮಹತ್ಯೆ ಮಾಡಿಕೊಳ್ಳುತ್ತವೆ. ಇದರಿಂದ ತಮ್ಮ ತಪ್ಪೇನೂ ಇಲ್ಲವಲ್ಲ — ಈ ಹಿಂಸೆಗೆ ತಾವು ಹೊಣೆಯಲ್ಲವಲ್ಲ ಎಂದು ಅವರ ವಾದ.

— ನವನೀತ

ಒಂದು ಬ್ರಹ್ಮೀ ಲೋಕಕಥೆ

# ಮೊಸಳೆಗೆ ನಾಲಿಗೆಯೇಕಿಲ್ಲ ?



ಮೊಸಳೆಗೆ ನಾಲಿಗೆಯಿರುವದಿಲ್ಲ ಎಂಬ ಸತ್ಯ ಅನೇಕರಿಗೆ ಗೊತ್ತಿರಲಿಕ್ಕಿಲ್ಲ. ಬ್ರಹ್ಮ ದೇಶದ ನದಿಗಳಲ್ಲಿ ಮೊಸಳೆಗಳು ಹೇರಳವಾಗಿದ್ದು ಅಲ್ಲಿಯ ಜನರಿಗೆ ಮಾತ್ರ ಈ ಮಾತು ಪರಿಚಿತವಿದೆ. ಮೊಸಳೆಗೆ ನಾಲಿಗೆ ಯಾಕಿಲ್ಲ ಎಂದು ಕೇಳಿದರೆ ಅಲ್ಲಿಯ ಜನ ತಮ್ಮಲ್ಲಿ ಪ್ರಚಲಿತವಿರುವ ಈ ಕಥೆಯನ್ನು ಹೇಳುತ್ತಾರೆ.

ದಷ್ಟಪುಷ್ಟವಾಗಿ ಬೆಳೆದ ಮೊಸಳೆಯೊಂದನ್ನು ಕಂಡು ಒಮ್ಮೆ ಒಂದು ಕಾಗೆಗೆ ಬಾಯಲ್ಲಿ ನೀರೂರಿತು. ಆದರೆ ಬಡ ಕಾಗೆ ಬಲಿಷ್ಠವಾದ ಮೊಸಳೆಯನ್ನು ಕೊಲ್ಲುವದಾದರೂ ಸಾಧ್ಯವಿದೆಯೆ ? ಕಾಗೆ ಯೋಚಿಸಿಯೋಚಿಸಿ ಒಂದು ಉಪಾಯ ಹುಡುಕಿತು.

ಕಾಗೆ ಮೊಸಳೆಯನ್ನುದ್ದೇಶಿಸಿ "ಗೆಳೆಯಾ, ಏನು ನಿನ್ನ ಅವಸ್ಥೆ ! ಮನೆ ಹಿಡಿದು ಕುಳಿತಿರುವ ಮುದುಕನಂತಿರುವಿಯಲ್ಲ ! ಅಲ್ಲೋ, ಇಲ್ಲಿಯೆ ಸಮೀಪದಲ್ಲಿ ಇದಕ್ಕೂ ಬಹಳ ದೊಡ್ಡದಾದ, ತಿಳಿ ನೀರಿನ ನದಿ ಇರುವಾಗ ಈ ಪುಟ್ಟ, ಕೊಳಚೆ ನೀರಿನ ನದಿಯಲ್ಲೇಕೆ ಕೊಳೆಯುತ್ತ ಬಿದ್ದಿರುವಿಯೊ ನನಗೆ ತಿಳಿಯದು," ಎಂದಿತು.

"ಆಂ! ಹಾಗಾದರೆ ನೀನನ್ನುವ ಈ ದೊಡ್ಡ ನದಿಯ ಸಮಾಚಾರ ನನ್ನ ಕಿವಿಗೆ ಇದುವರೆಗೂ ಏಕೆ ಬಿದ್ದಿಲ್ಲ?" ಮೊಸಳೆ ಆಶ್ಚರ್ಯದಿಂದ ಕೇಳಿತು.

ಕಾಗೆ ಗಂಭೀರಭಾವದಿಂದ "ಸುಳ್ಳೆಂಬುದನ್ನು ನನ್ನ ನಾಲಗೆ ಅರಿಯದು. ನಾನು ಬಹು ದಯಾಳು ಪ್ರಾಣಿ; ಪರೋಪಕಾರಿ. ನಿತ್ಯವೂ ಇತರರಿಗೆ ಸಹಾಯ ಮಾಡುತ್ತಿರುವದೇ ನನ್ನ ಕಾರ್ಯ" ಎಂದಿತು.

"ಹಾಗಾದರೆ ಆ ದೊಡ್ಡ ನದಿಯ ದಂಡೆಗೆ ನನ್ನನ್ನು ಕರೆದೊಯ್ದು ಬಿಡುವಿಯಾ?" ಎಂದು ಮೊಸಳೆ ದೀನನಾಗಿ ಕೇಳಿಕೊಂಡಿತು.

"ಓಹೋ! ಅದಕ್ಕೇನಂತೆ? ಆ ನದಿ ಇಲ್ಲಿಂದ ಕೇವಲ ಒಂದರ್ಧ ಹರದಾರಿ ದೂರದಲ್ಲಿದೆ. ನಿನ್ನಂಥ ದೊಡ್ಡ ಬಲಿಷ್ಠ ಪ್ರಾಣಿಗೆ ಅಲ್ಲಿಯ ವರೆಗೆ ನಡೆದುಕೊಂಡು ಹೋಗುವದು ಅಸಾಧ್ಯವೇ ?"

ಕಾಗೆಯ ಮಾತು ಕೇಳಿ ಉಬ್ಬಿದ ಮೊಸಳೆ ಅಷ್ಟು ದೂರ ತಾನು ಸಹಜವಾಗಿ ನಡೆಯಬಲ್ಲೆ ಎಂದಿತು.

ಕಾಗೆ ಮುಂದೆ ಮುಂದೆ ಹಾರುತ್ತ ಕುಪ್ಪಳಿಸುತ್ತ ನಡೆಯಿತು. ಮೊಸಳೆ ಹಿಂದಿನಿಂದ ನಡೆಯಿತು.

ಮೂರು ಮೈಲು ಕ್ರಮಿಸಿದರೂ ದೊಡ್ಡ ನದಿಯೇನೂ ಕಣ್ಣಿಗೆ ಬೀಳಲಿಲ್ಲ. "ಕಾಗಣ್ಣಾ, ಅರ್ಧ ಹರದಾರಿಯೆಂದೆ. ನಾವೀಗ ಏನಿಲ್ಲೆಂದರೂ ಒಂದು ಹರದಾರಿ ದೂರ ಬಂದೆವು. ನಿನ್ನ ನದಿ ಇರುವದಾದರೂ ಎಲ್ಲಿ ?" ಮೊಸಳೆ ಕೇಳಿತು.

"ವ್ಹಾ ! ಒಂದು ಹರದಾರಿಯಂತೆ. ಅರ್ಧ ಹರದಾರಿ ಕೂಡ ಬಂದಿಲ್ಲ. ಧೈರ್ಯ ಹಿಡಿ. ಇನ್ನು ತುಸು ದೂರ ಹೋದರಾಯಿತು. ನಿನ್ನಂಥ ಬಲಿಷ್ಠನು ಇಷ್ಟು ಬೇಗ ಸೋತುಹೋಗುವದು ಸಾಧ್ಯವೇ ಇಲ್ಲ."

ತಾನು ದಣಿದಿದ್ದೇನೆಂದು ಕಾಗೆಯ ಮುಂದೆ ಒಪ್ಪಿಕೊಳ್ಳಲು ಮೊಸಳೆಗೆ ನಾಚಿಕೆಯೆನಿಸಿತು. ಅದು ಮತ್ತೆ ನಡೆಯತೊಡಗಿತು. ಆದರೆ ನಡೆದು ನಡೆದು ಅದು ತೀರ ನಿತ್ರಾಣವಾಗಿ ರಸ್ತೆಯ ಅಂಚಿನಲ್ಲಿ ಅಸಹಾಯ ಸ್ಥಿತಿಯಲ್ಲಿ ತೇಕುತ್ತ ಬಿದ್ದುಕೊಂಡಿತು.

ಏಳಲಾರದೆ ಬಿದ್ದ ಮೊಸಳೆಯನ್ನು ಕಂಡು ಕಾಗೆ ಗಹಗಹಿಸುತ್ತ "ವ್ಹಾ! ಬುದ್ಧಿಹೀನ ಮಿತ್ರಾ, ಇನ್ನು ಬೇಗನೆ ನೀನು ಹಸಿವೆಯಿಂದ ಬಳಲಿ ಇಲ್ಲಿ ಸತ್ತುಹೋಗುವಿ. ವ್ಯರ್ಥ ದುಃಖಿಸಬೇಡ. ನೀನು ಸತ್ತ ಬಳಿಕ ನಾನಿಲ್ಲಿಗೆ ಬಂದು ನಿನ್ನ ಮಾಂಸವನ್ನು ತಿಂದು ತೇಗುವೆನು" ಎನ್ನುತ್ತ ಮೊಸಳೆಯನ್ನು ಅಲ್ಲೇ ಬಿಟ್ಟು ಹಾರಿಹೋಯಿತು.

ತುಸು ಹೊತ್ತು ಕಳೆಯಿತು. ಒಬ್ಬ ಮನುಷ್ಯ ತನ್ನ ಗಾಡಿಯನ್ನು ಹೊಡೆದುಕೊಂಡು ಆ ಮಾರ್ಗವಾಗಿ ಬಂದನು. ಆ ಮೊಸಳೆ ಅವನನ್ನು ಕುರಿತು "ಅಯ್ಯಾ, ನನ್ನನ್ನು ನನ್ನ ನದಿಗೊಯ್ದು ಬಿಟ್ಟು ನನ್ನ ಜೀವ ಉಳಿಸು," ಎಂದು ಕಣ್ಣಲ್ಲಿ ನೀರು ತಂದು ಬೇಡಿಕೊಂಡಿತು. ಮೊಸಳೆಯ ಕಷ್ಟವನ್ನು ಕಂಡು ಆ ಗಾಡಿಯವನಿಗೆ ದಯ ಹುಟ್ಟಿತು.

ಆದರೆ ಮೊಸಳೆ ಕಪಟಿಯಾದ ಪ್ರಾಣಿ ಎಂಬುದನ್ನು ಬಲ್ಲ ಆ ಗಾಡಿಯವ ಅದನ್ನೆತ್ತಿ ತನ್ನ ಗಾಡಿಯಲ್ಲಿಡುವ ಮೊದಲು ಅದನ್ನು ಹಗ್ಗದಿಂದ ಬಲವಾಗಿ ಕಟ್ಟಿಹಾಕಿದನು. ಗಾಡಿಯನ್ನು ನದಿಯ ಬಳಿಗೆ ತಂದು ಮೊಸಳೆಯನ್ನೆತ್ತ ತೊಡಗಿದನು.

ಮೊಸಳೆ ಆಗ ಕಂಪಿಸುವ ದನಿಯಲ್ಲಿ, "ಅಯ್ಯಾ, ಪರೋಪಕಾರಿಯಾದ ಮನುಷ್ಯನೇ, ನಾನು ಬಹಳ ದಣಿದುಹೋಗಿದ್ದೇನೆ. ನಿನ್ನ ಹಗ್ಗದ ಬಲವಾದ ಬಿಗಿತದಿಂದಂತೂ ಉಸಿರುಕಟ್ಟಿ ಸಾಯುವಂತಾಗಿದ್ದೇನೆ. ಈ ಸ್ಥಿತಿಯಲ್ಲಿ ನನ್ನನ್ನು ನೀನು ನದಿಯ ದಂಡೆಯ ಮೇಲೆ ಬಿಟ್ಟು ಹೋದೆಯಾದರೆ ನಾನು ನದಿ ಸೇರಲಾರೆ. ಯಾವನಾದರೂ ದುರುಳನು ಬಂದು ನನ್ನನ್ನು ಕೊಂದು ಹಾಕುವನು. ಆದ್ದರಿಂದ ಹಗ್ಗ ಬಿಚ್ಚದಿದ್ದರೂ ಸರಿ, ನೀರು ನಿನ್ನ ಎತ್ತಿನ ಮೊಣಕಾಲಿನ ವರೆಗೆ ಬರುವ ವರೆಗೆ ನೀರಿನಲ್ಲಿ ಗಾಡಿ ಹೊಡೆದು ನನ್ನನ್ನು ನದಿಯಲ್ಲಿ ಎತ್ತಿಹಾಕು" ಎಂದು ಬೇಡಿಕೊಂಡಿತು.

ಗಾಡಿಯವ ಅದೇ ರೀತಿ ಗಾಡಿಯನ್ನು ನೀರಲ್ಲಿ ಹೊಡೆದನು. ಮತ್ತೆ, ಪಾಪ! ಎಂದು ಮೊಸಳೆಗ

ಕಟ್ಟಿದ್ದ ಹಗ್ಗವನ್ನು ಬಿಚ್ಚಿ ಅದನ್ನೆತ್ತಿ ನೀರಲ್ಲಿ ಚೆಲ್ಲಿದನು. ಆದರೆ ಆ ದುಷ್ಟ ಮೊಸಳೆ ನೀರಲ್ಲಿ ಬಿದ್ದ ತತ್‌ಕ್ಷಣ ಒಂದು ಎತ್ತಿನ ಕಾಲನ್ನು ಕಚ್ಚಿ ತನ್ನ ದವಡೆಯಲ್ಲಿ ಹಿಡಿದುಕೊಂಡಿತು.

"ಛಿ! ಛಿ! ಕೃತಘ್ನ ಪ್ರಾಣಿಯೇ, ಬಿಡು. ನನ್ನ ಎತ್ತಿನ ಕಾಲನ್ನು ಬಿಡು," ಎಂದು ಗಾಡಿಯವನು ಕೂಗಿಕೊಳ್ಳತೊಡಗಿದನು. ಆದರೆ ಮೊಸಳೆ ಬಿಡಲಿಲ್ಲ.

ನೀರು ಕುಡಿಯಲೆಂದು ಬಂದಿದ್ದ ಒಂದು ಮೊಲ ದಂಡೆಯಲ್ಲಿ ನಿಂತು ಇದೆಲ್ಲವನ್ನೂ ನೋಡುತ್ತಲಿತ್ತು. ಅದು, "ನಿನ್ನ ಕೈಯಲ್ಲಿರುವ ದೊಣ್ಣೆಯಿಂದ ಮೊಸಳೆಗೆ ಬಲವಾದ ಏಟು ಹಾಕು" ಎಂದು ಗಾಡಿಯವನಿಗೆ ಕೂಗಿ ಹೇಳಿತು. ಗಾಡಿಯವನು ತನ್ನಲ್ಲಿದ್ದ ಶಕ್ತಿಯನ್ನೆಲ್ಲ ಉಪಯೋಗಿಸಿ ಮೊಸಳೆಯ ತಲೆಯ ಮೇಲೆ ದೊಣ್ಣೆಯ ಪೆಟ್ಟು ಹಾಕಿದನು. ಮೊಸಳೆ ಎತ್ತಿನ ಕಾಲನ್ನು ಬಿಡಲೇಬೇಕಾಯಿತು. ಗಾಡಿಯವನು ಬೇಗಬೇಗ ಗಾಡಿಯನ್ನು ನೀರಿನಿಂದ ಹೊರಗೆ ತಂದು ಆ ಮೊಲದ ಆಭಾರಮನ್ನಿಸಿ ಹೊರಟುಹೋದನು.

ಮೊಸಳೆಗೆ ಮೊಲದ ಮೇಲೆ ಬ್ರಹ್ಮಾಂಡ ಸಿಟ್ಟು ಬಂತು. ಮತ್ತೊಮ್ಮೆ ಅದು ನೀರು ಕುಡಿಯಲು ಬಂದಾಗ ಅದನ್ನೇ ಹಿಡಿದು ನುಂಗಿ ಅದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಬೇಕು ಎಂದು ಮೊಸಳೆ ಮನದಲ್ಲೇ ನಿರ್ಧರಿಸಿಕೊಂಡಿತು.

ಮರುದಿನ ಇನ್ನೂ ನಸುಕಿರುವಾಗಲೇ ಮೊಸಳೆ ನದಿಯ ದಂಡೆಗೆ ಈಸುತ್ತ ಬಂದು ಮೊಲದ ಹಾದಿ ನೋಡುತ್ತ ಕುಳಿತಿತು. ಆದರೆ ದಂಡೆಯ ಬಳಿ ನೀರು ಬಹಳ ಕಡಿಮೆ ಇದ್ದುದರಿಂದ ಅದಕ್ಕೆ ತನ್ನ ಇಡೀ ದೇಹವನ್ನು ನೀರಿನಲ್ಲಿ ಅಡಗಿಸಿಟ್ಟುಕೊಳ್ಳುವದು ಸಾಧ್ಯವಾಗಲಿಲ್ಲ. ಅದರ ಬೆನ್ನು ನೀರ ಮೇಲೆ ಎದ್ದು ಕಾಣಿಸುತ್ತಿತ್ತು.

ಮೊಲ ಬರುವದನ್ನು ಕಂಡೊಡನೆ ಯಾವದೋ ಕಟ್ಟಿಗೆ ತುಂಡು ಬಿದ್ದಿದೆ ಎಂಬ ಭ್ರಮೆ ಅದಕ್ಕಾಗಲಿ ಎಂದು ಮೊಸಳೆ ನಿಶ್ಚಲವಾಗಿ ಬಿದ್ದುಕೊಂಡಿತು. ಆದರೆ ಮೊಲ ಚತುರ ಪ್ರಾಣಿ. ಕಟ್ಟಿಗೆ ತುಂಡಿನಂತೆ ಕಂಡುಬರುವ ಈ ವಸ್ತು ಏನು ಎಂದು ಕಣ್ಣಿಟ್ಟು ನೋಡಿತು. ಅದು ದೊಡ್ಡ ದನಿಯಲ್ಲಿ,

"ನಿಜವಾದ ಮೊಸಳೆ ಪ್ರವಾಹದ ಎದುರು ಈಸುತ್ತದೆ. ಕಟ್ಟಿಗೆಯ ತುಂಡು ಪ್ರವಾಹದಗುಂಟ ತೇಲುತ್ತ ಹೋಗುತ್ತದೆ," ಎಂದು ಕೂಗಿತು.

ತಾನು ನಿಜವಾಗಿಯೂ ಕಟ್ಟಿಗೆಯ ತುಂಡು ಎಂದು ಮೊಲಕ್ಕೆ ಖಾತ್ರಿಯಾಗಲಿ ಎಂದು ಮೊಸಳೆ ಪ್ರವಾಹದಗುಂಟ ಕೆಳಗಡೆ ತೇಲುತ್ತ ಹೋಯಿತು. ಮೊಲ ಈ ಸಂಧಿಯನ್ನು ಸಾಧಿಸಿ ಅವಸರದಿಂದ ನೀರು ಕುಡಿದು ಓಡಿತು.

ಮರುದಿನ ಮತ್ತೆ ಮೊಸಳೆ ಕಟ್ಟಿಗೆಯ ತುಂಡಿನಂತೆ ನಟಿಸಿ ಮೊಲದ ಹಾದಿ ಕಾಯುತ್ತ ಬಿದ್ದುಕೊಂಡಿತು. ನೀರು ಕುಡಿಯಲು ಬಂದ ಮೊಲ



## ಪ್ರೇಮ ಮತ್ತು ಆಶೆ

ನಾಳೆ ಜಗತ್ತು ಹೇಗೆ ಬಾಳಲಿದೆಯೆಂದು ನಾವರಿಯೆವು. ಆದರೆ ಒಂದು ಸಂಗತಿ ಮಾತ್ರ ಖಂಡಿತ. ಪ್ರಪಂಚದಲ್ಲಿ ಮಾನವಪ್ರೇಮಕ್ಕೆ ಅವಸಾನ ಬಂದಿಲ್ಲ. ಅದು ತನ್ನ ಸ್ವಭಾವಕ್ಕನುಸಾರವಾಗಿ ಹೊಸ ಜನ್ಮ ತಾಳುತ್ತಲೇ ಹೋಗುವದು, ಹೊಸ ಹೊಸ ಸಮಸ್ಯೆಗಳನ್ನು ಹೊಸ ಹೊಸ ಉಪಾಯಗಳಿಂದ ಬಿಡಿಸುತ್ತಲೇ ಹೋಗುವದು. ಅದು ತನಗೆ ಅಳಿಗಾಲ ಬರಲಿದೆ ಅಥವಾ ಕಷ್ಟ ಬರಲಿದೆಯೆಂದು ಎಂದೂ ನಂಬುವದಿಲ್ಲ. ಹೀಗೆ ಪ್ರಪಂಚಕ್ಕೆ ಸಂಕಟ ಬಂದಾಗಲೆಲ್ಲ ಪ್ರೇಮವು ಉಷಃಕಾಲದ ಸೌಂದರ್ಯದಿಂದ ಶಾಂತಿ ಮತ್ತು ಆಶೆಯ ದಾರಿ ಹಿಡಿದು ಹುರುಪಿನಿಂದ ಮುನ್ನಡೆಯುವದು. ಮನುಷ್ಯನು ಮುಂದುವರಿದಷ್ಟೂ ಅವನ ಹಾದಿ ಅಗಲವಾಗುತ್ತದೆ. ಇದರಿಂದ ಆಶೆಗೆ ಇನ್ನಷ್ಟು ಅವಕಾಶ ಹೆಚ್ಚಾಗುತ್ತದೆ. ಕೊನೆಗೆ, ಆಶೆ ಮತ್ತು ಪ್ರೇಮ ಇವು ನಿಕಟ ಬಂಧುಗಳು ತಾನೆ !

—ಜೀನ್ ಗುಯಿಟನ್

ಕಟ್ಟಿಗೆಯ ತುಂಡಿನಂತೆ ಬಿದ್ದಿದ್ದ ಮೊಸಳೆಯನ್ನು ಕಂಡು ಹಿಂದಿನ ದಿನದಂತೆ,

"ನಿಜವಾದ ಮೊಸಳೆ ಪ್ರವಾಹದ ಎದುರು ಈಸುತ್ತದೆ. ಕಟ್ಟಿಗೆಯ ತುಂಡು ಪ್ರವಾಹದ ಗುಂಟ ತೇಲುತ್ತ ಹೋಗುತ್ತದೆ," ಎಂದು ಕೂಗಿತು.

ಆದರೆ ಮೊಸಳೆ ನಿಶ್ಚಲವಾಗಿಯೆ ಬಿದ್ದು ಕೊಂಡಿತು. ಇದು ಮೊಸಳೆಯಲ್ಲ, ನಿಜವಾದ ಕಟ್ಟಿಗೆಯ ತುಂಡು ಎಂದು ಮೊಲಕ್ಕೆ ನಂಬಿಗೆ ಯುಂಟಾಯಿತು. ನೀರು ಕುಡಿಯಲೆಂದು ಮೊಲ ಬಗ್ಗಿದ್ದೇ ತಡ, ಮೊಸಳೆ ಅದನ್ನು ತನ್ನ ದವಡೆಯಲ್ಲಿ ಹಿಡಿಯಿತು.

ಆದರೆ ಮೊಸಳೆ ಕೂಡಲೆ ಅದನ್ನು ತಿನ್ನಲಿಲ್ಲ. ತನಗೆ ಅನ್ಯಾಯ ಮಾಡಿದ ಮೊಲವನ್ನು ಹಿಡಿದೆನೆಂಬ ಮಾತು ಎಲ್ಲರಿಗೂ ಗೊತ್ತಾಗ ಬೇಕು ಎಂದು ಮೊಸಳೆ ಬಯಸಿತು. ಆದ್ದರಿಂದ ಅದು ತನ್ನ ಬಾಲವನ್ನು ನೀರಿನಲ್ಲಿ ಅತ್ತಿತ್ತ ಅಲ್ಲಾ ಡಿಸುತ್ತ, ಹ್ಹಿ ಹ್ಹಿ ಹ್ಹಿ ಎಂದು ನಗುತ್ತ ನದಿಯಲ್ಲಿ ಮೇಲೆ ಕೆಳಗೆ ಈಸಾಡತೊಡಗಿತು.

ಮೊಸಳೆಯ ದವಡೆಯಲ್ಲಿ ಸಿಕ್ಕಿದ್ದ ಮೊಲ ಮೊಸಳೆಯ ನಾಲಿಗೆಗೆ ಅಂಟಿಕೊಂಡು ಕುಳಿ ತಿತ್ತು. ನಾಲಿಗೆಯನ್ನು ತನ್ನ ಕಾಲಲ್ಲಿ ಗಟ್ಟಿ ಯಾಗಿ ಹಿಡಿದುಕೊಂಡು ಮೊಲವು ಮೊಸಳೆಗೆ "ಮಹಾ ಮೂರ್ಖ ಮೊಸಳೆಯೇ, ನೀನು ಗಟ್ಟಿ ಯಾಗಿ ಹ್ಹಿ ಹ್ಹಿ ಹ್ಹಿ ಎಂದು ನಗಬಲ್ಲೆ, ನಿಜ. ಆದರೆ ಎಲ್ಲಿ, ಹ್ಹಾ ಹ್ಹಾ ಹ್ಹಾ ಎಂದು ನಗು ನೋಡೋಣ. ನಿನಗಲ್ಲ, ನಿನ್ನಪ್ಪನಿಗೂ ಅದು ಸಾಧ್ಯವಿಲ್ಲ" ಎಂದು ಮೂದಲಿಸಿ ನುಡಿಯಿತು.

ಮೊಸಳೆಗೆ ಹಟವುಂಟಾಯಿತು. ಈ ಹುಚ್ಚು ಮೊಲದ ಚುಚ್ಚು ನುಡಿಗೆ ತಕ್ಕ ಉತ್ತರ ವೆಂದು ಮೊಸಳೆ ಬಾಯಿ ತೆರೆದು ಹ್ಹಾ ಹ್ಹಾ ಹ್ಹಾ ಎಂದು ನಕ್ಕಿತು. ಮೊಸಳೆ ಬಾಯಿ ತೆರೆದೊಡ ಮೊಲವು ತನ್ನ ಕಾಲಲ್ಲಿ ಹಿಡಿದುಕೊಂಡಿದ್ದ ಮೊಸಳೆಯ ನಾಲಗೆಯನ್ನು ಕಿತ್ತುಕೊಂಡು ಹೊರಗೆ ಜಿಗಿದುಬಿಟ್ಟಿತು. ಅದು ದಂಡೆಯನ್ನು ಸೇರಿ ಮನೆಗೆ ಓಡಿತು.

ಮೊಸಳೆಗೆ ನಾಲಿಗೆ ಇಲ್ಲದಿರಲು ಇದೇ ಕಾರಣ.



# ಅಧ್ಯಾತ್ಮ ಕಾರ್ಯಾಲಯದ ಪ್ರಕಟನೆಗಳು

## ಶ್ರೀ ದಿವಾಕರ ರಂಗನಾಥರ ಅಮೂಲ್ಯ ಗ್ರಂಥಗಳು

| | | |
|---|---|---|
| ೧. | ಅಂತರಾತ್ಮನಿಗೆ ) ೪ನೆಯ ಆವೃತ್ತಿ ) | ರೂ. ೧- ೦-೦ |
| ೨. | ಗೀತೆಯ ಗುಟ್ಟು ( ೪ನೆಯ ಆವೃತ್ತಿ ) | ೨-೧೨-೦ |
| ೩. | ಗೀತಾ ನಿತ್ಯಪಾಠ ( ೨ನೆಯ ಆವೃತ್ತಿ ) | ೦- ೬-೦ |
| ೪. | ಉಪನಿಷತ್ಪ್ರಕಾಶ ( ೫ನೆಯ ಆವೃತ್ತಿ ) | ೩- ೮-೦ |
| ೫. | ಛಾಂದೋಗ್ಯೋಪನಿಷತ್ತು ( ೧ನೆಯ ಆವೃತ್ತಿ ) | ೩- ೮-೦ |
| ೬. | ಬೃಹದಾರಣ್ಯಕೋಪನಿಷತ್ತು ( ೧ನೆಯ ಆವೃತ್ತಿ ) | ೩- ೮-೦ |
| ೭. | ಉಪನಿಷತ್ ರಹಸ್ಯ ( ೨ನೆಯ ಆವೃತ್ತಿ ) | ೩- ೮-೦ |
| ೮. | ಉಪನಿಷತ್ಕಥಾವಲಿ ( ೩ನೆಯ ಆವೃತ್ತಿ ) | ೧- ೬-೦ |
| ೯. | ಭಕ್ತಿ ಸೂತ್ರಗಳು ( ೨ನೆಯ ಆವೃತ್ತಿ ) | ೦-೧೦-೦ |
| ೧೦. | ಕರ್ಮಯೋಗ ( ೨ನೆಯ ಆವೃತ್ತಿ ) | ೧- ೮-೦ |
| ೧೧. | ಹರಿಭಕ್ತಿ ಸುಧೆ ( ೩ನೆಯ ಆವೃತ್ತಿ ) | ೨- ೮-೦ |
| ೧೨. | ರಾಮಕೃಷ್ಣ ಚರಿತಾಮೃತ ( ೩ನೆಯ ಆವೃತ್ತಿ ) | ೩- ೦-೦ |
| ೧೩. | ಬಾಪೂ ( ೩ನೆಯ ಆವೃತ್ತಿ ) | ೨- ೦-೦ |
| ೧೪. | ಗಾಂಧೀಜಿ ( ನಾನು ಕಂಡಂತೆ) ( ೧ನೆಯ ಆವೃತ್ತಿ) | ೧- ೪-೦ |
| ೧೫. | ಸತ್ಯಾಗ್ರಹ ( ೨ನೆಯ ಆವೃತ್ತಿ ) | ೩- ೮-೦ |
| ೧೬. | ಮಹಾತ್ಮರ ಮನೋರಂಗ ( ೨ನೆಯ ಆವೃತ್ತಿ ) | ೩- ೮-೦ |
| ೧೭. | ಸೆರೆಯ ಮರೆಯಲ್ಲಿ ( ೨ನೆಯ ಆವೃತ್ತಿ ) | ೨- ೮-೦ |
| ೧೮. | ವಚನಶಾಸ್ತ್ರ ರಹಸ್ಯ ( ೩ನೆಯ ಆವೃತ್ತಿ ) | ೬- ೦-೦ |
| ೧೯. | ಮಹಾಯೋಗಿ ( ಮಹರ್ಷಿ ಅರವಿಂದರು ) ( ೧ನೆಯ ಆವೃತ್ತಿ ) | ೨- ೮-೦ |
| ೨೦. | ಯಾತ್ರಿಕ ( ಮನೋಹರ ಗ್ರಂಥಮಾಲೆಯ ಪ್ರಕಾಶನ ) | ೨- ೮-೦ |

ದೊರೆಯುವ ಸ್ಥಳ: **ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.**

Edited, printed and published by H. R. Moharay at
the Samyukta Karnatak Press, Koppikar Road, Hubli.

December



As. 1

# ಈ ಸಂಚಿಕೆಯಲ್ಲಿ

ಓದದೆ ಬಿಡಲಾರದ ಲೇಖಗಳಲ್ಲಿ ಕೆಲವು . . .

ರವೀಂದ್ರರು ಬೇಹಾಗ್ ಹಾಡಿದ್ದು

ಕ್ರೈಸ್ತ ಧರ್ಮದ ಕಥೆ

ಲೈಂಗಿಕ ಆಕರ್ಷಣೆಯೆಂದರೇನು ?

ಸಮುದ್ರದಲ್ಲಿ ಸಂಪತ್ತು

ಮೂಗಿನಿಂದ ಕುಸ್ತಿ ಗೆದ್ದ !

ಸೀನನ್ನು ಅಲಕ್ಷಿಸಬೇಡಿರಿ

ನರಭಕ್ಷಕ ವೃಕ್ಷಗಳು !

**ಖಡ್ಗ ನುಂಗುವ ಜೊಂಬ**

. . . ಇತ್ಯಾದಿ

ಲೋಕಶಿಕ್ಷಣ